ಕಾಶ್ಮೀರ ಶಿವಾದ್ವೈತ ಸಿದ್ಧಾಂತ

ಕ್ಷೇಮರಾಜ ವಿರಚಿತ

# ಪ್ರತ್ಯಭಿಜ್ಞಾಹೃದಯ

ಭಾವಾನುವಾದ



ಜಿ. ರುದ್ರಪ್ಪ, ಎಂ.ಎ., ಎಲ್.ಎಲ್.ಬಿ.

## ಕಾಶ್ಮೀರ ಶಿವಾದ್ವೈತ ಸಿದ್ಧಾಂತ

ಕ್ಷೇಮರಾಜ ವಿರಚಿತ

# ಪ್ರತ್ಯಭಿಜ್ಞಾಹೃದಯ

ಭಾವಾನುವಾದ

ಗ್ರಂಥಕರ್ತ
ಜೆ. ರುದ್ರಪ್ಪ, ಎಂ.ಎ., ಎಲ್‌ಎಲ್.ಬಿ.
ವಿಶ್ರಾಂತ ಜಿಲ್ಲಾ ನ್ಯಾಯಾಧೀಶರು

೧೯೭೩.

## ಅ ರ್ಪ ಣ

ಈ ಗ್ರಂಥವು
ನನ್ನ ಆದರಣೀಯ ತಾಯಿ
ಶಾಂತಾದೇವಿಗೆ
ಭಕ್ತಿಯಿಂದ ಅರ್ಪಿತವಾಗಿದೆ.



ಕಾಶ್ಮೀರದ ಮಹಾದೇವಗಿರಿಯಲ್ಲಿ ಶಿವಸೂತ್ರಗಳು ಕೆತ್ತಲ್ಪಟ್ಟಿದ್ದ ಶಿಲಾತಲ ('ಶಂಕರ ಪಲ್')

ಶಿವೋ ದಾತಾ ಶಿವೋ ಭೋಕ್ತಾ
ಶಿವಸ್ಸರ್ವಂ ಇದಂ ಜಗತ್।
ಶಿವೋ ಯಜತಿ ಯಜ್ಞಶ್ಚ
ಯಃ ಶಿವಃ ಸೋಹಂ ಏವಹಿ॥

# ಮುನ್ನುಡಿ

ಭರತಖಂಡದಲ್ಲಿ ಶೈವಸಿದ್ಧಾಂತವು ಅತಿ ಪ್ರಾಚೀನವಾದುದೆಂದು ಪ್ರಸಿದ್ಧವಾಗಿದೆ. ಆದರೆ ಭರತಖಂಡದ ಒಂದೊಂದು ದಿಕ್ಕಿನಲ್ಲಿ ಶೈವ ಸಿದ್ಧಾಂತವು ಒಂದೊಂದು ಪ್ರಕಾರವಾಗಿ ಪ್ರಚಾರದಲ್ಲಿದೆ. ಇದು ಕಾಶ್ಮೀರದಲ್ಲಿ ತ್ರಿಕಶಾಸ್ತ್ರ ಅಥವಾ ಪ್ರತ್ಯಭಿಜ್ಞಾದರ್ಶನವೆಂದೂ ಬಂಗಾಳಾದಲ್ಲಿ ಶಾಕ್ತಸಂಪ್ರದಾಯವೆಂದೂ ತಮಿಳುದೇಶದಲ್ಲಿ ಶೈವ ಸಿದ್ಧಾಂತವೆಂದೂ ಕರ್ಣಾಟಕದಲ್ಲಿ ವೀರಶೈವ ಮತವೆಂದೂ ನಾನಾ ರೂಪದಲ್ಲಿ ಬೆಳೆದುಬಂದಿದೆ. ಈ ಶೈವಪ್ರಭೇದಗಳು ಸಾಂಪ್ರದಾಯಿಕ ವಿಷಯಗಳಲ್ಲಿ ಭಿನ್ನತೆಯುಳ್ಳವುಗಳಾಗಿದ್ದರೂ ಶೈವ ಮತದ ಕೆಲವು ಮೂಲ ತತ್ವಗಳಲ್ಲಿ ಐಕ್ಯತೆಯುಳ್ಳವುಗಳಾಗಿವೆ. ಇವುಗಳಲ್ಲಿ ಕಾಶ್ಮೀರ ಶಿವಾದ್ವೈತ ಸಿದ್ಧಾಂತವು ಶೈವ ಮತದ ತತ್ವಗಳನ್ನು ತನ್ನದೇ ಆದ ಒಂದು ವಿಶಿಷ್ಟ ರೀತಿಯಿಂದ ಪ್ರತಿಪಾದಿಸಿರುತ್ತದೆ. ಈ ಶಾಸ್ತ್ರವನ್ನು ಅಧ್ಯಯನಮಾಡಿದರೆ ಒಟ್ಟಿನಲ್ಲಿ ಶೈವ ಮತದ ಸಮುಷ್ಟಿಸ್ವರೂಪವೂ ಇಡೀ ಶೈವಮತದ ಮೂಲ ತತ್ವಗಳೂ ತಿಳಿಯುತ್ತವೆನ್ನಬಹುದು.

ಕಾಶ್ಮೀರ ಶಿವಾದ್ವೈತ ಸಿದ್ಧಾಂತವು ವಿದ್ವಜ್ಜನರಿಗೆ ಆದರಣೀಯ ವಾಗಿರುವುದಕ್ಕೆ ಕೆಲವು ಮುಖ್ಯ ಕಾರಣಗಳಿವೆ. ಇದು ಪ್ರತ್ಯಭಿಜ್ಞಾ ದರ್ಶನವೆಂದು ಪ್ರಸಿದ್ಧವಾಗಿ 'ಅಖ್ಯಾತಿ' ವಾದ (ಭೇದಾಗ್ರಹ)ವನ್ನು ಅಂಗೀಕರಿಸಿರುತ್ತದೆ. ಈ ಸಿದ್ಧಾಂತದಲ್ಲಿ ಅಭೇದವಾದ, ಭೇದಾಭೇದ ವಾದ, ಭೇದ ವಾದ ಈ ಮೂರು ಬಗೆಯ ತತ್ವ ಶಾಸ್ತ್ರಜ್ಞರ ಸಿದ್ಧಾಂತ ಕ್ರಮಗಳು ಒಂದಕ್ಕೊಂದಕ್ಕೆ ವಿರೋಧವಿಲ್ಲದೆ ಸಮನ್ವಯಪಡಿಸ ಲ್ಪಟ್ಟಿವೆ. ಇದರಲ್ಲಿ ವೈದಿಕ ಸಂಪ್ರದಾಯದವರ ವಿಚಾರ ಧೋರಣೆ

ಯನ್ನು ಕಾಣಬಹುದು. ಇದು ಶೈವ ಮತ್ತು ಶಾಕ್ತ ಸಂಪ್ರದಾಯಗಳಿರುವ ವ್ಯತ್ಯಾಸವನ್ನು ಪರಿಹರಿಸಿ ಶಕ್ತಿಯು ಶಿವಾಭಿನ್ನವೆಂದೇ ಸ್ಥಾಪಿಸಿರುತ್ತದೆ. ಇದರಿಂದ ಪರಾ ಪಶ್ಯಂತೀ ಮಧ್ಯಮಾ ವೈಖರೀ ರೂಪವಾಗಿ ನಾಲ್ಕು ಬಗೆಯಾಗಿರುವ ಶಕ್ತಿಯ ಪ್ರಕಾರಗಳನ್ನು ಉಪಾಸನಾ ಮುಖದಿಂದ ಆರಾಧಿಸುವ ಕ್ರಮದಿಂದ ಶಬ್ದ ಬ್ರಹ್ಮವಾದಿಗಳ ಸರಣಿಯನ್ನು ಇದು ಸೇರಿಸಿಕೊಂಡಿರುತ್ತದೆ. ಉಪನಿಷತ್ತುಗಳ ವಿದ್ಯಾ ಸಂಪ್ರದಾಯಗಳನ್ನು ಈ ಸಿದ್ಧಾಂತವು ತನ್ನದಾಗಿ ಮಾಡಿಕೊಂಡಿರುತ್ತದೆ. ಸಾಧನಾಕ್ರಮದಲ್ಲಿ ಪ್ರಾಣಾಯಾಮಾದಿ ವಿಷಯಗಳನ್ನು ತುಂಬಾ ಚಮತ್ಕಾರವಾಗಿ ಸೇರಿಸಿಕೊಂಡಿರುವುದರಿಂದ ಯೋಗ ಸಂಪ್ರದಾಯದ ಕ್ರಮಗಳು ಇದರಲ್ಲಿ ಅಡಕವಾಗಿವೆ. ಈ ಸಿದ್ಧಾಂತದ ತತ್ವ ಗಣನೆಯಲ್ಲಿ ಸಾಂಖ್ಯರ ಇಪ್ಪತ್ತೈದು ತತ್ವಗಳು ಸೇರಿಹೋಗಿವೆ. ಶೈವಾಗಮಗಳಿಂದ ಈ ದರ್ಶನವು ರೂಪುಗೊಂಡಿದೆ. ಈ ರೀತಿಯಾಗಿರುವ ಪ್ರತ್ಯಭಿಜ್ಞಾದರ್ಶನವು ದಾರ್ಶನಿಕವಾಗಿಯೂ ವೈದೀಕ ಮತ್ತು ಶಾಸ್ತ್ರೀಯ ಪದ್ಧತಿಗಳಿಂದಲೂ ಪರಿಪೂರ್ಣವಾಗಿರುವುದರಿಂದ ಆದರಣೀಯವಾಗಿ ಸನ್ಮಾರ್ಗದರ್ಶಕವಾಗಿರುತ್ತದೆ. ಜಿಜ್ಞಾಸುಗಳು ತಾತ್ವಿಕವಾಗಿ ಅಭ್ಯಾಸಮಾಡುವುದಾದರೆ ಪ್ರತ್ಯಭಿಜ್ಞಾದರ್ಶನವು ನಿಜವಾಗಿಯೂ ಸ್ಫೂರ್ತಿಯನ್ನುಂಟುಮಾಡುವುದಾಗಿದೆ.

ಶಿವಾದ್ವೈತ ಗ್ರಂಥ ಭಂಡಾರದಲ್ಲಿ ಕ್ಷೇಮರಾಜ ವಿರಚಿತ ಪ್ರತ್ಯಭಿಜ್ಞಾಹೃದಯವೆಂಬ ಗ್ರಂಥವು ಕಾಶ್ಮೀರ ಶೈವದ ಮುಖ್ಯಾಂಗವಾದ ಪ್ರತ್ಯಭಿಜ್ಞಾಶಾಸ್ತ್ರವನ್ನು ಸಂಕ್ಷಿಪ್ತವಾಗಿಯೂ ಹೃದಯಂಗಮವಾಗಿಯೂ ತಿಳಿಯಪಡಿಸುವುದಾಗಿದೆ. ಈ ಗ್ರಂಥವು ತಮಿಳು ತೆಲುಗು ಜರ್ಮನಿ ಇಂಗ್ಲೀಷ್ ಭಾಷೆಗಳಲ್ಲಿ ಭಾಷಾಂತರಿಸಲ್ಪಟ್ಟಿದೆ. ಬಹುಜನ ಶೈವರಿರುವ ಕನ್ನಡನಾಡಿನಜನರ ಅವಗಾಹನೆಗಾಗಿ ಈ ಕಾಶ್ಮೀರ ಶಿವಾದ್ವೈತ ಸಿದ್ಧಾಂತದ ತತ್ವಗಳ ಸ್ವರೂಪವನ್ನು ವಿವರಿಸುವ 'ಪ್ರತ್ಯಭಿಜ್ಞಾಹೃದಯ'ದ ಇಪ್ಪತ್ತು ಸೂತ್ರಗಳು ಮತ್ತು ಅವುಗಳ

ವ್ಯಾಖ್ಯಾನದ ಭಾವಾನುವಾದವನ್ನು ಸಮರ್ಪಿಸಿರುತ್ತೇನೆ. ವಿಷಯ ಗಹನವಾಗಿರುವುದರಿಂದ ಈ ಸಿದ್ಧಾಂತದ ಪರಿಭಾಷೆಯನ್ನೇ ಉಪಯೋಗಿಸಿದೆ. ಆದುದರಿಂದ ಕೆಲವು ವಿಚಾರಗಳು ಹೊಸದಾಗಿಯೂ ಕಠಿಣವಾಗಿಯೂ ತೋರಬಹುದು. ಇದನ್ನು ಪರಿಹರಿಸಲು ಕಾಶ್ಮೀರ ಶಿವಾದ್ವೈತದ ಒಟ್ಟು ಸ್ವರೂಪವನ್ನು ವಿಸ್ತಾರವಾದ ಉಪೋದ್ಘಾತದಲ್ಲಿ ವಿವರಿಸಿರುವುದಲ್ಲದೆ ಇದರಲ್ಲಿ ಬರುವ ಪಾರಿಭಾಷಿಕ ಶಬ್ದಗಳ ಅರ್ಥ ವಿವರಣೆಯ ಪಟ್ಟಿಯೊಂದನ್ನೂ ಕೊನೆಯಲ್ಲಿ ಕೊಟ್ಟಿದೆ. ಈ ತತ್ವ ಶಾಸ್ತ್ರದ ವಿಷಯಗಳನ್ನು ನಾನಾಮುಖವಾಗಿ ವಿವೇಚಿಸಿರುವುದರಲ್ಲಿ ಅಲ್ಲಲ್ಲಿ ಪುನರುಕ್ತಿಗಳು ಕಂಡುಬರುವುವು. ಇಲ್ಲಿ ಭಾಷಾ ಶೈಲಿ ಗಿಂತಲೂ ವಿಷಯ ಪ್ರತಿಪಾದನೆಗೆ ಹೆಚ್ಚು ಗಮನ ಕೊಟ್ಟಿರುವುದರಿಂದ ಪುನರುಕ್ತಿಗಳು ಅಪರಿಹಾರ್ಯವಾಗಿವೆಯೆಂದು ಸಹೃದಯರಲ್ಲಿ ವಿಜ್ಞಾಪಿಸುತ್ತೇನೆ.

ಬೆಂಗಳೂರು ಸಂಸ್ಕೃತ ಕಾಲೇಜಿನ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಾಧ್ಯಾಪಕರೂ ವೇದವಿದರೂ ಯೋಗಾಭ್ಯಾಸವನ್ನು ಬಲ್ಲವರೂ ಆದ ಪಂಡಿತವರ್ಯರಾದ ಶ್ರೀಮಾನ್ ವೀರರಾಘವಾಚಾರ್ಯರವರು ಶ್ರಮ ವಹಿಸಿ ಈ ಶೈವ ಸಿದ್ಧಾಂತದ ಸ್ವರೂಪವನ್ನು ಕಾಶ್ಮೀರ ಶೈವ ಗ್ರಂಥಗಳ ಮೂಲಕ ನನಗೆ ಪರಿಚಯಮಾಡಿಸಿಕೊಟ್ಟು ಈ ಗ್ರಂಥ ರಚನೆಗೆ ಸಹಾಯಮಾಡಿದ್ದಕ್ಕಾಗಿ ಅವರಿಗೆ ತುಂಬಾ ಕೃತಜ್ಞನಾಗಿರುತ್ತೇನೆ. ಹಾಗೆಯೇ ಈ ಸಿದ್ಧಾಂತಕ್ಕೆ ಸಂಬಂಧಪಟ್ಟ ಸಂಸ್ಕೃತ ಗ್ರಂಥಗಳನ್ನೊದಗಿಸಿದ ಬೆಂಗಳೂರಿನ 'ಮಿಥಿಕ್ ಸೊಸೈಟಿ' ಅಧಿಕಾರಿಗಳ ಉಪಕಾರವನ್ನು ಇಲ್ಲಿ ಸ್ಮರಿಸದಿರಲಾರೆನು. ಈ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟ ರಾಮ್‌ನಾರಾಯಣ್ ಪ್ರೆಸ್ಸಿನವರಿಗೆ ಉಪಕೃತನಾಗಿರುವೆನು.

ಜೆ. ರುದ್ರಪ್ಪ



## ಉಪೋದ್ಘಾತದ ವಿಷಯಾನುಕ್ರಮಣಿಕೆ

# ಉಪೋದ್ಘಾತ

ಪುಣ್ಯಭೂಮಿಯಾದ ನಮ್ಮ ಭರತಖಂಡಕ್ಕೆ ಉತ್ತರ ದಿಕ್ಕಿನಲ್ಲಿ ಪ್ರಪಂಚಕ್ಕೇ ಹೆಸರುವಾಸಿಯಾದ ಹಿಮಾಲಯಾ ಪರ್ವತಶ್ರೇಣಿಯಲ್ಲಿ ಒಂದು ಪ್ರಾಂತಕ್ಕೆ ಕಾಶ್ಯಪ ಕ್ಷೇತ್ರವೆಂದು ಹೆಸರು. ಈ ಪ್ರದೇಶಕ್ಕೆ ಈಗ ಕಾಶ್ಮೀರ ಎಂದು ಹೆಸರಾಗಿದೆ. ಇದಲ್ಲದೆ ಶ್ರೀರಾಮನು ಲವ ಕುಶ ಎಂಬ ತನ್ನ ಇಬ್ಬರು ಮಕ್ಕಳಿಗೆ ರಾಜ್ಯವನ್ನು ಹಂಚಿಕೊಡಲಾಗಿ ಲವನು ವಾಸವಾಗಿದ್ದ ಸ್ಥಳಕ್ಕೆ ಲವಪುರಿ (ಲಾಹೋರು) ಎಂದೂ ಕುಶನು ವಾಸವಾಗಿದ್ದ ಸ್ಥಳಕ್ಕೆ ಕುಶಪುರಿ (ಕಾಶ್ಮೀರ) ಎಂದೂ ಜನ ಪ್ರವಾದವಿದೆ.

ಕಾಶ್ಮೀರವು ಹಿಮಾಲಯಾ ಪರ್ವತಶ್ರೇಣಿಯಲ್ಲಿ ಉನ್ನತವಾದ ಒಂದು ಪ್ರಾಂತದಲ್ಲಿ ರಮಣೀಯವಾದ ಸರೋವರಗಳಿಂದಲೂ ನದಿಗಳಿಂದಲೂ ಉದ್ಯಾನವನಗಳಿಂದಲೂ ಕೂಡಿದ ಪ್ರಕೃತಿ ಸೌಂದರ್ಯದಿಂದ ಶೋಭಿಸುತ್ತಿದೆ. ಇಲ್ಲಿನ ಪ್ರಕೃತಿ ಸೌಂದರ್ಯವೂ ಹವಾಗುಣವೂ ಪ್ರಪಂಚದ ನಾನಾ ಭಾಗಗಳಿಂದ ಸಾವಿರಾರು ಪ್ರೇಕ್ಷಕರನ್ನು ಆಕರ್ಷಿಸುತ್ತಲಿದೆ. ಅನೇಕ ಕವಿಗಳೂ ಪ್ರವಾಸಿಗಳೂ ಇಲ್ಲಿನ ಪ್ರಕೃತಿ ಸೌಂದರ್ಯದಿಂದ ತಮಗಾದ ಆನಂದಾನುಭವವನ್ನು ಮನಮುಟ್ಟುವಂತೆ ವರ್ಣಿಸಿದ್ದಾರೆ. ಇಂತಹ ಪ್ರಕೃತಿ ಸೌಂದರ್ಯಾತಿಶಯಗಳಿಗಾಕರವಾದ ಕಾಶ್ಮೀರವು ಹಿಂದಿನ ಕಾಲದಲ್ಲಿ ವಿದ್ಯಾವಂತರಿಗೂ ಧರ್ಮಕ್ಕೂ ಸಂಸ್ಕೃತಿಗೂ ಆಶ್ರಯವಾಗಿತ್ತು. ಸರಸ್ವತೀಪೀಠವೆಂದು ಹೆಸರು ಪಡೆದಿತ್ತು. ಇಲ್ಲಿನ ವಾತಾವರಣವು ಯೋಗಿಗಳಿಗೂ, ತಪಸ್ವಿಗಳಿಗೂ ಸಿದ್ಧರಿಗೂ ಅನುಕೂಲವಾಗಿತ್ತು. ಅನೇಕ ಸಿದ್ಧಪುರುಷರು ಈ ಪ್ರಾಂತದಲ್ಲಿ ಸಾಧನಾಭ್ಯಾಸಗಳನ್ನುಮಾಡಿ ಕೃತಾರ್ಥರಾಗಿರುತ್ತಾರೆ. ಈ ರಮಣೀಯವಾದ ದೇಶದಲ್ಲಿ ಶಿವಾದ್ವೈತ ಸಿದ್ಧಾಂತವು ಕ್ರಿ. ಶ. ಒಂಭತ್ತನೆಯ ಶತಮಾನದಲ್ಲಿ ಆರಂಭವಾಗಿ ಹನ್ನೊಂದನೆಯ ಶತಮಾನದ ಅಂತ್ಯದವರೆಗೂ ಸುವ್ಯವಸ್ಥಿತ ಕ್ರಮ

ದಲ್ಲಿ ಬೆಳೆದುಬಂದು ತನ್ನದೇ ಆದ ವಿಶಿಷ್ಟರೀತಿಯ ದಾರ್ಶನಿಕ ತತ್ವ ಶಾಸ್ತ್ರವೆಂದು ಪ್ರಸಿದ್ಧವಾಗಿದೆ.

ಕಾಶ್ಮೀರ ಶಿವಾದ್ವೈತ ಸಿದ್ಧಾಂತವನ್ನು ಪ್ರಕಾಶಕ್ಕೆ ತಂದವರಲ್ಲಿ ಮೊದಲನೆಯವನು ಸಿದ್ಧಪುರುಷನಾದ ವಸುಗುಪ್ತನು. ಈತನು ಈಗಿನ ಶ್ರೀನಗರದ ಹತ್ತಿರ ಇರುವ ಮಹಾದೇವಗಿರಿಯೆಂಬ ಕ್ಷೇತ್ರದಲ್ಲಿ ವಾಸ ವಾಗಿದ್ದನು. ಒಂದು ದಿವಸ ರಾತ್ರಿ ಈತನ ಸ್ವಪ್ನದಲ್ಲಿ ಪರಮಶಿವನೇ ಬಂದು "ಇಲ್ಲಿಗೆ ಸಮೀಪದಲ್ಲಿರುವ ಶಿಲಾತಲದಲ್ಲಿ ಶಿವಾದ್ವೈತ ಸಿದ್ಧಾಂತವನ್ನು ಪ್ರತಿಪಾದನೆ ಮಾಡುವ ಶಿವಸೂತ್ರಗಳು ಕೆತ್ತಲ್ಪಟ್ಟಿವೆ. ಆ ಸೂತ್ರಗಳನ್ನು ನೀನು ಉದ್ಧಾರಮಾಡಿ ಯೋಗ್ಯರಾದ ಶಿಷ್ಯರುಗಳಲ್ಲಿ ಪ್ರಚಾರಮಾಡು" ಎಂದು ಹೇಳಲಾಗಿ ಅದೇ ರೀತಿ ವಸುಗುಪ್ತನು ಆ ಶಿಲಾತಲವನ್ನು ಹುಡುಕಿ ಮುಟ್ಟಿದ ಮಾತ್ರದಿಂದಲೇ ತಿರುಗಿದ ಆ ಬಂಡೆಯಮೇಲೆ ಕೆತ್ತಿದ್ದ ಶಿವಸೂತ್ರಗಳನ್ನುದ್ಧರಿಸಿ ಯೋಗ್ಯರಾದ ಶ್ರೀ ಕಲ್ಲಟ ಮೊದಲಾದ ಉತ್ತಮ ಶಿಷ್ಯರಲ್ಲಿ ಪ್ರಕಾಶಪಡಿಸಿದನು. ಮತ್ತು ಸ್ಪಂದಕಾರಿಕೆಗಳನ್ನು ಬರೆದು ಈ ಸೂತ್ರಾರ್ಥಗಳನ್ನು ಪ್ರಚಾರಮಾಡಿ ದನು. ಈ ವಿಷಯದಲ್ಲಿ ಇನ್ನೊಂದು ಪ್ರವಾದವುಂಟು. ಸ್ವಪ್ನದಲ್ಲಿ ಶಿವನೇ ಸಿದ್ಧಪುರುಷನ ರೂಪದಿಂದ ಬಂದು ಶಿವಸೂತ್ರಗಳನ್ನು ವಸು ಗುಪ್ತನಿಗೆ ಉಪದೇಶಿಸಿದನೆಂದೂ ಅವುಗಳನ್ನು ವಸುಗುಪ್ತನು ಯೋಗ್ಯ ರಾದವರಲ್ಲಿ ಪ್ರಚಾರಮಾಡಿದನೆಂದೂ ಹೇಳುತ್ತಾರೆ. ಏನೇ ಆಗಲಿ ಕಾಶ್ಮೀರದ ಶಿವಾದ್ವೈತ ಸಿದ್ಧಾಂತಕ್ಕೆ ಈಗ ಪ್ರಚಾರದಲ್ಲಿರುವ ಶಿವ ಸೂತ್ರಗಳೇ ಮೂಲವೆಂಬುದರಲ್ಲಿ ಸಂದೇಹವಿಲ್ಲ. ಮಹಾದೇವಗಿರಿ ಯಲ್ಲಿ ಇಂದಿಗೂ ಶಿವಸೂತ್ರಗಳು ಕೆತ್ತಿದ್ದ ಬಂಡೆಯನ್ನು ತೋರಿಸು ತ್ತಾರೆ. ಅದಕ್ಕೆ ಶಂಕರಪಲ್ (ಶಂಕರೋಪಲ) ಎಂದು ಹೆಸರು. ಅದರ ಪ್ರತಿಕೃತಿಯನ್ನು ಈ ಪುಸ್ತಕದ ಪ್ರಾರಂಭದಲ್ಲಿ ನೋಡಬಹುದು.

ವಸುಗುಪ್ತನ ತರುವಾಯ ಕಲ್ಲಟ ಸೋಮಾನಂದ ಮೊದಲಾದ ಪಂಡಿತರು ಅನೇಕ ಗ್ರಂಥಗಳನ್ನು ಬರೆದು ಈ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾರೆ. ಸೋಮಾನಂದನು 'ಶಿವದೃಷ್ಟಿ' ಎಂಬ ಉದ್ಗ್ರಂಥ

ವನ್ನೂ ಉತ್ಪಲಾಚಾರ್ಯರು 'ಪ್ರತ್ಯಭಿಜ್ಞಾಕಾರಿಕಾ' ಎಂಬ ಪ್ರಕರಣ ಗ್ರಂಥವನ್ನೂ ಬರೆದಿರುತ್ತಾರೆ. ಅಭಿನವಗುಪ್ತಾಚಾರ್ಯರು ಈ ಸಿದ್ಧಾಂತವನ್ನು ಕುರಿತು ಅನೇಕ ಸ್ವತಂತ್ರ ಗ್ರಂಥಗಳನ್ನು ಬರೆದಿರುವುದಲ್ಲದೆ ಉತ್ಪಲಾಚಾರ್ಯರ ಪ್ರತ್ಯಭಿಜ್ಞಾಕಾರಿಕೆಗಳಿಗೆ ಈಶ್ವರ ಪ್ರತ್ಯಭಿಜ್ಞಾವಿಮರ್ಶಿನಿಯೆಂಬ ಸರ್ವಾಂಗಸುಂದರವಾದ ಟೀಕೆಯನ್ನು ಬರೆದಿರುತ್ತಾರೆ. ಇವರು ನೈಷ್ಠಿಕ ಬ್ರಹ್ಮಚಾರಿಗಳಾಗಿ ಅನೇಕ ಪಂಡಿತರಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡಿ ತತ್ವ ಸಾಕ್ಷಾತ್ಕಾರವನ್ನು ಪಡೆದ ಸಿದ್ಧಪುರುಷರು. ಸಾವಿರಾರು ಶಿಷ್ಯರಿಗೆ ಜ್ಞಾನ ಬೋಧೆಯನ್ನು ಮಾಡಿರುತ್ತಾರೆ. ಅಷ್ಟೇ ಅಲ್ಲದೆ ಅಲಂಕಾರ ಶಾಸ್ತ್ರದಲ್ಲಿಯೂ ನಾಟ್ಯಶಾಸ್ತ್ರದಲ್ಲಿಯೂ ಉದ್ಗ್ರಂಥಗಳನ್ನು ರಚಿಸಿರುತ್ತಾರೆ. ಇಂದಿಗೂ ಇವರ ಗ್ರಂಥಗಳು ಪಂಡಿತರ ಪ್ರಶಂಸೆಗೆ ಪಾತ್ರಗಳಾಗಿವೆ.

ಪ್ರತ್ಯಭಿಜ್ಞಾಕ್ರಮವನ್ನನುಸರಿಸಿ ಅನೇಕ ಗ್ರಂಥಗಳು ಬರೆಯಲ್ಪಟ್ಟಿವೆ. ಅವುಗಳಲ್ಲಿ ಸೋಮಾನಂದರ 'ಶಿವದೃಷ್ಟಿ' ಉತ್ಪಲಾಚಾರ್ಯರ 'ಪ್ರತ್ಯಭಿಜ್ಞಾಕಾರಿಕಾ' ಇವು ಮುಖ್ಯವಾದವುಗಳು. ಒಂಭತ್ತನೆಯ ಶತಮಾನದಲ್ಲಿ ವಸುಗುಪ್ತನಿಂದ ಪ್ರಾರಂಭವಾದ ಈ ಸಿದ್ಧಾಂತ ಪ್ರಚಾರವು ಹನ್ನೊಂದನೆ ಶತಮಾನದಲ್ಲಿದ್ದ ಅಭಿನವಗುಪ್ತಾಚಾರ್ಯರ ಶಿಷ್ಯನಾದ ಮಹಾಮಹೇಶ್ವರಾಚಾರ್ಯ ಕ್ಷೇಮರಾಜನವರೆಗೂ ಪುಂಖಾನುಪುಂಖವಾಗಿ ಬೆಳೆದುಬಂದಿರುತ್ತದೆ. ಈ ಕ್ಷೇಮರಾಜನು ಶಿವಸೂತ್ರಗಳಿಗೆ 'ಶಿವಸೂತ್ರ' ವಿಮರ್ಶಿನಿ ಎಂಬ ಟೀಕೆಯನ್ನು ಬರೆದಿರುತ್ತಾನೆ. ಈತನು ಪ್ರತ್ಯಭಿಜ್ಞಾ ಶಾಸ್ತ್ರವನ್ನು ಕುರಿತು ಇನ್ನೂ ಅನೇಕ ಗ್ರಂಥಗಳನ್ನು ಬರೆದಿರುತ್ತಾನೆ. ಪ್ರತ್ಯಭಿಜ್ಞಾ ಶಾಸ್ತ್ರದ ತತ್ವವನ್ನು ಸಂಗ್ರಹವಾಗಿ ತಿಳಿಸುವುದಕ್ಕಾಗಿ ಪ್ರತ್ಯಭಿಜ್ಞಾಹೃದಯವೆಂಬ ಗ್ರಂಥವನ್ನು ರಚಿಸಿರುತ್ತಾನೆ. ಇದರಲ್ಲಿ ಕೇವಲ ಇಪ್ಪತ್ತು ಸೂತ್ರಗಳಲ್ಲಿ ಶಾಸ್ತ್ರಾರ್ಥಗಳನ್ನು ಸಂಗ್ರಹಿಸಿ ಇದಕ್ಕೆ ತಾನೇ ಒಂದು ವ್ಯಾಖ್ಯಾನವನ್ನು ಬರೆದಿರುತ್ತಾನೆ. ಈ ಪ್ರತ್ಯಭಿಜ್ಞಾಹೃದಯದ ಕನ್ನಡ ಭಾವಾನುವಾದವನ್ನು ಈ ಗ್ರಂಥದಲ್ಲಿ ನಿರೂಪಿಸಿದೆ.

## ತ್ರಿಕಶಾಸ್ತ್ರ

ಈ ಶಿವಾದ್ವೈತ ಸಿದ್ಧಾಂತವನ್ನು ತ್ರಿಕಶಾಸ್ತ್ರ, ಸ್ಪಂದಶಾಸ್ತ್ರ, ಪ್ರತ್ಯಭಿಜ್ಞಾಶಾಸ್ತ್ರ ಎಂದು ಕರೆಯುವ ವಾಡಿಕೆ ಇದೆ. ತ್ರಿಕಶಾಸ್ತ್ರವೆಂದರೆ ಪತಿ, ಪಶು, ಪಾಶ ಎಂಬ ಮೂರು ಪ್ರಧಾನ ವಿಭಾಗಗಳುಳ್ಳ ಶಾಸ್ತ್ರವೆಂದರ್ಥ. ಪತಿ ಎಂದರೆ ಪರಮಶಿವ. ಪಶು ಎಂದರೆ ಬದ್ಧ ಜೀವ. ಪಾಶ ಎಂದರೆ ಪರಮಶಿವನಿಂದ ಜೀವನನ್ನು ಬೇರ್ಪಡಿಸಿ ಜೀವನನ್ನು ಸಂಸಾರಾವಸ್ಥೆಯಲ್ಲಿಟ್ಟಿರುವ ಬಂಧ. ಜೀವನು ಶಿವನಿಂದ ತಾನು ಬೇರೆಯಲ್ಲವೆಂದು ತಿಳಿದಾಗ ಪಾಶವು ಮಾಯವಾಗುವುದು. ಪಾಶವನ್ನು ಮಲವೆಂದು ಕರೆಯುವುದು ಈ ಸಂಪ್ರದಾಯದಲ್ಲಿ ಸಾಮಾನ್ಯ ವಿಷಯ. ಮಲ ನಿವೃತ್ತಿಯಿಂದ ಮೋಕ್ಷ ಪ್ರಾಪ್ತಿಯೆಂಬುದು ಈ ಮತದ ಗುರಿ. ಇದರಿಂದ ಇದಕ್ಕೆ ಪಾಶುಪತ ಮತವೆಂದು ಹೆಸರಾಯಿತು.

## ಸ್ಪಂದಶಾಸ್ತ್ರ

ಪರಿಪೂರ್ಣನಾದ ಶಿವನು ಪರಿಮಿತವಾದ ವಿಶ್ವವನ್ನು ಪ್ರಕಾಶಪಡಿಸಬೇಕಾದರೆ ತನ್ನ ಮೊದಲನೆಯ ಸ್ಥಿತಿಯಿಂದ ಶಕ್ತಿಗಳನ್ನು ಪ್ರಸರಿಸಬೇಕು. ಹೀಗೆ ಪ್ರಸರಿಸುವುದರಲ್ಲಿ ಮೊದಲನೆಯ ಸ್ಫುರಣವೇ ಸ್ಪಂದ. ಸ್ಪಂದ, ಕಂಪನ, ಚಲನ, ಸ್ಫುರತ್ತಾ, ಉನ್ಮೇಷ ಇವೆಲ್ಲವೂ ಒಂದೇ ಅರ್ಥವನ್ನು ಸೂಚಿಸುತ್ತವೆ. ಮೂಲದಲ್ಲಿ ವಿಕಾರವಿಲ್ಲದೆ ಶಕ್ತಿಯ ವಿಲಾಸವನ್ನು ತೋರ್ಪಡಿಸುವಿಕೆಯೇ ಸ್ಪಂದ. ವಿಶ್ವದ ಭೇದಗಳು ಅನಂತವಾಗಿದ್ದು ಸ್ಪಂದ ಶಕ್ತಿಯ ಮಹಿಮೆಯಿಂದ ಪ್ರತಿಯೊಂದು ಪದಾರ್ಥವು ಭಿನ್ನ ಭಿನ್ನವಾಗಿ ಗುಣ, ಕ್ರಿಯೆ, ಆಕಾರ, ವ್ಯವಹಾರ ಪರಿಣಾಮ ಇವುಗಳಿಂದ ಬೇರೆಬೇರೆಯಾಗಿ ತೋರುತ್ತಿರುತ್ತವೆ. ಪದಾರ್ಥಗಳ ತಾರತಮ್ಯವು ಸ್ಪಂದದ ಮಿತಿಯಿಂದಲೇ ರೂಪುಗೊಂಡಿದೆ. ಸ್ಪಂದ ದೃಷ್ಟಿಯಿಂದ ಪ್ರತಿಯೊಂದು ವ್ಯಕ್ತಿಯನ್ನೂ ಸ್ಪಂದದ ಮಿತಿಯಿಂದ ಪ್ರತಿಯೊಂದು ಪದಾರ್ಥವನ್ನೂ ಅರಿಯುವುದರಿಂದ ಐಕ್ಯ ಮತ್ತು ಭಿನ್ನತೆಗಳು ಒಂದರಲ್ಲೇ ಅಡಗಿರುತ್ತವೆಂಬುದೂ

ವಿಶ್ವದ ವ್ಯವಹಾರಗಳೆಲ್ಲಾ ಸ್ಪಂದದ ತಾರತಮ್ಯಗಳಿಂದ ನಡೆಯು ತ್ತಿರುತ್ತವೆಂಬುದೂ ಗೋಚರವಾಗುತ್ತದೆ. ಈ ವಿಧವಾದ ತಿಳಿವಳಿಕೆ ಯಿಂದ ತನ್ನ ಪರಿಮಿತಿ, ತನ್ನ ಯೋಗ್ಯತೆ, ತನ್ನ ಶಕ್ತಿ, ತನ್ನ ಅರಿವು ಚೆನ್ನಾಗಿ ಗೊತ್ತಾಗುತ್ತದೆ. ಸತ್ವ ರಜಸ್ತಮಸ್ಸುಗಳ ಪ್ರಭಾವವು ಚಿತ್ ಸ್ಪಂದದಿಂದಲೇ ಹೊರಟಿರುವುದಾದರೂ ಎಷ್ಟೇ ವಿಕಾರಗಳನ್ನು ಹೊಂದಿದ್ದರೂ ವಿಶ್ವವು ಶಿವಾಭಿನ್ನವಾಗಿದೆಯೆಂದೂ ವಿಶ್ವದ ವ್ಯವಹಾರ ವೆಲ್ಲಾ ಸ್ಪಂದದ ಚಮತ್ಕಾರವೆಂದೂ ಪರಿಪೂರ್ಣನಾದ ಶಿವನಲ್ಲಿ ಯಾವ ವ್ಯತ್ಯಾಸವೂ ಉಂಟಾಗುವುದಿಲ್ಲವೆಂದೂ ತಿಳಿದು ಸ್ಪಂದ ತತ್ವದ ಸ್ವರೂಪವನ್ನು ಅನುಸಂಧಾನ ಮಾಡುವವನಿಗೆ ಸ್ವರೂಪವಿಕಾಸ ವೇರ್ಪಡುತ್ತದೆ. ಸುಖ ದುಃಖ ಗ್ರಾಹ್ಯಗ್ರಾಹಕಭಾವ ಮೌಢ್ಯ ಇವುಗಳಿಲ್ಲದಿರುವ ಸ್ಥಿತಿಯೇ ಸ್ವಸ್ವರೂಪ - ಅದೇ ಪರಮಾರ್ಥ. ಎಲ್ಲಾ ವ್ಯತ್ಯಾಸಗಳೂ ಸ್ಪಂದ ಶಕ್ತಿಯ ವಿಲಾಸಗಳು.

ನ ದುಃಖಂ ನ ಸುಖಂ ಯತ್ರ
ನ ಗ್ರಾಹ್ಯೋ ಗ್ರಾಹಕೋನಚ
ನ ಚಾಸ್ತಿ ಮೂಢ ಭಾವೋಪಿ
ತದಸ್ತಿ ಪರಮಾರ್ಥತಃ ಸ್ಪಂದಕಾರಿಕಾ.

## ಪ್ರತ್ಯಭಿಜ್ಞಾಶಾಸ್ತ್ರ

ಪ್ರತ್ಯಭಿಜ್ಞಾಶಾಸ್ತ್ರ ಎಂಬುದರಲ್ಲಿ 'ಪ್ರತ್ಯಭಿಜ್ಞಾ' ಎಂಬ ಪದವು ಕಾಶ್ಮೀರ ಶಿವಾದ್ವೈತ ಶಾಸ್ತ್ರದ ರಹಸ್ಯವನ್ನು ಸೂಚಿಸುತ್ತದೆ. ಪ್ರತ್ಯ ಭಿಜ್ಞಾ ಎಂದರೆ 'ಅವನೇ ನಾನು' – 'ಆ ಶಿವನೇ ನಾನು' ಎಂದು ಮಲಾವೃತನಾದ ಜೀವನು ತನ್ನ ಸಹಜಸ್ವರೂಪವನ್ನು ಗುರುತಿಸು ವುದು. ಎಲ್ಲಾ ಪ್ರಾಣಿಗಳೂ ಪ್ರತ್ಯಭಿಜ್ಞಾ ಎಂಬ ಅಂಶವನ್ನು ಒಂದಲ್ಲ ಒಂದು ರೀತಿ ಅನುಭವಿಸುತ್ತಿವೆ. ನಾವು ಮನೆಯಿಂದ ಹೊರಕ್ಕೆ ಹೋದರೆ ಮರಳಿ ನಾವು ಮನೆಯನ್ನು ಸೇರುವುದು ಪ್ರತ್ಯ ಭಿಜ್ಞೆಯಿಂದಲೇ. ಯಾವ ಮನೆಯಿಂದ ನಾವು ಹೊರಟಿರುವೆವೋ

ಅದೇ ಮನೆ ಇದು ಎಂಬ ದೃಢವಾದ ತಿಳಿವಳಿಕೆ ಬರದಿದ್ದರೆ ನಾವು ಆ ಮನೆಯೊಳಕ್ಕೆ ಬರುತ್ತಿರಲಿಲ್ಲ. 'ಗ್ರಹಣ ಸ್ಮರಣಯೋಃ ಐಕ್ಯಂ ಪ್ರತ್ಯಭಿಜ್ಞಾ' ಎಂಬಂತೆ ಈಗ ನೋಡಿದ್ದು ಹಿಂದೆ ನೋಡಿದ್ದು ಎರಡೂ ಒಂದೇ ಎಂಬ ತಿಳಿವಳಿಕೆಯೇ ಪ್ರತ್ಯಭಿಜ್ಞಾ ಎನ್ನಿಸುವುದು. ಇದನ್ನು ಪ್ರತ್ಯಕ್ಷಮೂಲಕವಾದ ಪ್ರತ್ಯಭಿಜ್ಞೆ ಎನ್ನಬಹುದು.

ನಾವು ಒಬ್ಬ ಮನುಷ್ಯನ ಕಥೆಯನ್ನು ಕೇಳಿರುತ್ತೇವೆ. ಅವನ ಸ್ವರೂಪ ಸ್ವಭಾವಗಳನ್ನು ಪರೋಕ್ಷವಾಗಿ ತಿಳಿದಿರುತ್ತೇವೆ. ಅನುಮಾನದಿಂದ ಅವನು ಇಂತಹವನಿರಬಹುದೆಂದು ಊಹಿಸಿಯೂ ಇರುತ್ತೇವೆ. ಯಾವುದೋ ಒಂದು ಸಮಯದಲ್ಲಿ ಅದೇ ವ್ಯಕ್ತಿಯೊಡನೆ ನಾವು ವ್ಯವಹರಿಸುತ್ತಿದ್ದರೂ ನಾವು ಕೇಳಿರುವ ಮನುಷ್ಯನು ಇವನೇ ಎಂಬ ಜ್ಞಾನವು ನಮಗುಂಟಾಗುವುದಿಲ್ಲ. ಅವನ ಪರಿಚಯವಿರುವವರು 'ಅವನೇ ಇವನು' ಎಂದು ನಮ್ಮನ್ನೆಚ್ಚರಿಸಿದರೆ ಆಗ ಹಿಂದೆ ಕೇಳಿದ ಕಥೆಯನ್ನು ಜ್ಞಾಪಿಸಿಕೊಂಡು 'ಸೋಽಯಂ ದೇವದತ್ತಃ' ಎಂಬಂತೆ ಅವನೇ ಇವನು ಎಂದು ಗುರುತಿಸುತ್ತೇವೆ. ಇದು ಎಲ್ಲರ ಅನುಭವದಲ್ಲಿರುವ ವಿಷಯ. ಒಬ್ಬ ಮಿತ್ರನನ್ನು ನೋಡಿ ಬಹಳ ದಿವಸಗಳಾಗಿದ್ದರೆ ಅವನು ಎದುರಿಗೆ ಬಂದಾಗ ಒಡನೆಯೇ ಗುರುತಿಸುವುದಕ್ಕಾಗದಿದ್ದರೂ ಅವನ ರೂಪು, ಕಂಠಧ್ವನಿ, ಮಾತಿನ ಶೈಲಿ ಮುಂತಾದವುಗಳಿಂದ ಅನುಮಾನಿಸಿ 'ಓಹೋ! ನೀವು ಇಂಥಾವರಲ್ಲವೇ! ನನಗೆ ಗುರುತೇ ಸಿಕ್ಕಲಿಲ್ಲವಲ್ಲ' ಅಂತ ಸಂಕೋಚಪಡುವುದು ಬಳಕೆಯಲ್ಲಿದೆ. ಶಾಸ್ತ್ರಜ್ಞರು 'ವ್ಯಾಧಕುಮಾರನ್ಯಾಯ'ವನ್ನು ಈ ಪ್ರತ್ಯಭಿಜ್ಞೆಗೆ ದೃಷ್ಟಾಂತವಾಗಿ ಉಪಯೋಗಿಸುತ್ತಾರೆ. ಒಬ್ಬ ರಾಜನು ತನ್ನ ಚಿಕ್ಕಮಗನೊಡನೆ ಬೇಟೆಗೆ ಹೋಗಿದ್ದನು. ಬೇಟೆಯಲ್ಲಿ ಮೃಗಗಳನ್ನಟ್ಟಿಕೊಂಡು ಬಹುದೂರ ಹೋದಾಗ ಆ ಮಗು ಆಟವಾಡುವುದಕ್ಕೆ ಹೋಗಿದ್ದು ತಪ್ಪಿಸಿಕೊಂಡನು. ರಾಜನು ಹುಡುಕಿ ಹುಡುಕಿ ಬೇಸತ್ತು ಮಗನನ್ನು ಕಾಣದೆ ಎಲ್ಲೋ ಕಾಡುಮೃಗಗಳಿಗೆ ತುತ್ತಾಗಿರಬಹುದೆಂದು ತಿಳಿದು ಮನೆಗೆ ಸೇರಿದನು. ಆ ಮಗುವನ್ನು ಅಲ್ಲಿನ ಬೇಡರು ಚಿಕ್ಕಂದಿನಿಂದ ಸಾಕಿದರು. ಅವನು ಯೌವನಸ್ಥನಾದನು.

ಹತ್ತಾರು ವರ್ಷಗಳು ಕಳೆದನಂತರ ಅದೇ ಕಾಡಿಗೆ ಆ ಮಗುವನ್ನು ನೋಡಿದ್ದ ಸರದಾರನೊಬ್ಬನು ಬೇಟೆಗೆ ಬಂದನು. ಬೇಡರ ಮಧ್ಯೆ ಇದ್ದ ಆ ಹುಡುಗನನ್ನು ನೋಡಿ ಇವನ ರೂಪು ಲಾವಣ್ಯಗಳಿಂದ ಇವನು ಬೇಡರ ಮನೆತನದಲ್ಲಿ ಹುಟ್ಟಿದವನಲ್ಲವೆಂದೂಹಿಸಿ ಹಿಂದೆ ರಾಜ ನೊಡನೆ ಬಂದಾಗ ಕಳೆದುಕೊಂಡಿದ್ದ ಮಗುವೇ ಇವನಿರಬಹುದೆಂದು ನಿಶ್ಚಯಿಸಿಕೊಂಡು ಯುಕ್ತಿಯಿಂದ ಆ ಹುಡುಗನನ್ನು ತನ್ನಲ್ಲಿಗೆ ಬರ ಮಾಡಿಕೊಂಡು ಅದುವರೆಗೂ ಬೇಡರ ಮಗನೆಂದೇ ತಿಳಿದಿದ್ದ ಆ ಹುಡಗನಿಗೆ 'ನೀನು ಬೇಡರ ಮಗನಲ್ಲ, ನೀನು ರಾಜನ ಮಗನು' ಎಂದು ಹಿಂದಿನ ಕಥೆಯನ್ನು ತಿಳಿಸಲಾಗಿ, ತಾನು ರಾಜನ ಮಗನೆಂದು ತಿಳಿದು ಕಾಡಿನಿಂದ ಪಟ್ಟಣಕ್ಕೆ ಹೋಗಿ ರಾಜನಾದನು. ಇದು **ಅನುಮಾನಪ್ರಧಾನವಾದ ಪ್ರತ್ಯಭಿಜ್ಞೆ.** ಸರದಾರನು ಇವನ ರೂಪು ಲಾವಣ್ಯಗಳನ್ನೂ ಚಲನ ವಲನಗಳನ್ನೂ ನೋಡಿ ಇವನು ಬೇಡರ ಹುಡುಗನಲ್ಲವೆಂದು ತಾನು ನಿಶ್ಚಯಿಸಿಕೊಂಡನು. ಅವನ ನಿಶ್ಚಯಕ್ಕೆ ಇಲ್ಲಿ ಅನುಮಾನವೇ ಮುಖ್ಯ. ರಾಜಕುಮಾರನು ತನ್ನನ್ನು ತಾನು ಇಂಥವನೇ ಎಂದು ತಿಳಿದುಕೊಂಡದ್ದು ಸರದಾರನ ಮಾತಿನಿಂದ. ಇದು ಶಬ್ದಪ್ರಮಾಣ. ಹೀಗೆ **ಪ್ರತ್ಯಕ್ಷ, ಅನುಮಾನ, ಶಬ್ದ** ಇವು ಮೂರು ಪ್ರತ್ಯೇಕವಾದ ಘಟನೆಗಳಲ್ಲಿ ಪ್ರಧಾನ ವಾಗಿದ್ದು ಪ್ರತ್ಯಭಿಜ್ಞೆಯನ್ನುಂಟುಮಾಡುತ್ತವೆ. ಮನೆಯನ್ನು ಬಿಟ್ಟು ಹೊರಕ್ಕೆ ಹೋದವನು ಮನೆಯನ್ನು ಸೇರುವ ಪ್ರಸಂಗದಲ್ಲಿ ಪ್ರತ್ಯಕ್ಷ ಪ್ರಮಾಣವು ಪ್ರಧಾನವಾಗಿರುತ್ತದೆ. ಸರದಾರನು ರಾಜಕುಮಾರ ನನ್ನು ಗುರುತಿಸಿದ್ದು ಅನುಮಾನದಿಂದ. ಅನುಮಾನ ಪ್ರಮಾಣವೇ ಇಲ್ಲಿ ಪ್ರಧಾನವಾದದ್ದು. ರಾಜಕುಮಾರನು ತನ್ನನ್ನು ತಿಳಿದ ಪ್ರಸಂಗ ದಲ್ಲಿ ಶಬ್ದ ಪ್ರಮಾಣವೇ ಮುಖ್ಯ. ನಮ್ಮ ತಿಳಿವಳಿಕೆಯಲ್ಲಿ ಪ್ರಮಾಣ ಗಳು ಒಂದರೊಡನೆ ಒಂದು ಸೇರಿಕೊಂಡಿದ್ದರೂ ಯಾವ ಪ್ರಮಾಣವು ಮುಖ್ಯವಾಗಿರುತ್ತದೆಯೋ ಅದನ್ನು ಪ್ರಧಾನವಾಗಿ ವ್ಯವಹರಿಸುತ್ತೇವೆ.

ಇದುವರೆಗೂ ಲೌಕಿಕ ದೃಷ್ಟಾಂತಗಳಿಂದ ಪ್ರತ್ಯಭಿಜ್ಞೆ ಎಂಬುದರ ಅರ್ಥವನ್ನು ಸ್ಥೂಲವಾಗಿ ವಿವರಿಸಿದ್ದಾಯಿತು. ಇನ್ನು ತಾತ್ವಿಕ

ದೃಷ್ಟಿಯಿಂದ 'ಆ ಶಿವನೇ ನಾನು' ಎಂಬುದನ್ನು ಪ್ರತ್ಯಭಿಜ್ಞಾ ಶಾಸ್ತ್ರವು ಹೇಗೆ ನಿರ್ಣಯಿಸುತ್ತದೆಂಬುದನ್ನು ತಿಳಿಯಬಹುದು. ಈ ತತ್ವಶಾಸ್ತ್ರದ ಪ್ರಕಾರ ವಿಶ್ವಕ್ಕೆ ಮೂಲಕಾರಣ ಶಿವನು. ಆತನೊಬ್ಬನೆ ಸ್ವತಂತ್ರನ್ನು, ಸರ್ವಶಕ್ತನು ಮತ್ತು ಅನಂತಶಕ್ತಿಗಳನ್ನೊಳಗೊಂಡಿರು ವವನು. ಭೇದಜ್ಞಾನಕ್ಕೆ ಕಾರಣವಾಗಿರುವ ಈ ಪ್ರಪಂಚವೆಲ್ಲಾ ಆತನ ಸ್ವಾತಂತ್ರ್ಯ ಶಕ್ತಿಯ ವಿಲಾಸ. ಈ ಪ್ರಪಂಚ ಜಡ ಚೇತನ ರೂಪವಾಗಿರಲಿ ಚರಾಚರವಾಗಿರಲಿ ಗ್ರಾಹ್ಯ ಗ್ರಾಹಕರೂಪವಾಗಿರಲಿ ಹೇಗೆ ಇರಲಿ ಇದು ಶಿವನಿಂದ ಬೇರೆಯಲ್ಲ ಆ ಶಿವನು ತನ್ನ ಲೀಲ ಯಿಂದ ಗ್ರಾಹ್ಯ ಗ್ರಾಹಕಭಾವದಿಂದಿರುವ ಈ ವಿಶ್ವವನ್ನು ತನ್ನಲ್ಲಿಯೇ ಪ್ರಕಾಶಪಡಿಸುತ್ತಾನೆ. ಈ ಪ್ರಕಾಶವು ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗ್ರಹಗಳೆಂಬ ಪಂಚಕೃತ್ಯಗಳ ಏರಳಿತಗಳಿಂದ ನಡೆಸ ಲ್ಪಡುತ್ತಿದೆ. ಹಾಗೆಯೇ ಆ ಪರಮಶಿವನು ಸತ್, ಚಿತ್, ಆನಂದ ಇಚ್ಛಾಜ್ಞಾನ ಕ್ರಿಯಾಶಕ್ತಿಗಳಿಂದ ಪರಿಪೂರ್ಣನಾಗಿದ್ದಾನೆ. ಮೂವ ತ್ತಾರು ತತ್ವರೂಪಿಯಾಗಿ ವಿಶ್ವಾತ್ಮಕನಾಗಿದ್ದಾನೆ. ಸಕಲಾ ಪ್ರಳಯಾ ಕಲಾದಿ ಸಪ್ತಪ್ರಮಾತೃವಾಗಿದ್ದಾನೆ. ಪರಾ ಪಶ್ಯಂತೀ ಮಧ್ಯಮಾ ವೈಖರೀ ರೂಪವಾದ ಶಕ್ತ್ಯಾತ್ಮಕನಾಗಿದ್ದಾನೆ. ತನ್ನ ಸ್ವಾತಂತ್ರ್ಯ ಶಕ್ತಿಯ ವಿಲಾಸವು ದೇಶ, ಕಾಲ, ಆಕಾರಗಳಿಂದ ಕೂಡಿದ ವ್ಯವಹಾರ ವನ್ನು ನಡೆಸುತ್ತದೆ. ಅದೇ ದೇಶ, ಕಾಲ, ಆಕಾರಗಳಿಲ್ಲದ ಪ್ರಶಾಂತ ಸ್ಥಿತಿಯನ್ನು ಪಡೆಯುತ್ತದೆ. ಎಂಬವೇ ಮೊದಲಾದ ವಿಚಾರಗಳನ್ನು ಶಾಸ್ತ್ರದಿಂದ ತಿಳಿಯುವುದು ಮೊದಲನೆಯ ಘಟ್ಟ. ತತ್ವಶಾಸ್ತ್ರ ವಿಷಯಗಳನ್ನು ಕೇಳಿ ತಿಳಿಯುವುದರಿಂದ ಜೀವನಿಗೆ ಸ್ವಸ್ವರೂಪದರಿ ವುಂಟಾಗುತ್ತದೆ; ಹಾಗೆಯೇ ತತ್ವ ಸ್ವರೂಪಜ್ಞಾನವೂ ತಿಳಿಯಾಗು ತ್ತದೆ. ಅಧಿಕಾರ ಭೇದದ ವ್ಯತ್ಯಾಸಗಳು ಮನವರಿಕೆಯಾಗುತ್ತವೆ. ಹಿಂದಿನ ಸಂಸ್ಕಾರಗಳಿಂದ ರೂಪುಗೊಂಡ ಇವನ ವ್ಯಕ್ತಿತ್ವದ ನಿಲವು ವಿಶದವಾಗಿ ಗೋಚರಿಸುತ್ತದೆ. ಇಂತಹ ಪೂರ್ಣವಾದ ತಿಳಿವಳಿಕೆ ಯಿಂದ ಇವನು ತನ್ನ ಭಾವೀ ಕಾರ್ಯಕ್ರಮವನ್ನು ನಿರ್ಣಯಿಸಲು ಸಮರ್ಥನಾಗುತ್ತಾನೆ. ಈ ತಿಳಿಯುವಿಕೆ ಪೂರ್ವ ಸಿದ್ಧತೆಯಿಂದ

ತನಗೆ ಬರುತ್ತಿರುವ ಭೇದಜ್ಞಾನಗಳನ್ನು ಮನನಮಾಡಬೇಕು. ಇವುಗಳ ವಿವೇಚನೆಯಿಂದ ಪ್ರಶಾಂತಸ್ಥಿತಿಯು ಅನುಭವಕ್ಕೆ ಬರುತ್ತದೆ. ಪ್ರಶಾಂತಸ್ಥಿತಿ, ಅಪ್ರಶಾಂತಸ್ಥಿತಿ ಈ ಎರಡು ದಶೆಗಳನ್ನೂ ಮನನಮಾಡುವುದಕ್ಕೆ ಸಮರ್ಥನಾದರೆ ತನ್ನಲ್ಲಿ ಯಾವಾಗಲೂ ನಡೆಯುತ್ತಿರುವ ವಿಕಲ್ಪವ್ಯಾಪಾರಗಳಾಗಿರುವ ಸೃಷ್ಟಿ ಸ್ಥಿತಿ ಪ್ರಳಯಗಳನ್ನು ಅನುಸಂಧಾನಮಾಡಬಹುದು. ಇದರಿಂದ ವಿಕಲ್ಪಗಳಿಲ್ಲದಿರುವ ತಿರೋಧಾನವು ಮನವರಿಕೆಯಾಗುತ್ತದೆ. ಅನುಗ್ರಹವನ್ನು ಊಹಿಸಲು ಸಮರ್ಥನಾಗುತ್ತಾನೆ. ಈ ಅಭ್ಯಾಸದಿಂದ ಜಾಗ್ರತ್ ಸ್ವಪ್ನ ಸುಷುಪ್ತಿಗಳವ್ಯತ್ಯಾಸ ಅವುಗಳಲ್ಲಿ ಉಂಟಾಗುತ್ತಿರುವ ಸುಖ ದುಃಖಗಳು ಸ್ಫುಟವಾಗಿ ಗೋಚರಿಸುತ್ತವೆ. ಈ ಎಲ್ಲಾ ವ್ಯಾಪಾರಗಳಿಗೂ ಆಶ್ರಯವಾಗಿರುವ ಚಿತ್ಸ್ವರೂಪವು ನಿರ್ವಿಕಾರವಾದುದೆಂದು ದೃಢ ವಿಶ್ವಾಸವೇರ್ಪಡುತ್ತದೆ. ಶಾಸ್ತ್ರಜ್ಞಾನವು ವಿಮರ್ಶಾಪೂರ್ವಕವಾದ ಮನನದಿಂದ ಅನುಭವಾರೂಢವಾಗಲಾಗಿ ಸ್ವರೂಪಾನುಸಂಧಾನರೂಪವಾದ ಧ್ಯಾನಕ್ಕೆ ಅರ್ಹನಾಗುತ್ತಾನೆ. ಸಾಧಕನು ತನ್ನಲ್ಲಿ ಅನುಭವಕ್ಕೆ ಬರುತ್ತಿರುವ ಭೇದಜ್ಞಾನಗಳನ್ನೂ ಪ್ರಶಾಂತಸ್ಥಿತಿಯನ್ನೂ ಪಂಚಕೃತ್ಯಗಳನ್ನೂ ಜಾಗ್ರತ್ ಸ್ವಪ್ನ ಸುಷುಪ್ತ್ಯಾದಿ ಅವಸ್ಥೆಗಳನ್ನೂ ಧ್ಯಾನಾಭ್ಯಾಸಗಳಿಂದ ಮನನಮಾಡಿ ತಾನು ಶಾಸ್ತ್ರ ತತ್ವದ ವಿಚಾರಸರಣಿಯಿಂದುಂಟಾದ ಸಾತ್ಮೀಕೃತವಾದ ಜ್ಞಾನದಿಂದ ಪ್ರತಿಬೋಧಿತನಾಗಿ ತಾನೇ ಆ ಶಿವನು ಎಂದು ತನ್ನ ಸ್ವರೂಪವನ್ನು ಗುರುತಿಸುವಿಕೆಯೇ ಪ್ರತ್ಯಭಿಜ್ಞೆ. ಹಿಂದೆ ಶಾಸ್ತ್ರಜ್ಞಾನದಿಂದುಂಟಾದ ಅರಿವು ಮತ್ತು ಪರಿಪಾಕದಿಂದ 'ಆ ಶಿವನೇ ನಾನು' ಎಂದು ಏರ್ಪಟ್ಟ ಅನುಭವ ಈ ಎರಡಂಶಗಳ ಐಕ್ಯವೇ ಪ್ರತ್ಯಭಿಜ್ಞಾ.

ಪ್ರತ್ಯಭಿಜ್ಞೆಯನ್ನು ಅನೇಕ ರೀತಿಯಾಗಿ ನಮ್ಮ ಅನುಭವಕ್ಕೆ ಸಮನ್ವಯಪಡಿಸಿಕೊಳ್ಳಬಹುದು. ನಮಗೆ ಪ್ರಪಂಚದಲ್ಲಿ ಜಡ ಚೇತನ, ತಿಳಿಯುವವನು ತಿಳಿಯಲ್ಪಡತಕ್ಕವಸ್ತು (ಗ್ರಾಹಕ ಗ್ರಾಹ್ಯಭೇದ) ಎಂಬ ಪರಸ್ಪರ ವಿರುದ್ಧ ಅಂಶಗಳು ತೋರುತ್ತಿವೆ. ಇಲ್ಲಿ ಗ್ರಾಹಕಾನುಭವ ಗ್ರಾಹ್ಯಾನುಭವಗಳನ್ನು ಅಂತರನುಭವ ಬಾಹ್ಯಾನುಭವ ಎಂಬ

ದಾಗಿ ಹೇಳಬಹುದು. ಹೊರಗಿನ ಎಲ್ಲಾ ಅನುಭವಗಳೂ ದೇಶ, ಕಾಲ, ಆಕಾರ ಈ ಮೂರು ಧರ್ಮಗಳಿಂದ ಕೂಡಿರುತ್ತವೆ. ಆ ಅನು ಭವಗಳು ಜ್ಞಾಪಕಕ್ಕೆ ಬರುವಾಗ್ಗೆ ಈ ಮೂರು ಧರ್ಮಗಳನ್ನೊ ಗೊಂಡೇ ಬರುತ್ತವೆ. ನಾವು ಪೇಟೆಯಲ್ಲಿ ಒಂದು ವಸ್ತುವನ್ನು ಕಳೆ ತಿಂಗಳು ನೋಡಿದ್ದೆವು ಅನ್ನೋಣ. ಆ ಪದಾರ್ಥವು ಜ್ಞಾಪಕಕ್ಕೆ ಬರುವಾಗ ಪೇಟೆಯಲ್ಲಿ ಯಾವ ಸ್ಥಳದಲ್ಲಿ ನೋಡಿದ್ದೆವೋ ಆ ಸ್ಥಳ ಜ್ಞಾನವೂ (ದೇಶ) ಆ ಸಮಯ ಜ್ಞಾನವೂ (ಕಾಲ) ಆ ಪದಾರ್ಥ ಸ್ವರೂಪ ಜ್ಞಾನವೂ (ಆಕಾರ) ಆಗುತ್ತವೆ ಅಥವಾ ಬರುತ್ತವೆ. ಕಾಲಾಂತರದಲ್ಲಿ ಬೊಂಬಾಯಿನಲ್ಲಿಯೋ ಕಲ್ಕತ್ತಾದಲ್ಲಿಯೋ ನಾವು ನೋಡಿದ್ದ ಸ್ನೇಹಿತನನ್ನು ಕಂಡರೆ ಅಪ್ರಕೃತವಾಗಿರುವ ಆ ಊರಿನ ದೇಶಜ್ಞಾನವೂ ಬರುತ್ತದೆ. ಈ ಕ್ರಮದಲ್ಲಿ ಮೊದಲು ಆಕಾರ, ತರು ವಾಯ ದೇಶ, ಹಾಗೆಯೇ ವಿವೇಚಿಸಿದರೆ ಕಾಲ, ಹೀಗೆ ಮೂರು ಧರ್ಮಗಳೂ ಮೂರೆಲೆಗಳಿಂದ ಕೂಡಿದ ಮುತ್ತುಗದೆಲೆಯಂತೆ ಒಟ್ಟಾಗಿ ಸೇರಿರುವ ತ್ರಿಪುಟಿಯಾಗಿರುತ್ತದೆ. ಇದು ಬಾಹ್ಯಾನುಭವದ ವಿವೇಚನೆ. ಇದಕ್ಕೆ ವಿರುದ್ಧವಾಗಿ ಅಂತರನುಭವ ಅಥವಾ ಗ್ರಾಹ ಕಾನುಭವವು ದೇಶ ಕಾಲ ಆಕಾರಗಳಿಂದ ದೂರವಾಗಿರುತ್ತದೆ. ದೇಶ ಕಾಲ ಆಕಾರರಹಿತವಾಗಿರುವ 'ನಾನು' ಎನ್ನುವ ('ಅಹಂ') ಅನು ಭವವು ಕೇವಲ ಸದ್ರೂಪವಾಗಿರುತ್ತದೆ. ದೇಶ ಕಾಲ ಆಕಾರ ಸಹಿತ ವಾದ ವ್ಯವಹಾರಗಳನ್ನು ನಾನು ನೋಡಿದೆ, ನಾನು ಕೇಳಿದೆ, ನನಗೆ ತಿಳಿಯಿತು ಎಂಬುವುದು 'ನಾನು' ಎಂಬ ತತ್ವಕ್ಕಿಂತ ಬೇರೆಯಾಗಿರುವ ನೋಡುವಿಕೆ, ಮಾಡುವಿಕೆ, ತಿಳಿಯುವಿಕೆ ಮುಂತಾದ ಕ್ರಿಯಾರೂಪ ವನ್ನು ಹೊಂದುತ್ತದೆ. ಇದರಲ್ಲಿರುವ ಚಮತ್ಕಾರವು ಇಷ್ಟೆ. ನಾನು ಎಂಬ ಅನುಭವವು ದೇಶ, ಕಾಲ, ಆಕಾರಸಹಿತವಾದ 'ಇದಂ' ವ್ಯವಹಾರದೊಡನೆ ಏಕೀಭವಿಸಿಯೂ ಇರುತ್ತದೆ, ಭಿನ್ನಾಭಿನ್ನ ವಾಗಿಯೂ ಇರುತ್ತದೆ, ಭಿನ್ನವಾಗಿಯೂ ಇರುತ್ತದೆ. ದೇಶ ಕಾಲ ಆಕಾರ ಸಹಿತವಾದ 'ಇದಂ' (ಗ್ರಾಹ್ಯ) ವ್ಯವಹಾರವು 'ಅಹಂ' (ಗ್ರಾಹಕ) ಇಲ್ಲದೆ ಇಲ್ಲ. ಆದರೆ ದೇಶ ಕಾಲ ಆಕಾರರಹಿತವಾದ

'ಅಹಂ' ಅನುಭವವು 'ಇದಂ' ಇಲ್ಲದೇನೂ ಇರಬಹುದು. ಇದರಿಂದ 'ಅಹಂ' ಅನುಭವವು (ಗ್ರಾಹಕ ಸ್ವರೂಪವು) ಅನಂತವಾದ ಗ್ರಾಹ್ಯ ವಿಭಾಗಗಳನ್ನೊಳಗೊಂಡು ಅಭಿನ್ನವಾಗಿ ನಿಸ್ತರಂಗವಾಗಿ ಆನಂದರೂಪವಾಗಿರುತ್ತದೆ; ಹಾಗೆಯೇ ಅನಂತವಾದ ಬಾಹ್ಯಜ್ಞಾನಗಳಿಂದ ಕೂಡಿಯೂ ಇರುತ್ತದೆ. ಈ ವೈಚಿತ್ರ್ಯವನ್ನು ಸಾಮಾನ್ಯ ಜನಗಳು ಗಮನಿಸದಿರುವುದರಿಂದ ಗ್ರಾಹ್ಯ ಬೇರೆ ಗ್ರಾಹಕ ಬೇರೆ ಎಂಬ ತಿಳಿವಳಿಕೆಯಿಂದಿರುವರು. ತತ್ವಜ್ಞಾನಿಗಳು ಈ ಗ್ರಾಹ್ಯ ಗ್ರಾಹಕಗಳಿಗಿರುವ ಸಂಬಂಧವನ್ನೂ ಅದರ ಐಕ್ಯವನ್ನೂ ಅದರ ವ್ಯವಹಾರ ಚಮತ್ಕಾರಗಳನ್ನೂ ತಿಳಿದಿರುತ್ತಾರೆ. ಆದುದರಿಂದ ಅವರಿಗೆ ಗ್ರಾಹ್ಯ ಮತ್ತು ಗ್ರಾಹಕ ವ್ಯವಹಾರಗಳಲ್ಲಿ ಪರಪ್ರಮಾತ್ರಾವೇಶ (ಶಿವಾಭಿನ್ನ) ದೃಷ್ಟಿಯು ಸ್ಥಿರವಾಗಿರುತ್ತದೆ. ಈ ವಿಷಯವನ್ನು 'ವಿಜ್ಞಾನಭೈರವ' ವೆಂಬ ಗ್ರಂಥದಲ್ಲಿ ಸೂತ್ರಪ್ರಾಯವಾಗಿ ಹೇಳಿದ್ದಾರೆ.

> ಗ್ರಾಹ್ಯ ಗ್ರಾಹಕ ಸಂವಿತ್ತಿಃ ಸಾಮಾನ್ಯಾ ಸರ್ವದೇಹಿನಾಂ ।
> ಯೋಗಿನಾಂತು ವಿಶೇಷೋಽಯಂ ಸಂಬಂಧೆ ಸಾವಧಾನತಾ ॥

ದೇಶ ಕಾಲ ಆಕಾರ ಸಹಿತವಾಗಿ ಬರುವ ತಿಳಿವಳಿಕೆಗಳೆಲ್ಲಾ ಕೇವಲ ಕ್ಷಣಿಕಗಳಾಗಿರುವುವೆಂದೂ ಗ್ರಾಹಕಾನುಭವವು ನಿತ್ಯವಾಗಿರುವುದೆಂದೂ ಗ್ರಾಹ್ಯ ಗ್ರಾಹಕಗಳು ಒಂದೇ ಎಂದು ತಿಳಿದರೆ, ಅನಾದಿಕಾಲದಿಂದ ಬಂದಿರುವ 'ಅಖ್ಯಾತಿ' ಮೂಲಕವೇ ಈ ಪ್ರಪಂಚದಲ್ಲಿರುವ ರಾಗ ದ್ವೇಷಗಳು ಹುಟ್ಟಿವೆ ಎಂಬುದು ವ್ಯಕ್ತವಾಗುವುದು. ಇದಕ್ಕೋಸ್ಕರವಾಗಿಯೇ ಗ್ರಾಹ್ಯ ಗ್ರಾಹಕ ವಿಭಾಗಗಳ ತಿಳಿವಳಿಕೆಗಳು ವಿಶದವಾದರೆ ಈ ವಿಶ್ವಕ್ಕೆಲ್ಲಾ ಮೂಲವಾಗಿರುವ ಮಹಾ ಚಿತ್ಸಮುದ್ರರೂಪವಾಗಿರುವ ಪರಮಶಿವನೊಬ್ಬನೇ ಮಹಾ ಗ್ರಾಹಕನಾಗಿರುವನೆಂದೂ ಸ್ವೇಚ್ಛೆಯಿಂದ ಮಿತಗ್ರಾಹಕನಾಗಿರುವ ಶಿವನೇ ಜೀವನೆಂದೂ ಗ್ರಾಹ್ಯರೂಪವಾಗಿರುವ ಈ ವಿಶ್ವವೆಲ್ಲಾ ಶಿವನ ಸ್ವಾತಂತ್ರ್ಯಶಕ್ತಿಯ ವಿಲಾಸವಾಗಿರುವುದೆಂದೂ ಈಶ್ವರಾಭಿನ್ನವೆಂದೂ ಅನುಭವಕ್ಕೆ ಬರುತ್ತದೆ. ಇದಕ್ಕೆ ಪ್ರತ್ಯಭಿಜ್ಞೆಯೆಂದು ಹೆಸರು.

ಬೇರೆ ಸಂಪ್ರದಾಯಗಳಲ್ಲಿರುವಂತೆ "ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂಬ ಭಾವನೆ ಇಲ್ಲಿಲ್ಲ. ಈಶ್ವರನೂ ಸತ್ಯ, ಈಶ್ವರನಿಂದ ಸೃಷ್ಟಿಮಾಡಲ್ಪಟ್ಟ ಈ ಪ್ರಪಂಚವೂ ಸತ್ಯ ಎಂಬುದು ಈ ಸಿದ್ಧಾಂತದ ನಿಶ್ಚಯವಾಗಿರುತ್ತದೆ. ಚಿಚ್ಛಕ್ತಿಯು ಕಾರಣ, ವಿಶ್ವವು ಕಾರ್ಯ. ಆದುದರಿಂದ ಕಾರ್ಯ ಕಾರಣಗಳೆರಡೂ ಸತ್ಯವಾದವುಗಳಾಗಿವೆ. ಒಂದು ಸತ್ಯ ಒಂದು ಮಿಥ್ಯ ಎಂಬ ವ್ಯವಹಾರಗಳಿಲ್ಲಿಲ್ಲ. ಈಶ್ವರನೂ ಚಿಚ್ಛಕ್ತಿಯೂ ಅಭಿನ್ನವಾಗಿರುತ್ತಾರೆ. ಶಕ್ತಿಯ ಪ್ರಸರಣವೇ ಈ ವಿಶ್ವ. ಈಶ್ವರನು ಆಧಾರ ವಿಶ್ವವು ಆಧೇಯ. ಆಧೇಯವು ಆಧಾರಕ್ಕೆ ಅಧೀನವಾಗಿರುತ್ತದೆ. ಈಶ್ವರನು ತನ್ನಲ್ಲಿಯೇ ತನ್ನ ಸಂಕಲ್ಪದಿಂದ ವಿಶ್ವವನ್ನು ತೋರ್ಪಡಿಸಿಕೊಳ್ಳುತ್ತಾನೆ. ಚಿದ್ಘನರೂಪವಾಗಿರುವ ಈಶ್ವರನು ಜ್ಞಾನ ಇಚ್ಛಾ ಕ್ರಿಯಾ ಶಕ್ತಿಗಳಿಂದ ಕೂಡಿದ್ದರೂ ಶಕ್ತಿ ಪ್ರಸರವಿಲ್ಲದಿರುವ ಸ್ಥಿತಿ ಒಂದು, ಶಕ್ತಿ ಪ್ರಸರವಿರುವ ಸ್ಥಿತಿ ಒಂದು, ಹೀಗೆ ಎರಡು ಸ್ಥಿತಿಗಳುಳ್ಳವನಾಗಿರುತ್ತಾನೆ. ಶಕ್ತಿ ಪ್ರಸರವಿಲ್ಲದಿರುವ ಸ್ಥಿತಿ ವಿಶ್ವಾತೀತವಾದ ಪರಾವಸ್ಥೆ. ಇದನ್ನೇ ತತ್ವಗಣನೆಯಲ್ಲಿ ಪರಮಶಿವ ಎನ್ನುವುದು - ಶಕ್ತಿಪ್ರಸರವಿರುವ ಸ್ಥಿತಿಯು ಶಿವನಿಂದ ಭೂಮಿವರೆಗಿರುವ ಮೂವತ್ತಾರು ತತ್ವ ವಿಭಾಗಗಳುಳ್ಳದ್ದಾಗಿದೆ. ಇದು ವಿಶ್ವಾತ್ಮಕವಾದದ್ದು. ಈಶ್ವರನು ತನ್ನಲ್ಲಿ ಸೂಕ್ಷ್ಮವಾಗಿರುವುದನ್ನೇ ಸ್ಥೂಲವಾಗಿ ಪ್ರಕಟಪಡಿಸುತ್ತಾನೆ. ಹೀಗೆ ಪ್ರಕಟವಾದದ್ದೇ ವಿಶ್ವ. ಬೇರೆ ತನ್ನಿಂದ ಭಿನ್ನವಾಗಿರುವ ಪದಾರ್ಥದಿಂದ ಸೃಷ್ಟಿಸುವುದಿಲ್ಲ - ಆದುದರಿಂದ ಈ ರೀತಿಯಾದ ಪ್ರಕಟನೆಗೆ 'ಉನ್ಮೀಲನ' ಅಥವಾ 'ಆಭಾಸನ' ಎಂದು ಶಾಸ್ತ್ರ ವ್ಯವಹಾರವಿದೆ.

ಪ್ರತ್ಯಭಿಜ್ಞಾ ಸಂಪ್ರದಾಯದ ವೈಶಿಷ್ಟ್ಯವೇನೆಂದರೆ ಶಾಸ್ತ್ರ ಜ್ಞಾನದಿಂದ ಶಿವನೇ ತಾನು ಎಂದು ತಿಳಿದರೂ ಅದನ್ನು ಸಾಕ್ಷಾತ್ಕಾರ ಮಾಡಿಕೊಂಡು ಸಂಪೂರ್ಣವಾದ ಅನುಭವವನ್ನು ಇಲ್ಲಿಯೇ ಪಡೆಯುವುದಕ್ಕೆ ಸ್ವತಂತ್ರವಾದ ಅವಕಾಶವನ್ನು ಕಲ್ಪಿಸಿರುವಿಕೆಯೇ ಆಗಿದೆ. ಪ್ರತ್ಯಕ್ಷ, ಅನುಮಾನ, ಶಬ್ದ ಈ ಮೂರು ಪ್ರಮಾಣಗಳ ಮೂಲಕ ಇವನು ಸಾಕ್ಷಾತ್ಕಾರವನ್ನು ಹೊಂದಲು ಯಾವ ರೀತಿ ಪ್ರಯತ್ನಪಡ

ಬಹುದು ಎಂಬ ಅಂಶವನ್ನು ನಿರ್ಣಯಿಸಲು ಸಹಕಾರಿಯಾಗಿವೆ. ಪ್ರತ್ಯಕ್ಷಾನುಭವದಿಂದ ಶಾಸ್ತ್ರದಲ್ಲಿ ಹೇಳಿರುವ ತನ್ನಲ್ಲಿ ಸಂಕುಚಿತವಾಗಿರುವ ಶಕ್ತಿಸ್ವರೂಪಗಳನ್ನು ತಿಳಿಯಬಹುದು. ತಾನು ಯಾವ ಉಪಾಯಾನುಷ್ಠಾನಕ್ಕೆ ಅರ್ಹನೆಂಬುದನ್ನು ತನ್ನ ವ್ಯಕ್ತಿತ್ವದ ನಿಲುವಿನಿಂದ ನಿರ್ಣಯಿಸಬಹುದು. ಅನುಮಾನದಿಂದ ಮೆಟ್ಟಲು ಮೆಟ್ಟಲಾಗಿ ವಿಕಾಸವನ್ನು ತನ್ನ ಅಭ್ಯಾಸದ ಫಲದ ಅತಿಶಯವನ್ನು ಗುರ್ತಿಸಬಹುದು. ಸದ್ಗುರೂಪದೇಶದಿಂದ ತನ್ನ ವ್ಯಕ್ತಿತ್ವವನ್ನು ಸಂಸ್ಕರಿಸಿಕೊಳ್ಳಬಹುದು. ಯಾವುದರಿಂದಲಾದರೂ 'ಪೂರ್ಣಾಹಂ ವಿಮರ್ಶ' (ನಿರ್ವಿಕಲ್ಪಕವಾದ ಪ್ರಶಾಂತವಾದ ಚಿದನುಭವ) ಏರ್ಪಟ್ಟರೆ ಆಮೇಲೆ ಈ ಪ್ರಮಾಣಗಳಿಂದ ಏನೂ ಕೆಲಸವಿಲ್ಲ. ಜೀವನು ಶಿವನೇ ಆಗಿದ್ದಾನೆಂದೂ ಶಿವತ್ವ ಪ್ರಾಪ್ತಿಯು ಒಂದು ಅಪೂರ್ವ ಅಂಶವಲ್ಲವೆಂದೂ ಸದಾ ಅನುಭವದಲ್ಲಿದ್ದರೂ ಅನಾದಿ ಕಾಲದಿಂದ ಬಂದಿರುವ ಮೋಹದಿಂದ ಸ್ವಸ್ವರೂಪವು ತಿಳಿಯುತ್ತಾ ಇಲ್ಲವೆಂದೂ ಆ ಸ್ವಸ್ವರೂಪವನ್ನು ಇವನು ಚಿಚ್ಛಕ್ತಿಯನ್ನು ಉದ್ದೀಪನಗೊಳಿಸುವುದರಿಂದ ಅನುಭವಕ್ಕೆ ತರಲು ಪ್ರತ್ಯಭಿಜ್ಞಾ ತತ್ವವು ಉಪದೇಶಿಸಲ್ಪಟ್ಟದೆಯೆಂದೂ ತಿಳಿಯಬೇಕು.

ಕಿಂತು ಮೋಹವಶಾದಸ್ಮಿನ್ ದೃಷ್ಟೇಽಪ್ಯನುಪಲಕ್ಷಿತೇ ।
ಶಕ್ತ್ಯಾವಿಷ್ಕರಣೇನೇಯಂ ಪ್ರತ್ಯಭಿಜ್ಞೋಪದಿಶ್ಯತೇ ॥

## ಚಿತ್ಸ್ವರೂಪ

ನಿಸ್ತರಂಗವಾಗಿರುವ ಚಿತ್ಸ್ವರೂಪವೇ ಪರಮಶಿವ. ಅಲೆಗಳಿಲ್ಲದ ಪ್ರಶಾಂತವಾಗಿರುವ ಚಿತ್ಸಮುದ್ರವೇ ಪರಮಶಿವನ ಲೀಲೆಯಿಂದ ಗ್ರಾಹ್ಯ ಗ್ರಾಹಕರೂಪವಾದ ವಿಶ್ವವಾಯಿತು. ಆ ಚಿತ್ತೇ ಮೂವತ್ತೈದು ತತ್ವರೂಪವಾದ ವಿಶ್ವಸಿದ್ಧಿಗೂ ಗ್ರಾಹ್ಯ ಗ್ರಾಹಕರೂಪವಾದ ವಿಶ್ವ ವ್ಯವಹಾರಕ್ಕೂ ಕಾರಣವಾಯಿತು. ವಿಶ್ವವು ನೀಲ ಸುಖ ದೇಹ ಪ್ರಾಣಾದಿ ರೂಪಗಳಿಂದ ಕೂಡಿದ್ದಾಗಿದೆ. ನೀಲ ಎಂದರೆ ಬಹಿರಿಂದ್ರಿಯಗಳಿಂದ ತಿಳಿಯತಕ್ಕ ಆಕಾರವಿರುವ ಪದಾರ್ಥಗಳು. ಸುಖವು ಅಂತರಿಂದ್ರಿಯದಿಂದ ಅನುಭವಿಸತಕ್ಕದ್ದು. ದೇಹವು ಬಾಹ್ಯಾನುಭವಕ್ಕೂ ಅಂತರನುಭವಕ್ಕೂ ಆಶ್ರಯವಾಗಿದೆ. ದೇಹದ

ಕ್ರಿಯೆಯನ್ನು ನಡೆಸುವ ಚೈತನ್ಯ ಶಕ್ತಿಯೇ ಪ್ರಾಣ - ಈ ರೀತಿಯಾ
ವಿಶ್ವದ ಸ್ವರೂಪವು ವಿಲಕ್ಷಣವಾದದ್ದಾಗಿದೆ. ಹಾಗೆಯೇ ಈ ವಿಶ್ವ
ವ್ಯವಹಾರದಲ್ಲಿ ನಾಲ್ಕು ಬಗೆಯಾಗಿದೆ. ತಿಳಿಯುವವನು, ತಿಳಿಯು
ಉಪಾಯ, ತಿಳಿಯಲ್ಪಡುವ ವಸ್ತು, ತಿಳಿವಳಿಕೆ ಎಂಬಿವುಗಳೇ ಈ
ನಾಲ್ಕು ವಿಭಾಗಗಳು. ಇವುಗಳನ್ನೇ ಶಾಸ್ತ್ರೀಯವಾಗಿ ಪ್ರಮಾತೃ
ಪ್ರಮಾಣ, ಪ್ರಮೇಯ ಮತ್ತು ಪ್ರಮಿತಿ (ಜ್ಞಾನ) ಎಂದು ಹೇಳ
ವುದು. ಇಲ್ಲಿ ಪ್ರಮಾತೃವೆಂದರೆ ಮಿತಪ್ರಮಾತೃವಾದ ಜೀವನು
ಇವನು ವಿಶ್ವದ ಸ್ವರೂಪ ಮತ್ತು ವ್ಯಾಪಾರಗಳನ್ನು ಪ್ರಮಾಣಗಳಿಂ
ತಿಳಿಯುತ್ತಾನೆ. ಹಾಗೆ ಪ್ರಮಾಣಗಳಿಂದ ತಿಳಿಯುವುದಕ್ಕೆ ಸಾಧ
ವಿಲ್ಲದ ವಿಷಯಗಳನ್ನು ಸ್ವಚ್ಛ ಜ್ಞಾನದಿಂದ (ಸೋಪಜ್ಞತಾವೃತ್ತಿಯಿಂದ
ಅನುಭವಿಸುತ್ತಾನೆ. ವಿಶ್ವವೇ ಇವನಿಗೆ ಪ್ರಮೇಯ. ವಿಶ್ವಜ್ಞಾನವ
ಪ್ರಮಿತಿ. ನಿಸ್ತರಂಗವಾದ ಚಿತ್ಸ್ವರೂಪಾನುಭವದಲ್ಲಿ ಪ್ರಮಾಣವ
ಮೊದಲಾದ ಈ ನಾಲ್ಕು ಭೇದಗಳಿಲ್ಲ. ನಿಸ್ತರಂಗವಾದ ಚಿತ್ಸ್ವ
ರೂಪವೇ ಪರಮಶಿವ. ವಿಶ್ವವು ಆತನಿಗಿಂತ ಬೇರೆಯಾಗಿಲ್ಲದಿರು
ದರಿಂದ ಅತನನ್ನು ತಿಳಿಯುವುದಕ್ಕೆ ಬೇರೆ ಸಾಧನಗಳಿಲ್ಲ. ಆತನೆ
ಸಾಧನ ಮತ್ತು ಸಾಧ್ಯವೂ ಆಗಿರುತ್ತಾನೆ. ಹೇಗೆಂದರೆ ದೀಪ
ಕತ್ತಲೆಯಲ್ಲಿ ಇತರ ಪದಾರ್ಥಗಳನ್ನು ತೋರ್ಪಡಿಸುತ್ತದೆ. ದೀಪವನ್ನು
ತೋರಿಸುವುದಕ್ಕೆ ಬೇರೆ ದೀಪವು ಬೇಕಿಲ್ಲ. ಅದು ತನ್ನನ್ನೇ ತಾನ
ತೋರ್ಪಡಿಸಿಕೊಳ್ಳುತ್ತದೆ. ಇತರ ಪದಾರ್ಥಗಳನ್ನೂ ತೋರ್ಪಡಿಸ
ತ್ತದೆ - ಹಾಗೆಯೇ ಚಿತ್ತು ಸ್ವಸ್ವರೂಪವನ್ನು ತಾನೇ ತೋರ್ಪಡಿ
ಕೊಳ್ಳುತ್ತಾ ಇತರ ಪದಾರ್ಥಗಳ ತಿಳಿವಳಿಕೆಯನ್ನೂ ಉಂಟ
ಮಾಡುತ್ತದೆ.

ಸ್ವಯಂಪ್ರಕಾಶವಾದ ಚಿತ್ತು ಸ್ವತಂತ್ರವಾದದ್ದು. ಸರ್ವಶಕ್ತಿ
ಗಳನ್ನೂ ಒಳಗೊಂಡಿರುವಂಥಾದ್ದು. ಎಲ್ಲಕ್ಕೂ ಕಾರಣವಾದದ್ದು
ಸುಖೋಪಾಯವಾದದ್ದು. ಇದನ್ನೇ ಅನುತ್ತರ, ಪರಾಸಂವಿತ್,
ಪರಮಶಿವ ಎಂದು ಕರೆಯುವುದು. ಪರಮಶಿವನು ಅಲೆಗಳಿಲ್ಲ
ಸಮುದ್ರದಂತೆ ಪ್ರಶಾಂತನಾಗಿರುತ್ತಾನೆ. ಈ ಸ್ಥಿತಿಯಲ್ಲಿ ಈತನ

ವಿಶ್ವೋತ್ತೀರ್ಣ ಅಥವಾ ವಿಶ್ವಾತೀತನೆನಿಸಿಕೊಳ್ಳುತ್ತಾನೆ. ಈತನು ಯಾವಾಗಲೂ ಚಿದಾನಂದಘನನಾಗಿ ಪರಿಪೂರ್ಣನಾಗಿರುತ್ತಾನೆ. ಈ ಪರಮಶಿವನು ತನ್ನ ಸ್ವಾತಂತ್ರ್ಯಶಕ್ತಿ ಚಮತ್ಕಾರದಿಂದ ಮೂವತ್ತಾರು ತತ್ವಗಳ ರೂಪವನ್ನೂ ಸಪ್ತಪ್ರಮಾತೃಭಾವವನ್ನೂ ಪಡೆಯುತ್ತಾನೆ. ಇದು ವಿಶ್ವಾತ್ಮಕ ಸ್ಥಿತಿ.

ನಿಸ್ತರಂಗವಾದ ಸಮುದ್ರದಲ್ಲಿ ಸೂಕ್ಷ್ಮವಾದ ಅಲೆಗಳುಂಟಾಗುವಂತೆ ಆಗುವ ಚಿತ್ಸಮುದ್ರದ ಚಲನವೇ ಶಕ್ತಿ ಅಥವಾ ಚಿಚ್ಛಕ್ತಿ. ಈ ಚಿಚ್ಛಕ್ತಿಯೇ ಜ್ಞಾನ ಇಚ್ಛಾ ಕ್ರಿಯಾ ಎಂಬ ಮೂರು ಭೇದಗಳಿಂದ ಪ್ರಸರಿಸುತ್ತದೆ. ಮೊದಲನೆಯ ಚಲನಕ್ಕೇ ಸ್ಪಂದ, ಸ್ಫುರತ್ತಾ, ಉನ್ಮೇಷ ಎಂದು ಹೇಳುವುದು. ಇದರಿಂದಲೇ ಪ್ರಪಂಚ ಸೃಷ್ಟಿ. ಮೊದಲನೆಯ ತತ್ವವಾದ ಶಿವ ತತ್ವದಿಂದ ಭೂಮಿವರೆಗೂ ಇರುವ ಮೂವತ್ತಾರು ತತ್ವಗಳು ಶಕ್ತಿ ಪ್ರಸರಣಕ್ರಮದಿಂದ ರೂಪುಗೊಳ್ಳುತ್ತವೆ. ಶಿವ ಶಕ್ತಿ ಈ ಎರಡು ತತ್ವಗಳಲ್ಲಿ ಗ್ರಾಹ್ಯ ಗ್ರಾಹಕ ಭೇದಗಳಿಲ್ಲ ಶಕ್ತಿ ತತ್ವದಲ್ಲಿ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳ ಆವಿರ್ಭಾವವಾಗಿರುತ್ತದೆ. ಮೂರನೆ ತತ್ವವಾದ ಸದಾಶಿವ ತತ್ವದಿಂದ ಗ್ರಾಹ್ಯ ಗ್ರಾಹಕ ಭಾವವು ಅಂಕುರಿಸುತ್ತದೆ. ಮುಂದಿನ ತತ್ವ ಸೃಷ್ಟಿಯಲ್ಲಿ ತತ್ವಗಳಿಗನುರೂಪವಾದ ಗ್ರಾಹಕ ವರ್ಗಗಳೇರ್ಪಡುತ್ತವೆ - ಇಚ್ಛಾ ಜ್ಞಾನ ಕ್ರಿಯಾ ಎಂಬ ಮೂರು ಶಕ್ತಿಗಳು ಆವಿರ್ಭವಿಸಿದರೂ ಈ ಶಕ್ತಿಗಳು ವಿಶ್ವರೂಪವಾಗಿ ಅನಂತ ಭೇದಗಳನ್ನು ಪಡೆದಿರುತ್ತವೆ. ಗ್ರಾಹ್ಯ ಗ್ರಾಹಕ ಭೇದದಿಂದಿರುವ ಈ ವಿಶ್ವವನ್ನು ಹೊರಹೊಮ್ಮಿಸುವ ಮತ್ತು ಉಪಸಂಹರಿಸುವ ಚಮತ್ಕಾರವು ಆ ಚಿಚ್ಛಕ್ತಿಗೆ ಸೇರಿದುದು.

ಚಿಚ್ಛಕ್ತಿಯ ಸ್ವಾತಂತ್ರ್ಯ ಚಮತ್ಕಾರವು ವಿಲಕ್ಷಣವಾದದ್ದು.

" ವಿಮರ್ಶೋಹಿ ಸರ್ವಂಸಹಃ ಪರಮಪಿ ಆತ್ಮೀಕರೋತಿ
ಆತ್ಮಾನಂಚ ಪರೀಕರೋತಿ ಉಭಯಮೇಕೀಕರೋತಿ
ಏಕೀಕೃತಂ ದ್ವಯಮಪಿ ನ್ಯಗ್ಭಾವಯತಿ ಇತ್ಯೇವಂ ಸ್ವಭಾವಃ "

ಈಶ್ವರ ಪ್ರತ್ಯಭಿಜ್ಞಾ ವಿಮರ್ಶಿನಿ

ಚಿಚ್ಛಕ್ತಿಯು ಎಲ್ಲವನ್ನೂ ಒಳಗೊಂಡಿರುವಂಥಾದ್ದು. ಬಾಹ್ಯ ಪ್ರಪಂಚವನ್ನು (ಇದಂತಾ) ತನ್ನಲ್ಲಿಯೇ ಸೇರಿಸಿಕೊಳ್ಳುತ್ತದೆ. 'ಅಹಂ' ಎಂಬ ತನ್ನ ಸ್ವರೂಪವನ್ನು 'ಇದಂ' ಎಂಬ ಗ್ರಾಹ್ಯರೂಪವಾಗಿಯೂ ತೋರಿಸುತ್ತದೆ. ಈ ಗ್ರಾಹ್ಯ ಗ್ರಾಹಕ ಭಾವಗಳನ್ನು ಅಭಿನ್ನವಾಗಿಯೂ ತೋರಿಸುತ್ತದೆ. ಹಾಗೆಯೇ ಮರೆಮಾಚುತ್ತದೆ. ಇಂತಹ ವಿಲಕ್ಷಣ ಚಮತ್ಕಾರ ಸ್ವಭಾವವುಳ್ಳದ್ದು ಚಿತ್ತು.

ಚಿಚ್ಛಕ್ತಿಗೆ ದೇಶ ಕಾಲ ಆಕಾರಗಳ ಭೇದವಿಲ್ಲ. ಆದರೂ ಅದರಿಂದಲೇ ಉದ್ಭವಿಸಿರುವ ವಿಶ್ವವು ದೇಶ ಕಾಲ ಆಕಾರಗಳಿಂದಲೇ ವ್ಯವಹಾರಕ್ಕೆ ಯೋಗ್ಯವಾಗುತ್ತದೆ.

> ದೇಶ ಕಾಲಾಕಾರ ಭೇದಃ ಸಂವಿದೋ ನಹಿ ಯುಜ್ಯತೆ।
> ತಸ್ಮಾದೇಕೈವ ಪೂರ್ಣಾಹಂ ವಿಮರ್ಶಾತ್ಮಾ ಚಿದುಚ್ಯತೆ ॥

ದೇಶ ಕಾಲಾಕಾರ ಸಹಿತವಾಗಿರುವ ಈ ವಿಶ್ವಕ್ಕೆ ಚಿಚ್ಛಕ್ತಿಯು ಕಾರಣ. ಅದು ಯಾವಾಗಲೂ ವ್ಯಾಪಕವಾಗಿಯೂ ಸ್ವಯಂಪ್ರಕಾಶವಾಗಿಯೂ ಪರಿಪೂರ್ಣವಾಗಿಯೂ ಇರುತ್ತದೆ. ಸೃಷ್ಟಿ ಸ್ಥಿತಿ ಸಂಹಾರಗಳನ್ನು ಬೇರೆ ಸಾಧನಗಳ ಅಪೇಕ್ಷೆಯಿಲ್ಲದೆ ನಿರ್ವಹಿಸುತ್ತಿರುವುದರಿಂದ ಸ್ವತಂತ್ರವಾಗಿದೆ. ಈ ಶಕ್ತಿಯ ಪ್ರಸರದಿಂದಲೇ ಸೃಷ್ಟಿ ಸ್ಥಿತಿಗಳು ನಡೆಯುತ್ತಿರುವುದು. ಈ ಶಕ್ತಿಯು ತನ್ನ ಪ್ರಸರವನ್ನು ಉಪಸಂಹರಿಸಿಕೊಂಡರೆ ಪ್ರಳಯ ಅಥವಾ ಸಂಹಾರವೆಂದು ಹೇಳಲ್ಪಡುತ್ತದೆ.

ಶಕ್ತಿ ಪ್ರಸರಣಕ್ರಮದಲ್ಲಿ ನಾವು ಇನ್ನೂ ಒಂದು ಚಮತ್ಕಾರವನ್ನು ಗಮನಿಸಬಹುದು. ಚಿಚ್ಛಕ್ತಿಯು ಅಭೇದ ವಿಮರ್ಶನರೂಪಿಯಾಗಿ ಪರಾಶಕ್ತಿ ಎನ್ನಿಸುತ್ತದೆ. ಭೇದಾಭೇದ ವಿಮರ್ಶನರೂಪಿಯಾಗಿ ಪಶ್ಯಂತೀ ಮಧ್ಯಮಾರೂಪಗಳಿಂದ ವಿರಾಜಿಸುತ್ತಿದ್ದು ವೈಖರ್ಯವಸ್ಥೆಯಲ್ಲಿ ಭೇದವನ್ನೇ ಮಿತಪ್ರಮಾತೃವಾದ ಜೀವನಿಗೆ ಉಂಟುಮಾಡುತ್ತಿರುತ್ತದೆ - ಪರಾ ಪಶ್ಯಂತೀ ಮಧ್ಯಮಾ ವೈಖರೀ ಈ ನಾಲ್ಕು ಸ್ಥಿತಿಗಳೂ ಅನಂತ ಶಕ್ತಿಯುಳ್ಳ ಚಿಚ್ಛಕ್ತಿಯ ಪ್ರಕಾರಗಳೆಂದು ತಿಳಿದು ಉಪಾಸಿಸುವರಿಗೆ ಮುಕ್ತಿಯುಂಟಾಗುತ್ತದೆ.

ಸೇಯಂ ಕ್ರಿಯಾತ್ಮಿಕಾಶಕ್ತಿಃ ಶಿವಸ್ಯಪಶುವರ್ತಿನೀ ।
ಬಂಧಯಿತ್ರೀ ಸ್ವಮಾರ್ಗಸ್ಥಾ ಜ್ಞಾತಾ ಸಿದ್ಧ್ಯುಪಪಾದಿಕಾ ॥
ಸ್ಪಂದಕಾರಿಕಾ.

ಹೀಗೆ ಪರಮಶಿವನು ಅನಂತರೂಪಗಳಿಂದ ವಿಶ್ವರೂಪಿಯಾಗಿ ವಿರಾಜಿಸುತ್ತಿದ್ದಾನೆ. ಇದು ಆತನ ಲೀಲೆ.

ಈಶ್ವರನಿಗೆ ಚಿತ್, ಆನಂದ, ಇಚ್ಛಾ, ಜ್ಞಾನ, ಕ್ರಿಯಾ ಎಂಬ ಐದು ಶಕ್ತಿಗಳು ನಿತ್ಯವಾಗಿರುತ್ತವೆ. ವಿಶ್ವಾತೀತನಾದ ಪರಮಶಿವನಲ್ಲಿಯೂ ವಿಶ್ವಾತ್ಮಕನಾದ ಶಿವನಲ್ಲಿಯೂ ಈ ಗುಣಗಳು ಸಮಾನವಾಗಿಯೇ ಇವೆ. ಪರಮಶಿವನು ಇನ್ನೊಂದು ವಸ್ತುವಿನ ಆಶ್ರಯವಿಲ್ಲದೆ ಸ್ವಯಂಪ್ರಕಾಶನು. ಇನ್ನೊಂದರ ಸಹಾಯವಿಲ್ಲದೆ ತನ್ನಲ್ಲಿಯೇ ಆನಂದವನ್ನು ಪಡೆಯುವ ಶಕ್ತಿಯುಳ್ಳವನಾಗಿಯೂ ತಾನು ಏನು ಬೇಕಾದರೂ ಮಾಡಬಲ್ಲೆನೆಂಬ ಅಪ್ರತಿಹತವಾದ ದೃಢ ಸಂಕಲ್ಪವುಳ್ಳ ಮತ್ತು ಚಮತ್ಕಾರ ರೂಪವಾದ ಇಚ್ಛಾ ಶಕ್ತಿಯುಳ್ಳವನಾಗಿಯೂ ಗ್ರಾಹ್ಯ ಗ್ರಾಹಕ ವ್ಯವಹಾರಗಳನ್ನು ತನ್ನಲ್ಲಿ ಒಳಗೊಂಡಿರುವ ಜ್ಞಾನ ಶಕ್ತಿಯುಳ್ಳವನಾಗಿಯೂ ಅನೇಕ ರೂಪಗಳಿಂದ ಪದಾರ್ಥಗಳನ್ನು ಸೃಷ್ಟಿಮಾಡುವ ಕ್ರಿಯಾಶಕ್ತಿಯುಳ್ಳವನಾಗಿಯೂ ಹೀಗೆ ಪಂಚಶಕ್ತಿಗಳುಳ್ಳವನಾಗಿ ಯಾವಾಗಲೂ ಪಂಚಕೃತ್ಯಗಳನ್ನು ಮಾಡುತ್ತಿರುತ್ತಾನೆ. ಪಂಚಕೃತ್ಯಗಳು ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗ್ರಹ. ಇಲ್ಲಿ ಸೃಷ್ಟಿ ಅಂದರೆ ವಿಶ್ವ ಸೃಷ್ಟಿ. ಸ್ಥಿತಿ ಅಂದರೆ ಹಾಗೆ ಸೃಷ್ಟಿ ಮಾಡಿದ್ದನ್ನು ಕಾಪಾಡುವುದು. ಸಂಹಾರ ಅಂದರೆ ತನ್ನಲ್ಲಿಯೇ ಲಯಮಾಡಿಕೊಳ್ಳುವುದು. ತಿರೋಧಾನ ಅಂದರೆ ಪುನಃ ಸ್ಮೃತಿಗೆ ಬರುವ ಸ್ಥಿತಿಯಲ್ಲಿರಿಸುವಿಕೆ. ಅನುಗ್ರಹವೆಂದರೆ ಸಂಸ್ಕಾರರೂಪ

---

| | |
|---|---|
| ಪ್ರಕಾಶರೂಪತಾ ಚಿಚ್ಛಕ್ತಿಃ | ತಂತ್ರಸಾರ |
| ಸ್ವಾತಂತ್ರ್ಯಂ ಆನಂದಶಕ್ತಿಃ | ತಂತ್ರಸಾರ |
| ತಚ್ಚಮತ್ಕಾರ ಇಚ್ಛಾಶಕ್ತಿಃ | ತಂತ್ರಸಾರ |
| ಆಮರ್ಶಾತ್ಮಕತಾ ಜ್ಞಾನಶಕ್ತಿಃ | ತಂತ್ರಸಾರ |
| ಸರ್ವಾಕಾರಯೋಗಿತ್ವಂ ಕ್ರಿಯಾಶಕ್ತಿಃ | ಅನಾಮಕ |

ದಲ್ಲಿಲ್ಲದೆ ಸ್ಮರಿಸುವುದಕ್ಕವಕಾಶವಿಲ್ಲದಂತೆ ಚಿತ್ತಿನಲ್ಲಿಯೇ ಸಂಪೂರ್ಣ ವಾಗಿ ಲಯವಾಗುವುದು. ಹೀಗೆ ಐದು ಶಕ್ತಿಗಳಿಂದಲೂ ಐದು ಕೃತ್ಯ ಗಳಿಂದಲೂ ವಿಶ್ವಾತ್ಮಕನಾಗಿಯೂ ವಿಶ್ವಾತೀತನಾಗಿಯೂ ಚಿದಾ ನಂದೈಕ ಘನನಾಗಿಯೂ ಅನುತ್ತರ ವಿಮರ್ಶಮಯನಾಗಿಯೂ ಸ್ವತಂತ್ರನಾಗಿಯೂ ಪರಿಪೂರ್ಣನಾಗಿಯೂ ಪರಮಶಿವನು ಇದ್ದಾನೆ.

ಸೃಷ್ಟಿ ಸಂಹಾರ ಕರ್ತಾರಂ ವಿಲಯಸ್ಥಿತಿ ಕಾರಕಂ ।
ಅನುಗ್ರಹಕರಂ ದೇವಂ ಪ್ರಣತಾರ್ತಿ ವಿನಾಶನಂ ॥

## ಆಭಾಸವಾದ

ಸ್ವಯಂಪ್ರಕಾಶವಾದ ಪರಮಶಿವನೇ ಈ ವಿಶ್ವಕ್ಕೆ ಮೂಲ ಕಾರಣ. ಈತನು ಚಿನ್ಮಯನಾಗಿದ್ದಾನೆ. ಅನೇಕ ಭೇದರೂಪ ದಿಂದಿರುವ ಈ ವಿಶ್ವವನ್ನು ತನ್ನಿಂದಲೇ ಹೊರಹೊಮ್ಮಿಸಿ ತಾನೇ ಆಧಾರಭೂತನಾಗಿದ್ದಾನೆ. ಅನಂತವಾದ ವಿಶ್ವವು ಈತನಿಂದಲೇ ಹೊರಹೊಮ್ಮಿದ್ದರೂ ಶಿವನ ಸ್ವರೂಪಕ್ಕೆ ಯಾವ ವಿಕಾರವೂ ಇಲ್ಲ; ಚ್ಯುತಿಯೂ ಇಲ್ಲ.

'ಆಭಾಸ' ಎನ್ನುವ ಪದವು "ಭಾ ದೀಪ್ತೌ" ಎನ್ನುವ ಧಾತುವಿ ನಿಂದ ನಿಷ್ಪನ್ನವಾಗಿರುತ್ತದೆ. 'ಭಾ' ಎನ್ನುವ ಧಾತುವಿಗೆ ಬೆಳಗು ವಿಕೆ, ಪ್ರಕಾಶಿಸುವಿಕೆ ಎಂದು ಅರ್ಥವಾಗುತ್ತದೆ. ಪದಾರ್ಥವಾಗಲಿ ಪದಾರ್ಥಜ್ಞಾನವಾಗಲಿ ತನ್ನ ವ್ಯಕ್ತಿತ್ವದ ಪರಿಪೂರ್ಣತೆಯಿಂದಲೇ ಪ್ರಕಾಶಿಸುತ್ತದೆ: ಇದೇ ಆಭಾಸವೆನ್ನಿಸುವುದು. ಆಭಾಸ ಎಂಬುವು ದರಲ್ಲಿ ನಾವು ಎರಡಂಶಗಳನ್ನು ಗಮನಿಸಬಹುದು. ಬಾಹ್ಯ ಪ್ರಪಂಚ ದಲ್ಲಿ ನಮ್ಮ ಅನುಭವಕ್ಕೆ ಬರುತ್ತಿರುವ ಪದಾರ್ಥ ಒಂದು. ಅಂತಃ ಪ್ರಪಂಚದಲ್ಲಿರುವ ಅನುಭವವು ಬಾಹ್ಯಜ್ಞಾನಾನುಭವವಾಗಿ ಬದಲಾ ವಣೆ ಪಡೆಯುವುದು ಇನ್ನೊಂದು. ಉದಾಹರಣೆಗೆ ಯಾವ ಪದಾ ರ್ಥವು ಬೇಕೋ ಆ ಪದಾರ್ಥದ ಹೆಸರನ್ನು ಹೇಳಿ ತರಿಸುತ್ತೇವೆ. ಈ ಸ್ಥಿತಿಯಲ್ಲಿ ಒಳಗಿದ್ದ ಜ್ಞಾನವು ಬಾಹ್ಯ ವಿಷಯಜ್ಞಾನವಾಗಿ ಪರಿಣಮಿ ಸಿತು. ವಿಶ್ವವು ಇಂತಹ ಬಾಹ್ಯ ಮತ್ತು ಅಭ್ಯಂತರಗಳಾಗಿರುವ

ಅನೇಕ ಆಭಾಸಗಳಿಂದ ಕೂಡಿದ್ದಾಗಿದೆ. ಈ ಆಭಾಸಗಳು ಶಿವನ ಸ್ವರೂಪಕ್ಕೆ ಚ್ಯುತಿಯಿಲ್ಲದಿರುವಂತೆ ಒಂದನ್ನೊಂದುಬೆರೆಯದೆ ಇರುತ್ತವೆ.

ಈ ಆಭಾಸದ ವಿಷಯವನ್ನು ಪದಾರ್ಥ ವಿಷಯಿಕಜ್ಞಾನದಿಂದಲ್ಲದೆ ನಮ್ಮ ಅನುಭವದಿಂದಲೂ ತಿಳಿಯಬಹುದು. ನಮಗೆ ಒಂದು ಪದಾರ್ಥದ ತಿಳಿವಳಿಕೆಯುಂಟಾದನಂತರ ಮತ್ತೊಂದು ಪದಾರ್ಥದ ತಿಳಿವಳಿಕೆಯುಂಟಾಗುತ್ತದೆ. ನಮ್ಮ ಜೀವನದ ಅನುಭವದಲ್ಲಿ ಎಷ್ಟೋ ಪದಾರ್ಥಗಳ ತಿಳಿವಳಿಕೆಗಳು ನಮ್ಮಲ್ಲಡಗಿರುತ್ತವೆ. ನಾನು ನೋಡಿದೆ, ನಾನು ಕೇಳಿದೆ, ನಾನು ತಿಳಿದಿದ್ದೇನೆ ಇವೇ ಮುಂತಾದ ವ್ಯವಹಾರಗಳಲ್ಲಿ 'ನಾನು' ಎಂಬ ತತ್ವವು ಎಡಬಿಡದೆ ಇರುತ್ತದೆ. ಇಲ್ಲಿ ನಾನು ಎಂಬ ತತ್ವದ ಆಧಾರದಮೇಲೆ ಈ ತಿಳಿವಳಿಕೆಗಳು ಪುಂಖಾನುಪುಂಖವಾಗಿ ಬಂದು ಹೋಗುತ್ತಿರುತ್ತವೆ. ಬಂದು ಹೋಗುತ್ತಿರುವ ತಿಳಿವಳಿಕೆಗಳೆಲ್ಲಾ ಆಭಾಸಗಳು. ಇಲ್ಲಿಯೂ ಕೂಡ ಎಷ್ಟು ತಿಳಿವಳಿಕೆಗಳುಂಟಾದರೂ 'ನಾನು' ಎಂಬ ತತ್ವಕ್ಕೆ ವಿಕಾರವೂ ಇಲ್ಲ; ಚ್ಯುತಿಯೂ ಇಲ್ಲ.

ಈ ಆಭಾಸವಾದದಲ್ಲಿ ಇನ್ನೊಂದು ಚಮತ್ಕಾರವನ್ನು ನಾವು ಗಮನಿಸಬಹುದು. ಒಂದೇ ಪದಾರ್ಥಜ್ಞಾನದಲ್ಲಿ ಅನೇಕ ಆಭಾಸಗಳು ಸೇರಿರಬಹುದು. ನಾವು ಒಂದೊಂದು ವೇಳೆ ಅನೇಕ ಅಂಶಗಳಿಂದೊಡಗೂಡಿದ ಒಂದು ಪದಾರ್ಥವನ್ನು ಒಂದೇ ಪದಾರ್ಥವಾಗಿ ತಿಳಿಯುವುದೂ ಉಂಟು. ಬೇರೆ ದೃಷ್ಟಿಯಿಂದ ಅದರಲ್ಲಡಗಿರುವ ಬೇರೆ ಬೇರೆ ಅಂಶಗಳನ್ನು ಗಮನಿಸುವುದೂ ಉಂಟು. ನಾವು ಒಂದು ಪುಸ್ತಕವನ್ನು ನೋಡುತ್ತೇವೆಂದಿಟ್ಟುಕೊಳ್ಳೋಣ. ಅದರಲ್ಲಿ ಹೆಚ್ಚು ವಿಚಾರವಿಲ್ಲದಿದ್ದರೆ 'ಪುಸ್ತಕ' ಎಂಬ ಒಂದು ತಿಳಿವಳಿಕೆ ಮಾತ್ರ ಇರುತ್ತದೆ. ಇದು ವಿಶಿಷ್ಟವಾದ ಒಂದು ಆಭಾಸ. ಪುಸ್ತಕದಲ್ಲಿರುವ ವಿಷಯಗಳು, ಭಾಷೆ, ಲಿಪಿ, ಅದನ್ನು ಓದುವುದರಿಂದಾಗುವ ಪ್ರಯೋಜನ ಮುಂತಾದ ಅನೇಕ ಅಂಶಗಳನ್ನು ಗಮನಿಸುತ್ತೇವೆ. ಇವೆಲ್ಲಾ ಬೇರೆ ಬೇರೆ ಆಭಾಸಗಳು. 'ಪುಸ್ತಕ' ಎಂಬ ಒಂದು ದೃಷ್ಟಿಯಿಂದ ಅಭಿನ್ನ

ವಾಗಿಯೂ ವಿಚಾರದೃಷ್ಟಿಯಿಂದ ಬೇರೆ ಬೇರೆಯಾಗಿಯೂ ನೋ
ತ್ತೇವೆ. ನಮ್ಮ ವ್ಯವಹಾರಗಳಲ್ಲೆಲ್ಲಾ ಪ್ರತಿಯೊಂದು ಪದಾ
ವನ್ನೂ ಒಂದು ದೃಷ್ಟಿಯಿಂದ ಅಭಿನ್ನವಾಗಿಯೂ ಇನ್ನೊಂದು ದೃ
ಯಿಂದ ಭಿನ್ನಾಭಿನ್ನವಾಗಿಯೂ ತಿಳಿಯುತ್ತೇವೆ. ಇದರಿಂದ ಪ್ರ
ಯೊಂದು ಪದಾರ್ಥವೂ ಭಿನ್ನಾಭಿನ್ನವಾಗಿ ತೋರುತ್ತದೆ. ಪದಾ
ಗಳಲ್ಲಿ ಎಷ್ಟು ವ್ಯತ್ಯಾಸಗಳಿದ್ದರೂ ಒಂದಕ್ಕೊಂದಕ್ಕೆ ವಿರುದ್ಧವಾಗಿರು
ಧರ್ಮಗಳಿಂದ ಕೂಡಿದ್ದರೂ ಆ ಪದಾರ್ಥದ ತಿಳಿವಳಿಕೆಗಳು ನಮ್ಮ
ಒಂದನ್ನೊಂದು ಬೆರೆಯದೆ ಅಡಗಿರುತ್ತವೆ. ಆದ್ದರಿಂದ ಬಾ
ಪದಾರ್ಥಗಳೇ ಆಗಲಿ ಪದಾರ್ಥಗಳಿಂದುಂಟಾದ ತಿಳಿವಳಿಕೆಗಳೇ ಆಗ
ಭಾಷೆಯಿಂದ ತಿಳಿದ ತಿಳಿವಳಿಕೆಗಳೇ ಆಗಲಿ ಲೌಕಿಕ ವಿಷಯಜ್ಞಾ
ಗಳಾಗಲಿ ಅತೀಂದ್ರಿಯ ವಿಷಯಜ್ಞಾನಗಳಾಗಲಿ ಎಲ್ಲವೂ ಆಭಾಸಗ
ಆಗಿರುತ್ತವೆ. ಇವುಗಳು ಬಾಹ್ಯ ಪ್ರಪಂಚದಲ್ಲಿಯೂ ಆಂತರೀಯತೆ
ಅನುಭವದಲ್ಲಿಯೂ ಪರಸ್ಪರ ಅಸಂಕೀರ್ಣವಾಗಿ (ಒಂದನ್ನೊಂ
ಬೆರೆಯದೆ) ಉಳಿದಿರುತ್ತವೆ. ಈ ಆಭಾಸಗಳ ಅವಾಂತರಗಳೆಷ್ಟಿದ್ದರ
'ನಾನು' ಎಂಬ ತತ್ವಕ್ಕೆ ವಿಕಾರವಿಲ್ಲ; ಉಬ್ಬರವಿಳಿತಗಳಿಲ್ಲ. ಈ
ರೀತಿಯಾಗಿ ಶಿವನು ಈ ವಿಶ್ವವನ್ನು ನಾನಾರೂಪದಲ್ಲಿ ಹೊರಹೊ
ಸಿದ್ದರೂ ಆತನ ಸ್ವರೂಪಕ್ಕೆ ವಿಕಾರವೂ ಇಲ್ಲ; ಚ್ಯುತಿಯೂ ಇಲ್ಲ
ಯಾವಾಗಲೂ ಪರಿಪೂರ್ಣನಾಗಿಯೇ ಇರುತ್ತಾನೆ. ವಿಶ್ವವೆಲ್ಲಾ ಶಿ
ನಿಗೆ ಆಭಾಸಗಳು. ನಮಗೆ ಬರುವ ತಿಳಿವಳಿಕೆಗಳೆಲ್ಲಾ ನಮ
ಆಭಾಸಗಳು.

ಆಭಾಸವಾದವು ಈ ಸಂಪ್ರದಾಯದಲ್ಲಿ ಪ್ರಧಾನವಾಗಿರುತ್ತದೆ.

'ಇದಂ ಏತಾದೃಗಿತ್ಯೇವಂ ಯದ್ವಶಾದ್ವ್ಯವತಿಷ್ಠತೆ।
ವಸ್ತುಪ್ರಮಾಣಂ ತತ್ಸೋಽಪಿ ಸ್ವಾಭಾಸೋ ಅಭಿನವೋದಯಃ ॥'

'ಇದು,' 'ಇಂತಹದು' ಎಂದು ನಾವು ಒಂದು ಪದಾರ್ಥವನ್ನು
ವರ್ಣಿಸುತ್ತೇವೆ. 'ಇದು' ಎನ್ನುವುದು ಸ್ವರೂಪವನ್ನು ತಿಳಿಯಪಡಿ
ಸುತ್ತದೆ. 'ಇಂತಹುದು' ಎನ್ನುವುದು ಅದರಲ್ಲಿರುವ ಧರ್ಮಗಳನ್ನು
ಸೂಚಿಸುತ್ತದೆ. ಹೊಸ ಹೊಸದಾಗಿ ಈ ಬಗೆಯ ಪದಾರ್ಥಗಳು ಆ

ಮಹಾ ಚಿಚ್ಛಕ್ತಿಯ ಸಾಮರ್ಥ್ಯದಿಂದ ಪ್ರಕಾಶಿಸುತ್ತಿರುತ್ತವೆ. ಹೀಗೆ ಪ್ರಕಾಶಿಸುತ್ತಿರುವವುಗಳೆಲ್ಲಾ ಆಭಾಸಗಳೇ ಎಂದು ಈಶ್ವರ ಪ್ರತ್ಯಭಿಜ್ಞಾ ವಿಮರ್ಶಿನಿಯಲ್ಲಿ ಉತ್ಪಲಾಚಾರ್ಯರು ಹೇಳಿರುತ್ತಾರೆ.

## ಬಿಂಬ ಪ್ರತಿಬಿಂಬನ್ಯಾಯ

ನಿರ್ಮಲೆ ಮುಕುರೆ ಯದ್ವದ್ಭಾಂತಿ ಭೂಮಿ ಜಲಾದಯಃ ।
ಅಮಿಶ್ರಾಸ್ತದ್ವದೇಕಸ್ಮಿನ್ ಚಿನ್ನಾಥೆ ವಿಶ್ವವೃತ್ತಯಃ ॥

ತಂತ್ರಾಲೋಕ—ಅಹ್ನಿಕ ೩ ಶ್ಲೋಕ ೪.

ನಿರ್ಮಲವಾದ ಕನ್ನಡಿಯಲ್ಲಿ ಯಾವ ರೀತಿಯಾಗಿ ಭೂಮಿ ನೀರು ಮೊದಲಾದವುಗಳು ಒಂದಕ್ಕೊಂದು ಸೇರದೆ ಅಸಂಕೀರ್ಣವಾಗಿ ಪ್ರಕಾಶಿಸುತ್ತವೆಯೋ ಅದೇ ರೀತಿಯಾಗಿ ಒಬ್ಬನೆ ಆದ ಚಿನ್ಮೂರ್ತಿಯಾದ ಪರಮೇಶ್ವರನಲ್ಲಿ ಈ ವಿಶ್ವವೆಲ್ಲಾ ಪ್ರತಿಫಲಿಸುತ್ತದೆ. ಅಂದರೆ ನಿರ್ಮಲವಾದ ಚಿತ್ತಿನಲ್ಲಿ ವಿಶ್ವದ ಎಲ್ಲಾ ಪ್ರಕಾರಗಳೂ ಆಸಂಕೀರ್ಣವಾಗಿ ಪ್ರತಿಫಲಿಸುತ್ತವೆ.

ಪ್ರತಿಬಿಂಬವು ಕನ್ನಡಿಯಲ್ಲಿ ಅಥವಾ ಸ್ವಚ್ಛವಾದ ಪದಾರ್ಥಗಳಲ್ಲಿ ತೋರುತ್ತದೆ. ಪ್ರತಿಬಿಂಬವಾಗಿ ತೋರುವ ಪದಾರ್ಥ ಬೇರೆ. ಕನ್ನಡಿ ಬೇರೆ. ಹೀಗಿದ್ದರೂ ಪ್ರತಿಬಿಂಬವು ಕನ್ನಡಿಗಿಂತ ಬೇರೆಯಾಗಿ ತೋರುವುದಿಲ್ಲ. ಕನ್ನಡಿಯ ಪರಿಮಾಣ ಎಷ್ಟಿರುತ್ತದೆಯೋ ಅಷ್ಟೆ ಇರುತ್ತದೆ. ಅಂದರೆ ಚಿಕ್ಕ ಕನ್ನಡಿಯಲ್ಲಿ ದೊಡ್ಡ ಪದಾರ್ಥವು ಪ್ರತಿಫಲಿಸಿದರೂ ಕನ್ನಡಿಯು ವಿಕಾರವನ್ನು ಪಡೆಯುವುದಿಲ್ಲ. ಇದಲ್ಲದೆ ಒಂದು ಕನ್ನಡಿಯಲ್ಲಿ ಅನೇಕ ಪದಾರ್ಥಗಳು ಪ್ರತಿಫಲಿಸಿದರೂ ಆ ಪದಾರ್ಥಗಳಲ್ಲಿ ಸಾಂಕರ್ಯವೇರ್ಪಡುವುದಿಲ್ಲ. ಉದಾಹರಣೆಗೆ ಬೆಂಕಿ ಮತ್ತು ಹತ್ತಿ ಇವೆರಡೂ ಒಂದೇ ಕಡೆ ಒಂದೇ ಕಾಲದಲ್ಲಿ ಕನ್ನಡಿಯಲ್ಲಿ ಪ್ರತಿಫಲಿಸಿದರೂ ಹತ್ತಿಗೆ ಬೆಂಕಿ ಹತ್ತಿಕೊಳ್ಳುವುದಿಲ್ಲ. ಪದಾರ್ಥದ ರೂಪು ಮಾತ್ರ ಪ್ರತಿಫಲಿಸುವುದರಿಂದ ಅವುಗಳು ಒಂದಕ್ಕೊಂದು ಸೇರುವುದಿಲ್ಲ. ಈ ಪ್ರತಿಫಲನಕ್ಕೆ ಆ ಪದಾರ್ಥದಲ್ಲಿರುವ ನೈರ್ಮಲ್ಯವೇ

ಕಾರಣ. ನೈರ್ಮಲ್ಯದ ಮಟ್ಟವು ಹೆಚ್ಚುತ್ತಾ ಹೋದಹಾಗೆ ಪ್ರತಿಫ ನವು ಸ್ವಚ್ಛವಾಗುತ್ತಾ ಹೋಗುತ್ತದೆ.

ಪ್ರತಿಫಲನಕ್ಕೆ ಮತ್ತೊಂದು ಕಾರಣವಿದೆ. ಯಾವ ಪದಾರ್ಥ ಎಲ್ಲಿ ಪ್ರತಿಫಲಿಸಬೇಕೋ ಅಲ್ಲಿ ಆ ಪದಾರ್ಥದ ಸಜಾತೀಯವಾ ಪದಾರ್ಥತತ್ವವಿರಬೇಕು. ರೂಪವು ಪ್ರತಿಫಲಿಸಬೇಕಾಗಿದ್ದರೆ ರೂಪ ಆ ಪ್ರತಿಫಲಿಸಲ್ಪಡತಕ್ಕ ಪದಾರ್ಥದಲ್ಲಿರಬೇಕು. ರೂಪವಿಲ್ಲದ ಆಕಾ ದಲ್ಲಿ ರೂಪವುಳ್ಳ ಆಕಾರಗಳು ಪ್ರತಿಫಲಿಸಲಾರವು. ಅಂದರೆ ರೂಪ ಬೇಕಾದರೆ ರೂಪವುಳ್ಳ ದ್ರವ್ಯ ಬೇಕು.

ನೈರ್ಮಲ್ಯವೆಲ್ಲಿರುತ್ತದೆಯೋ ಅಲ್ಲಿ ಪದಾರ್ಥವು ಪ್ರತಿಫಲಿ ತ್ತದೆ. ಕನ್ನಡಿಯಲ್ಲಿ ಮುಖವನ್ನು ನೋಡುತ್ತೇವೆ, ಮುಖದಲ್ಲಿ ಕನ್ನ ಯನ್ನು ನೋಡಲಾರೆವು. ಇದರಿಂದ ಮುಖದಲ್ಲಿ ಕನ್ನಡಿಯನ್ನು ಪ್ರ ಫಲನಮಾಡುವಷ್ಟು ನೈರ್ಮಲ್ಯವಿಲ್ಲವೆಂದು ಹೇಳಬಹುದು. ಇ ಕೇವಲ ಬಾಹ್ಯ ಪ್ರಪಂಚ ದೃಷ್ಟಾಂತ ವಿಷಯ - ಅಂತೂ ಇಲ್ಲಿ ಒಂ ವಿಷಯವನ್ನು ನಾವು ಚೆನ್ನಾಗಿ ಗಮನಿಸಬಹುದು. ರೂಪಿಸಬೇಕಾದ ಅಥವಾ ಪ್ರತಿಫಲಿಸಬೇಕಾದರೆ ಪ್ರತಿಫಲನಮಾಡುವ ಪದಾರ್ಥದ ನೈರ್ಮಲ್ಯವಿರಬೇಕು. ನೈರ್ಮಲ್ಯವು ಹೆಚ್ಚಾಗಿದ್ದಷ್ಟೂ ಪ್ರ ಫಲನವೂ ಅಷ್ಟು ಪ್ರಕಾಶಮಾನವಾಗಿರುತ್ತದೆ.

ನಮ್ಮ ಅನುಭವದಲ್ಲಿರುವ ಪ್ರಪಂಚವು ಪಂಚಭೂತಗಳ ಸಂಕ ನಾತ್ಮಕವಾಗಿದೆ. ಹಾಗೂ ಮನುಷ್ಯ ಶರೀರವು ಈ ಐದು ಭೂತಗ ಪಿಂಡರೂಪವಾಗಿದೆ. ವಿಶ್ವದ ಪದಾರ್ಥಗಳೆಲ್ಲಾ ಈ ಐದು ಭೂ ಗಳಿಂದಲೇ ಉಂಟಾಗಿವೆ. ಈ ಐದು ಭೂತಗಳಿಗೂ ಐದು ಗು ಗಳುಂಟು. ಶಬ್ದ ಸ್ಪರ್ಶ ರೂಪ ರಸ ಗಂಧ ಎಂಬಿವುಗಳೇ ಈ ಐದ ಗುಣಗಳು. ಪ್ರತಿಯೊಂದು ಭೌತಿಕವಾದ ಪದಾರ್ಥದಲ್ಲಿಯೂ ಈ ಐದು ಗುಣಗಳಿರುತ್ತವೆ. ಈ ಐದು ಗುಣಗಳನ್ನು ಗ್ರಹಿಸುವುದಕ್ಕೆ ಅಥವಾ ಪ್ರತಿಫಲಿಸುವುದಕ್ಕೆ ಮನುಷ್ಯನಿಗೆ ಐದು ಇಂದ್ರಿಯಗಳಿವೆ. ಕಿವಿಯಲ್ಲಿ ಶಬ್ದವೂ, ಚರ್ಮದಲ್ಲಿ ಸ್ಪರ್ಶವೂ, ಕಣ್ಣಿನಲ್ಲಿ ರೂಪವೂ

ನಾಲಿಗೆಯಲ್ಲಿ ರಸವೂ, ಮೂಗಿನಲ್ಲಿ ಗಂಧವೂ ಪ್ರತಿಫಲಿಸುತ್ತದೆ. ಆದರೆ ಇಂದ್ರಿಯಗಳಿಗೆ ಸ್ವತಂತ್ರವಾಗಿ ಇವುಗಳನ್ನು ಗ್ರಹಿಸುವ ಶಕ್ತಿಯಿಲ್ಲ. ಇಂದ್ರಿಯಗಳು ಇವುಗಳನ್ನು ಗ್ರಹಿಸಬೇಕಾದರೆ ಅಂತಃಕರಣ ಮತ್ತು ಚಿಚ್ಛಕ್ತಿಯ ಬೆಂಬಲ ಬೇಕು. ಮತ್ತು ಇಂದ್ರಿಯ ಶಕ್ತಿಗಳ ಯೋಗ್ಯತೆಯನ್ನು ಹೆಚ್ಚಿಸಿಕೊಂಡಷ್ಟೂ ಅವುಗಳ ಗ್ರಹಣ ಅಥವಾ ಪ್ರತಿಫಲನದ ನೈರ್ಮಲ್ಯವು ಹೆಚ್ಚಿ ಸೂಕ್ಷ್ಮವಾಗಿಯೂ ಸ್ವಚ್ಛವಾಗಿಯೂ ಆಗುತ್ತವೆ. ಸಾಧನೆಗಳಿಂದಲೂ ಭಾವನಾಬಲದಿಂದಲೂ ಹೆಚ್ಚು ಯೋಗ್ಯತೆಯನ್ನು ಪಡೆದಿರುವವರು ಸಾಧಾರಣ ಮನುಷ್ಯರಿಗಿಂತ ಹೆಚ್ಚು ಸ್ವಚ್ಛವಾದ ಇಂದ್ರಿಯ ಶಕ್ತಿಗಳನ್ನುಳ್ಳವರಾಗಿರುತ್ತಾರೆ. ಇಂತಹ ಶಕ್ತಿಗಳನ್ನುಳ್ಳವರೇ ಯೋಗಿಗಳು.

ಈಶ್ವರನ ಪರಮ ವ್ಯೋಮದಲ್ಲಿ ವಿಶ್ವವೆಲ್ಲಾ ಅಡಗಿದೆ. ಹಾಗೆಯೇ ಜೀವನ ಚಿದಾಕಾಶದಲ್ಲಿ ಇಂದ್ರಿಯಗಳ ಮೂಲಕ ಬರುವ ಎಲ್ಲಾ ವೃತ್ತಿಗಳೂ ಅಡಗಿರುತ್ತವೆ. ಈ ಬಿಂಬ ಪ್ರತಿಬಿಂಬ ಭಾವ ಈಶ್ವರನಿಗೂ ವಿಶ್ವಕ್ಕೂ ಮಾನವನಿಗೂ ಮಾನವನ ತಿಳಿವಳಿಕೆಗೂ ಸಮಾನವಾಗಿದೆ. ಇಲ್ಲಿ ಒಂದು ಚಮತ್ಕಾರವನ್ನು ನಾವು ಗಮನಿಸಬಹುದು. ಬಿಂಬ ಪ್ರತಿಬಿಂಬಗಳಿಗೆ ನಾವು ಕೊಡುವ ದೃಷ್ಟಾಂತಗಳಲ್ಲಿ ಕನ್ನಡಿಯು ಪ್ರತಿಫಲನಕ್ಕೆ ಆಶ್ರಯವಾದ ಪದಾರ್ಥ. ಇದರಲ್ಲಿ ಪ್ರತಿಫಲಿಸಲ್ಪಡುವ ಪದಾರ್ಥವು ಬೇರೆಯಾಗಿರುತ್ತದೆ. ಪ್ರತಿಫಲಿಸಿದ ಪ್ರತಿಕೃತಿಯನ್ನು ನಾವು ಪ್ರತಿಬಿಂಬವೆನ್ನುತ್ತೇವೆ. ಇಲ್ಲಿ ಕನ್ನಡಿ, ಪದಾರ್ಥ, ಪ್ರತಿಬಿಂಬ ಎಂಬ ಮೂರು ಪದಾರ್ಥಗಳನ್ನು ನಾವು ಕಾಣುತ್ತೇವೆ. ಆದರೆ ಈಶ್ವರನಿಗೂ ವಿಶ್ವಕ್ಕೂ ಇರುವ ಬಿಂಬ ಪ್ರತಿಬಿಂಬನ್ಯಾಯ ವಿಲಕ್ಷಣವಾದದ್ದು. ಇಲ್ಲಿ ಮೇಲಿನ ದೃಷ್ಟಾಂತದಲ್ಲಿರುವಂತೆ ಮೂರು ಪದಾರ್ಥಗಳಿಲ್ಲ. ಇಲ್ಲಿ ಚಿದ್ರೂಪಿಯಾದ ಶಿವನೇ ಪ್ರತಿಫಲನಕ್ಕೆ ಆಶ್ರಯವಾಗಿರುವವನೂ ಪ್ರತಿಬಿಂಬರೂಪಿಯೂ ಬಿಂಬರೂಪಿಯೂ ಆಗಿರುತ್ತಾನೆ.

ಸ್ಫಟಿಕವು ಎಲ್ಲಾ ಕಡೆಗಳಲ್ಲಿಯೂ ಸ್ವಚ್ಛವಾಗಿರುವುದರಿಂದ ಎಲ್ಲಾ ಕಡೆಯೂ ಪ್ರತಿಫಲಿಸುವುದಕ್ಕೆ ಸಮರ್ಥವಾಗಿದೆ. ಹಾಗೆ

ಚಿತ್ತು ಯಾವಾಗಲೂ ಸ್ವಚ್ಛವಾಗಿರುವುದರಿಂದ ರೂಪ ರಸಾದಿ ಎಲ್ಲಾ ಗುಣಗಳನ್ನೂ ಮತ್ತು ಪದಾರ್ಥಗಳಲ್ಲಿರುವ ಗುರುತ್ವಾದಿ ವಿಶೇ ಧರ್ಮಗಳನ್ನೂ ಗ್ರಹಿಸುವ ಸಾಮರ್ಥ್ಯವುಳ್ಳದ್ದಾಗಿರುತ್ತದೆ. ಈ ಪ್ರ ಫಲನವು ಅಂತರ್ಮುಖವಾಗಿಯೂ ಬಹಿರ್ಮುಖವಾಗಿಯೂ ಇದೆ ಬಾಹ್ಯ ಪ್ರಪಂಚದ ಪದಾರ್ಥಗಳಿಂದ ಇಂದ್ರಿಯಗಳ ಮೂಲಕ ಪ್ರ ಫಲನವುಂಟಾಗಿ ಸಂತೋಷವೋ ವಿಷಾದವೋ ಉಂಟಾಗುವ ಹಾ ಅಂತರ್ಮುಖವಾದ ಸ್ಮರಣದಿಂದ ಸಂತೋಷ ವಿಷಾದಗಳುಂಟಾಗ ತ್ತವೆ. ಮೊದಲು ಬಾಹ್ಯೇಂದ್ರಿಯ ಪ್ರತಿಫಲನದಿಂದ ನಮ್ಮ ಜ್ಞಾ ತಂತುಗಳಲ್ಲಿ ಒಂದು ಸೂಕ್ಷ್ಮ ಚಲನವುಂಟಾಗುತ್ತದೆ. ಸಂತೋ ದಲ್ಲಿಯೂ ವಿಷಾದದಲ್ಲಿಯೂ ಇಂತಹ ಚಲನಗಳುಂಟಾಗುತ್ತವೆ ಮನುಷ್ಯ ಸ್ವಭಾವದಲ್ಲಿ ಭೌತಿಕ ಶರೀರದಲ್ಲಿ ಇಂತಹ ಚಲನವುಂಟಾಗು ವರೆಗೂ ತೃಪ್ತಿಯಿಲ್ಲ.

ಮನುಷ್ಯನಿಗೆ ತನ್ನ ಜೀವನದಲ್ಲುಂಟಾಗುವ ಸುಖ ದುಃಖಗಳ ಎರಡು ಬಗೆಯಾಗಿ ನಮ್ಮ ಅನುಭವದಲ್ಲಿವೆ. ಆಂತರಂಗಿಕವಾ ಸ್ಮರಣ, ಅನುಸಂಧಾನಗಳಿಂದುಂಟಾಗುವುದೊಂದು ಬಗೆ. ಬಾಹ್ಯ ಪದಾರ್ಥದ ತಿಳಿವಳಿಕೆಗಳು ಮತ್ತು ಇಂದ್ರಿಯಗಳ ಮೂಲಕ ಆಗುವ ಪದಾರ್ಥಸಂಯೋಗಗಳು ಇನ್ನೊಂದು ಬಗೆ. ಈ ಎರಡು ಕ್ರಮ ಗಳಿಂದುಂಟಾಗುವ ಸುಖ ದುಃಖಗಳನ್ನು ವಿಮರ್ಶೆಮಾಡಿದರೆ ಜ್ಞಾನ ತಂತುಗಳ ಚಲನ ಅಥವಾ ಕಂಪನರೂಪವಾಗಿಯೇ ಆಗುವುದೆಂದು ಅನುಭವಕ್ಕೆ ಬರುತ್ತವೆ. ಸುಖ ದುಃಖಗಳು ಭೂತಗಳ ಐದು ಗುಣ ಗಳಲ್ಲಿ ಕೆಲವು ಗುಣಗಳ ಪ್ರತಿಫಲನಗಳಾಗಿ ಅವುಗಳ ದೆಸೆಯಿಂದ ಜ್ಞಾನ ತಂತುಗಳ ಚಲನರೂಪವಾಗಿ ಅವಾಂತರವನ್ನುಂಟುಮಾಡು ತ್ತವೆ. ಕಾಮಕ್ರೋಧಾದಿಗಳು ಇಂತಹ ಅವಾಂತರಗಳು. ಇವೆ ನಮ್ಮ ಅನುಭವದಲ್ಲಿವೆ. ಈ ರೀತಿಯಿಂದಾದ ವೃತ್ತಿಗಳು ಚಿತ್ತಿನಲ್ಲಿ ಸೇರಿದಾಗ ಸುಖ ದುಃಖಾನುಭವರೂಪವಾದ ಅನುಭವವಿಲ್ಲ. ಮರೆ ಸುಖ ದುಃಖಗಳುಂಟಾಗಬೇಕಾದರೆ ಆಂತರೀಯವಾದ ಸ್ಮರಣವಾಗಲಿ ಬಾಹ್ಯವಾದ ಪದಾರ್ಥಸಂಯೋಗವಾಗಲಿ ಇರಬೇಕು. ಜ್ಞಾನ

ಯಾದವನು ಕ್ಷಣಿಕವಾದ ಈ ಸುಖ ದುಃಖಗಳಲ್ಲಿ ಅಭಿಮಾನವನ್ನಿಡುವುದಿಲ್ಲ. ಸುಖ ದುಃಖಗಳು ಕೇವಲ ಪ್ರತಿಬಿಂಬಗಳು ಮಾತ್ರವೆಂದು ತಿಳಿಯುತ್ತಾನೆ. ಹೊರಗಿನ ಪದಾರ್ಥಗಳು ಇಂದ್ರಿಯಗಳಿಗೆ ಸಂಬಂಧಿಸದೆ ಇರುವವರೆಗೂ ನಮಗೆ ಸುಖ ದುಃಖಗಳಿಲ್ಲ. ಇಂದ್ರಿಯಗಳಿಗೆ ಪದಾರ್ಥಗಳ ಸಂಯೋಗವೇರ್ಪಟ್ಟು ಅದರ ತಿಳಿವಳಿಕೆ ಮತ್ತು ಅನುಭವವು ಚಿತ್ತಿನಲ್ಲಿ ಸೇರಿಹೋದರೂ ನಮಗೆ ಸುಖ ದುಃಖಗಳಿಲ್ಲ. ಇಂದ್ರಿಯ ಪದಾರ್ಥ ಸಂಯೋಗದಿಂದ ಜ್ಞಾನವುಂಟಾಗಿ ಚಿತ್ತಿನಲ್ಲಿ ಸೇರುವುದರೊಳಗಿರುವ ಮಧ್ಯಸ್ಥಿತಿಯಲ್ಲಿ ಸುಖ ದುಃಖಗಳುಂಟಾಗುತ್ತವೆ.

ಬಿಂಬ ಪ್ರತಿಬಿಂಬನ್ಯಾಯದ ತಿಳಿವಳಿಕೆಯಿಂದ ಸುಖ ದುಃಖಗಳ ನಿಜಸ್ವರೂಪವು ತಿಳಿದು ಶಾಂತಿಗೆ ಅವಕಾಶವಾಗುತ್ತದೆ.

ನಮಗೆ ಬರುವ ಎಲ್ಲಾ ತಿಳಿವಳಿಕೆಗಳೂ ಪ್ರತಿಬಿಂಬಮಾತ್ರವಾಗಿವೆ. ಅಂತರನುಭವಗಳೇ ಆಗಲಿ ಹೊರಗಿನ ಪದಾರ್ಥಗಳಿಂದುಂಟಾದ ತಿಳಿವಳಿಕೆಗಳೇ ಆಗಲಿ ಈ ಪ್ರತಿಬಿಂಬದ ಎಲ್ಲೆಯನ್ನು ಮೀರಲಾರವು. ಭೇದಜ್ಞಾನಕ್ಕೆ ಆಕರವಾಗಿರುವ ಈ ಪ್ರತಿಬಿಂಬವನ್ನು ಮನನಮಾಡಿದರೆ ಅಭೇದವ್ಯಾಪ್ತಿಯನ್ನುಂಟುಮಾಡುವ ಸ್ವರೂಪಾನುಭವಕ್ಕೂ ಇವುಗಳಿಗೂ ಇರುವ ವ್ಯತ್ಯಾಸವು ತಿಳಿಯುತ್ತದೆ. ದುಃಖಕ್ಕೆ ಕಾರಣಗಳಾಗಿರುವ ಭೇದ ಪ್ರತಿಬಿಂಬಗಳನ್ನು ಉಪೇಕ್ಷಿಸಿ ಸ್ವರೂಪಾನುಭವವನ್ನು ಸಂಪಾದಿಸುವುದಕ್ಕೆ ಬಿಂಬ ಪ್ರತಿಬಿಂಬ ನ್ಯಾಯವು ಪರಮೋಪಕಾರಿಯಾಗಿದೆ. ವಿಶ್ವವೆಲ್ಲಾ ಚಿತ್ತಿನಲ್ಲಿ ಪ್ರತಿಫಲಿಸಿದೆಯೆಂಬ ದೃಢ ವಿಶ್ವಾಸವೇರ್ಪಟ್ಟಲ್ಲಿ ಜೀವನಿಗೆ ರಾಗ ದ್ವೇಷಗಳಿರುವುದಿಲ್ಲ. ಚಿದಾನಂದವನ್ನು ಪಡೆಯುತ್ತಾನೆ.

ತೇನ ಸಂವಿತ್ತಿ ಮುಕುರೆ ವಿಶ್ವಮಾತ್ಮಾನ ಮರ್ಪಯತ್ ।
ನಾಥಸ್ಯ ವದತೋಽಮುಷ್ಯ ವಿಮಲಾಂ ವಿಶ್ವರೂಪತಾಂ ॥

ತಂತ್ರಾಲೋಕ—ಆಹ್ನಿಕ ೩, ಶ್ಲೋಕ ೪೪.

## ತತ್ತ್ವ ಪರಿಗಣನೆ

ಪ್ರಾಚೀನರು ಅಲೌಕಿಕ ವಿಷಯಗಳನ್ನು ತಿಳಿಯುವುದಕ್ಕೆ ಕೆ
ನಿಯಮಗಳನ್ನು ಅಂಗೀಕರಿಸಿರುತ್ತಾರೆ. ಆ ನಿಯಮಗಳನ್ನನುಸ
ಈಗ ನಮ್ಮ ಅನುಭವದಲ್ಲಿರುವ ಲೌಕಿಕ ವಿಷಯಗಳನ್ನು ಅನು
ದಲ್ಲಿಲ್ಲದಿರುವ ಅಲೌಕಿಕ ವಿಷಯಗಳನ್ನೂ ಯಥಾರ್ಥವಾಗಿ ತಿ
ಬಹುದು. ಸ್ಥೂಲವಾದ ಪ್ರಪಂಚಜ್ಞಾನದಿಂದ ಇದಕ್ಕೆ ಕಾ
ವಾಗಿರುವ ಸೂಕ್ಷ್ಮವಾದ ತತ್ತ್ವಗಳನ್ನು ಅರಿಯಬಹುದು. ಈ ವಿಶ್ವ
ಮೂಲ ಕಾರಣವಾಗಿರುವ ತತ್ತ್ವವನ್ನು ತಿಳಿಯಬೇಕಾದರೆ ನಮ್ಮ ಅ
ಭವದಲ್ಲಿರುವ ಸ್ಥೂಲ ಪ್ರಪಂಚದ ಜ್ಞಾನದಿಂದ ಊಹಿಸಬೇ
ಎಲ್ಲಾ ಶಾಸ್ತ್ರಜ್ಞರು ಇಂತಹ ಜ್ಞಾನವನ್ನು ಪಡೆಯುವುದಕ್ಕೆ ತ
ಜ್ಞಾನ ಎಂದು ಹೇಳುತ್ತಾರೆ. ತತ್ ಅಂದರೆ ಅದು. ತತ್ತ್ವ ಅಂ
ಅದರ ನಿಜಸ್ವರೂಪ. ಎಲ್ಲಾ ತತ್ತ್ವಗಳನ್ನೂ ಪ್ರತ್ಯಕ್ಷದಿಂದಲೇ ತಿ
ಯುವುದಕ್ಕೆ ಸಾಧ್ಯವಿಲ್ಲ. ಕೆಲವನ್ನು ಪ್ರತ್ಯಕ್ಷದಿಂದಲೂ ಕೆಲವ
ಅನುಮಾನದಿಂದಲೂ ಮಿಕ್ಕವುಗಳನ್ನು ಆಗಮದಿಂದಲೂ ತಿಳಿ
ಬೇಕು. ಸೂಕ್ಷ್ಮ ತತ್ತ್ವವು ಸ್ಥೂಲ ತತ್ತ್ವವಾಗಬೇಕಾದರೆ ಕೆಲವು ಬ
ಲಾವಣೆಗಳನ್ನು ಪಡೆಯುತ್ತದೆ. ಈ ಬದಲಾವಣೆಗಳನ್ನು ಶಾ
ದಿಂದಲೇ ತಿಳಿಯಬೇಕಾಗಿದೆ. ಈ ತತ್ತ್ವಸ್ವರೂಪಗಳಿಗೆ ಲೌ
ದೃಷ್ಟಾಂತವನ್ನು ಕೊಡುವುದಾದರೆ ಗಣಿತ ಶಾಸ್ತ್ರದ ಅಂಕೆಗಳ
ಹೋಲಿಸಬಹುದು. ಒಂಭತ್ತೆಂಬ ಅಂಕದಲ್ಲಿ ಮಿಕ್ಕ ಎಂಟು ಅ
ಗಳೂ ಇರುತ್ತವೆ. ಅಂದರೆ ಸ್ಥೂಲವಾದ ವಿಶ್ವದಲ್ಲಿ ಸೂಕ್ಷ್ಮವಾದ
ಅಡಗಿದೆ. ಒಂದು ಎಂಬ ಅಂಕ ಬೆಳೆಯುತ್ತಾ ಹೋದರೆ ಹತ್ತ
ವರೆಗೂ ನಡೆಯುತ್ತದೆ. ಅನಂತರ ಸಂಕಲನ ವ್ಯವಕಲನಾದಿ ಭೇ
ಗಳಿಂದ ಅನಂತವಾದ ವ್ಯಾಪ್ತಿಯನ್ನು ಪಡೆಯುತ್ತದೆ. ಲೆಕ್ಕ
ಒಂಭತ್ತು ಅಂಕಗಳು ಹೇಗೆ ಅನಂತವಾದ ವ್ಯವಹಾರಕ್ಕೆ ಕಾರಣವಾ
ತ್ತವೆಯೋ ಅದೇ ರೀತಿಯಾಗಿ ೩೬ ತತ್ತ್ವಗಳು ವಿಶ್ವದ ಬೆಳವಣಿಗೆ
ತಿಳಿವಳಿಕೆಗೂ ಕಾರಣವಾಗಿರುತ್ತವೆ. ಮೊದಲನೆಯದಾದ ಶಿವ ತ
ದಲ್ಲಿ ಮಿಕ್ಕ ಮೂವತ್ತೈದು ತತ್ತ್ವಗಳು ಅಡಗಿವೆ. ಹಾಗೆಯೇ ಶ

ವಾಗಿ ಮೇಲಿನ ತತ್ವದಲ್ಲಿ ಕೆಳಗಿನ ತತ್ವಗಳು ಅಡಗಿರುತ್ತವೆ. ಕೆಳಗಿನ ತತ್ವಗಳು ಮೇಲಿನ ತತ್ವಗಳ ಸಂಬಂಧವಿಲ್ಲದೆ ಇರಲಾರವು. ಒಂದು ವ್ಯಕ್ತಿಯ ಸಂಪುಟದಲ್ಲಿ ಮೂವತ್ತಾರು ತತ್ವಗಳು ಕೇಂದ್ರೀಕೃತವಾಗಿರುವುದು ಸೃಷ್ಟಿಯ ವೈಚಿತ್ರ್ಯ. ಇದನ್ನು ಪಿಂಡಾಂಡವೆಂದು ಹೇಳುವ ರೂಢಿಯಿದೆ. ಈ ಮಹಾ ವಿಶ್ವವೂ ಕೂಡ ಮೂವತ್ತಾರು ತತ್ವಗಳ ಸಂಪುಟವೇ ಆಗಿದೆ. ಸ್ಥೂಲವಾದ ವಿಶ್ವವು ಪ್ರಳಯವಾಗಿ ಸೂಕ್ಷ್ಮವಾದ ತತ್ವದಲ್ಲಿ ಸೇರುವುದುಂಟು. ಮರಳಿ ಈಶ್ವರೇಚ್ಛೆಯಿಂದ ಮಹಾ ವಿಶ್ವವು ಸೃಷ್ಟಿಯಾಗುತ್ತದೆ. ಈ ಮಹಾ ವಿಶ್ವಕ್ಕೆ ಬ್ರಹ್ಮಾಂಡವೆಂದು ಸಂಜ್ಞೆ. ಬ್ರಹ್ಮಾಂಡದಲ್ಲಿರುವ ಎಲ್ಲಾ ಅಂಶಗಳೂ ಪಿಂಡಾಂಡದಲ್ಲಿ ಸೂಕ್ಷ್ಮರೂಪದಿಂದಿರುತ್ತವೆ. ಪಿಂಡಾಂಡದಲ್ಲಿರುವ ಎಲ್ಲಾ ಅಂಶಗಳೂ ಬ್ರಹ್ಮಾಂಡದಲ್ಲಿ ವಿಸ್ತಾರವಾಗಿರುತ್ತವೆ. ಹೀಗೆ ಮಹಾವಿಶ್ವದ ಸೃಷ್ಟಿ ಸ್ಥಿತಿ ಪ್ರಳಯಗಳು ಮೂವತ್ತಾರು ತತ್ವಗಳಿಂದ ನಡೆಯುತ್ತಿರುತ್ತವೆ. ಆ ಮೂವತ್ತಾರು ತತ್ವಗಳು ಈ ರೀತಿಯಲ್ಲಿ ಪರಿಗಣಿಸಲ್ಪಟ್ಟಿವೆ.

| ಪರಮಶಿವ | ವಿಶ್ವೋತ್ತೀರ್ಣ | ಪರಾವಸ್ಥೆ | ಪೂರ್ಣ ಅಹಂಭಾವ |
|---|---|---|---|
| ಶಿವ — ಶಕ್ತಿ — ಸದಾಶಿವ — ಈಶ್ವರ — ಶುದ್ಧವಿದ್ಯಾ | ಈ ಐದು ಶುದ್ಧಾಧ್ವಗಳು | ಪರಾಪರಾವಸ್ಥೆ. | ಇಲ್ಲಿ ಅಹಂಭಾವ ಇದಂಭಾವ ಎರಡೂ ಇರುತ್ತವೆ. |
| ಮಾಯಾ — ಕಲಾ — ವಿದ್ಯಾ — ರಾಗ — ಕಾಲ — ನಿಯತಿ | ಮಾಯಾ ಕೆಳಗಿರುವ ತತ್ವಗಳು ಅಶುದ್ಧಾಧ್ವಗಳು. ಇವುಗಳಲ್ಲಿ ಮಾಯೆಯಿಂದ ನಿಯತಿವರೆಗೂ ಇರುವವುಗಳು ಷಟ್ಕಂಚುಕಗಳು. | ಅಪರಾವಸ್ಥೆ | ಈ ೩೧ ತತ್ವಗಳು ಪೂರ್ತಿ ಇದಂ ಭಾವಾಪನ್ನವಾಗಿರುತ್ತವೆ. |

ಪುರುಷ ಪ್ರಕೃತಿ ಬುದ್ಧಿ ಅಹಂಕಾರ ಮನಸ್ಸು

ಜ್ಞಾನೇಂದ್ರಿಯಗಳು: ಶ್ರವಣೇಂದ್ರಿಯ, ಸ್ಪರ್ಶನೇಂದ್ರಿಯ, ದರ್ಶನೇಂದ್ರಿಯ, ರಸನೇಂದ್ರಿಯ, ಘ್ರಾಣೇಂದ್ರಿಯ.

ಕರ್ಮೇಂದ್ರಿಯಗಳು: ವಾಕ್, ಪಾಣಿ, ಪಾದ, ಪಾಯು, ಉಪಸ್ಥ.

ತನ್ಮಾತ್ರಗಳು: ಶಬ್ದ ತನ್ಮಾತ್ರ, ಸ್ಪರ್ಶ ತನ್ಮಾತ್ರ, ರೂಪ ತನ್ಮಾತ್ರ, ರಸ ತನ್ಮಾತ್ರ, ಗಂಧ ತನ್ಮಾತ್ರ.

ಪಂಚಭೂತಗಳು: ಪೃಥವಿ, ಅಪ್ಪು, ತೇಜಸ್ಸು, ವಾಯು, ಆಕಾಶ.

ಈ ಮೂವತ್ತಾರು ತತ್ವಗಳ ಸರಿಯಾದ ತಿಳಿವಳಿಕೆಯಿಂದ ಪಿಂಡಾಂಡ ಮತ್ತು ಬ್ರಹ್ಮಾಂಡಗಳ ನಿಜಸ್ಥಿತಿಯು ಅರಿವಾಗುತ್ತದೆ. ಸಾಮಾನ್ಯ ಮನುಷ್ಯರಿಗೆ ಈ ತತ್ವಗಳ ಅರಿವು ವಿಶದವಾಗಿ ಮೊದಮೊದಲು ಆಗದಿರಬಹುದು. ಈ ಕೆಳಗಿನ ವಿವರಗಳನ್ನು ತಿಳಿಯುವುದರಿಂದ ಸುಲಭ ಗ್ರಾಹ್ಯವಾಗುವುದು. ಪೃಥವ್ಯಾದಿ ಪಂಚ ಭೂತಗಳೂ ಚಕ್ಷುರಾದಿ ಇಂದ್ರಿಯಗಳೂ ಎಲ್ಲರ ಅನುಭವದಲ್ಲಿವೆ. ಹೀಗೆ ತಿಳಿದಿರುವ ಮತ್ತು ತಿಳಿಯದಿರುವ ತತ್ವಗಳನ್ನು ತನ್ನ ಸ್ವಪ್ರಯತ್ನದಿಂದಲೂ ಭಾವನಾಬಲದಿಂದಲೂ ವಿಶದವಾಗಿ ಸಾಕ್ಷಾತ್ಕರಿಸಿಕೊಳ್ಳಬೇಕು. ಪ್ರಪಂಚದಲ್ಲಿ ನಮ್ಮ ತಿಳಿವಳಿಕೆಯು ಭಾವರೂಪವಾಗಿಯೂ ಅಭಾವ ರೂಪವಾಗಿಯೂ ಇದೆ. ಭಾವ ರೂಪವೆಂದರೆ ಈ ಪದಾರ್ಥವಿದೆ, ಈ ಅಂಶ ನನಗೆ ತಿಳಿದಿದೆ ಅನ್ನುವ ತಿಳಿವಳಿಕೆ. ಅಭಾವರೂಪವೆಂದರೆ ಈ ಪದಾರ್ಥವಿಲ್ಲ ಈ ವಿಷಯ ನನಗೆ ತಿಳಿದಿಲ್ಲ ಎಂಬ ತಿಳಿವಳಿಕೆ. ಭಾವ ರೂಪವಾದ ಇದೆ ಎಂಬ ತಿಳಿವಳಿಕೆ ಎಷ್ಟು ಪ್ರಯೋಜಕವೋ ಅಭಾವ ರೂಪವಾದ ಇಲ್ಲ ಎಂಬ ತಿಳಿವಳಿಕೆಯು ಅಷ್ಟೆ ಮಹತ್ವವುಳ್ಳದ್ದಾಗಿರುತ್ತದೆ. ಹೀಗೆ ಇಲ್ಲ ಎಂಬ ತಿಳಿವಳಿಕೆಯು ಮುಂದಿನ ವ್ಯವಹಾರಕ್ಕೆ ಸಹಕಾರಿಯಾಗಿರುವುದರಿಂದ ಅಭಾವ ವ್ಯವಹಾರವು ಲೌಕಿಕ ವಿಷಯಗಳಲ್ಲಿಯೂ ಅಲೌಕಿಕ ವಿಷಯಗಳಲ್ಲಿಯೂ ಮುಖ್ಯವಾದದ್ದಾಗಿರುತ್ತದೆ. ಅಲೌಕಿಕ ವಿಷಯಗಳಲ್ಲಿ ಅಭಾವ ಪದಾರ್ಥ ಎಂದರೆ ಅನುಮಾನದಿಂದ ಇದೆ ಅಂತ ತಿಳಿದರೂ ದೇಶ ಕಾಲ ... ವಿಶಿಷ್ಟವಾಗಿ

ತಿಳಿಯಲಿಲ್ಲ ಎಂದರ್ಥ. ಲೌಕಿಕ ವ್ಯವಹಾರದಲ್ಲಿಯೂ ಇಲ್ಲ ಎಂದರೆ ಆ ಪದಾರ್ಥವು ನಿರ್ದಿಷ್ಟ ಸಮಯದಲ್ಲಿ ಆ ಪ್ರದೇಶದಲ್ಲಿ ಸಿದ್ಧವಾದ ಆಕಾರದಿಂದ ಇಲ್ಲವೆಂದರ್ಥ. ಇದು ನಮ್ಮೆಲ್ಲರ ಅನುಭವದಲ್ಲಿದ್ದರೂ ನಮ್ಮ ತಿಳಿವಳಿಕೆಯ ಸ್ವರೂಪ ಮತ್ತು ಸ್ವಭಾವಗಳನ್ನು ವಿವೇಚಿಸ ದಿರುವುದರಿಂದ ನಮ್ಮಲ್ಲಿಲ್ಲದೆ ಇರುವುದನ್ನು ಇದೆಯೆಂದೂ ಇರುವು ದನ್ನು ಇಲ್ಲವೆಂದೂ ತಿಳಿಯುತ್ತೇವೆ. ಇದನ್ನೇ ಅಜ್ಞಾನ, ಅಖ್ಯಾತಿ, ಮಿಥ್ಯಾಜ್ಞಾನ ಇವೇ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈ ಬಗೆಯ ತಿಳಿವಳಿಕೆಯೇ ರಾಗ ದ್ವೇಷ ಮೋಹಗಳಿಗೆ ಕಾರಣವಾಗು ತ್ತದೆ. ನಮ್ಮ ಅನುಭವದಲ್ಲಿಯೇ ಅನೇಕ ಭಾವನೆಗಳು ಉದ್ರಿಕ್ತವಾಗಿ ಸ್ವಲ್ಪಕಾಲವಿದ್ದು ತಿರುಗಿ ಸೂಕ್ಷ್ಮವಾಗಿ ಅಭಾವರೂಪವನ್ನು ಪಡೆಯು ತ್ತವೆ. ಆಗ ಈ ಭಾವನೆಗಳು ಸಂಸ್ಕಾರ ರೂಪದಿಂದಿದ್ದು ಕಾಲಾಂತರ ದಲ್ಲಿಯೋ ದೇಶಾಂತರದಲ್ಲಿಯೋ ಅಭಿವ್ಯಕ್ತವಾಗುವುದು ನಮ್ಮೆಲ್ಲರ ಅನುಭವದಲ್ಲಿದೆ.

ಸಂಪೂರ್ಣವಾಗಿ ತತ್ವ ಸಾಕ್ಷಾತ್ಕಾರವನ್ನು ಪಡೆದಿರುವ ಜ್ಞಾನಿ ಗಳು ತತ್ವಗಳನ್ನು ಮೂವತ್ತಾರು ಎಂದು ನಿರೂಪಿಸಿರುತ್ತಾರೆ. ಪ್ರಕೃತ ದಲ್ಲಿ ನಮಗೆ ಆ ಮೂವತ್ತಾರು ತತ್ವಗಳು ವಿಶದವಾಗಿ ತೋರದಿದ್ದರೂ ಪಿಂಡಾಂಡದಲ್ಲಿಯೇ ಎಲ್ಲಾ ಅಂಶಗಳೂ ಅಡಗಿರುವುದೆಂಬ ತಿಳಿವಳಿಕೆ ಯಿಂದ ಅನುಭವಕ್ಕೆ ಬರುತ್ತಿರುವ ಕೆಲವು ತತ್ವಗಳ ಸಹಾಯದಿಂದ ಅನುಭವಕ್ಕೆ ಬಾರದಿರುವ ತತ್ವಗಳನ್ನು ಸಾಕ್ಷಾತ್ಕರಿಸಬಹುದು. ಇದಕ್ಕೆ ಕೆಲವು ನಿಯಮಗಳನ್ನೂ ಉಪಾಯಗಳನ್ನೂ ಸೂಚಿಸಿರು ತ್ತಾರೆ. 'ದೃಷ್ಟೇನ ಅದೃಷ್ಟ ಸಿದ್ಧಿಃ'- ತಿಳಿದದ್ದರಿಂದ ತಿಳಿಯದೆ ಇರುವುದನ್ನು ತಿಳಿಯಬೇಕೆಂಬ ನಿಯಮದಂತೆ ತತ್ವ ಸಾಕ್ಷಾತ್ಕಾರ ವನ್ನು ಅನುಮಾನದಿಂದಲೂ ಭಾವನಾಬಲದಿಂದಲೂ ಸಾಧಿಸಬೇಕು. ಮೊದಲು ತಿಳಿವಳಿಕೆ, ಅನಂತರ ಇಚ್ಛೆ, ತರುವಾಯ ಪ್ರಯತ್ನ, ಕೊನೆಯದಾಗಿ ಸಾಕ್ಷಾತ್ಕಾರ ಈ ರೀತಿಯಾಗಿ ಮೊದಲು ನಮಗೆ ಶಾಸ್ತ್ರದಿಂದ ತಿಳಿವಳಿಕೆಯುಂಟಾಗುತ್ತದೆ. ನಮ್ಮ ಸಂಸ್ಕಾರಾನು ಗುಣವಾಗಿ ಇಚ್ಛೆಯುಂಟಾಗುತ್ತದೆ. ನಮ್ಮ ಧೈರ್ಯ ಶ್ರದ್ಧೆಗಳಿಗನು

ಸಾರವಾಗಿ ಪ್ರಯತ್ನ ನಡೆಯುತ್ತದೆ. ನಮ್ಮ ಪ್ರಯತ್ನದ ವೈಶಿಷ್ಟ್ಯ ಕ್ಕನುಸಾರವಾಗಿ ಫಲಪ್ರಾಪ್ತಿಯಾಗುತ್ತದೆ. ಈ ಕ್ರಮದಲ್ಲಿ ನಾಶ ತತ್ವಗಳನ್ನು ವಿವೇಚಿಸಬೇಕಾಗುತ್ತದೆ.

ಮೂವತ್ತಾರು ತತ್ವಗಳ ಸ್ವರೂಪ ನಿರೂಪಣೆಯು ಈ ಮುಂ ವಿವರಿಸಿರುವ ರೀತಿಯಲ್ಲಿದೆ.

## ಶುದ್ಧಾಧ್ವಗಳು

**ಶಿವತತ್ವ :**—ಚಿತ್ ಆನಂದ ಇಚ್ಛಾ ಜ್ಞಾನ ಕ್ರಿಯಾಶಕ್ತಿ ಗಳಲ್ಲಿ ಜ್ಞಾನ ಇಚ್ಛಾ ಕ್ರಿಯಾಶಕ್ತಿಗಳು ಸಮಾನವಾಗಿದ್ದು ಅ ಗಳಿಲ್ಲದ ಸಮುದ್ರದಂತೆ ಪ್ರಶಾಂತವಾದ ಚಿದ್ರೂಪದಿಂದಿರುವವನ ಶಿವನು. ಈ ಸ್ಥಿತಿಯಲ್ಲಿ 'ಅಹಂ' 'ಇದಂ' ಎಂಬ ಭೇದವಿಲ್ಲ ಕರ್ತೃ ಕರ್ಮ ಕ್ರಿಯಾ ರೂಪವಾದ ವ್ಯತ್ಯಾಸಗಳಿಲ್ಲ. ಮುಂದೆ ಸಪ್ತ ಪ್ರಮಾತೃಗಳ ರೂಪದಲ್ಲಿ ಬದಲಾವಣೆಯಾಗುವ ಕಾಲದಲ್ಲುಂಟಾಗು ಮಲಗಳಿಲ್ಲ. ಅಹಂಕಾರವೂ ಇಲ್ಲ. ಇದು ಪೂರ್ಣವಾದ ಚಿದ್ರೂ ವಾಗಿರುತ್ತದೆ. ಇದು ವಿಶ್ವಾತ್ಮಕವಾಗಿ ಮಿಕ್ಕ ೩೫ ತತ್ವಗಳನ್ನೊ ಗೊಂಡಿದೆ. ಇಲ್ಲಿನ ಶಿವನಿಗೆ ಅನಾಶ್ರಿತ ಶಿವನೆಂದು ಹೇಳುತ್ತಾರೆ.

**ಶಕ್ತಿ ತತ್ವ :**—ಪ್ರಶಾಂತವಾದ ಚಿತ್ಸಮುದ್ರದಲ್ಲಿ 'ಈ ತ್ಸ್ಫುರತ್ತಾ' ಅಂದರೆ ಸ್ವಲ್ಪ ಚಲನವಾಗಿ ಜ್ಞಾನ ಇಚ್ಛಾ ಕ್ರಿಯಾ ಶಕ್ತಿಗಳು ಜ್ವಾಲೆಯಿಂದ ಹೊರಟ ಕಾಂತಿಯಂತೆ ಹೊರಹೊಮ್ಮಿದ ಅದು ಶಕ್ತಿ ತತ್ವವಾಗುತ್ತದೆ. ಶಿವ ತತ್ವದಲ್ಲಿ ಚಿತ್ ಶಕ್ತಿಯ ಪ್ರಧಾನವಾಗಿರುತ್ತವೆ. ಶಕ್ತಿ ತತ್ವದಲ್ಲಿ ಆನಂದ ಶಕ್ತಿಯು ಪ್ರಧಾ ವಾಗಿರುತ್ತದೆ. ಶಿವ ತತ್ವದಿಂದ ಶಕ್ತಿ ತತ್ವವು ಸಂಪೂರ್ಣವಾಗಿ ಭಿ ವಲ್ಲ. 'ದೀಪಪ್ರಭಾ' ನ್ಯಾಯದಂತೆ ಒಂದನ್ನೊಂದು ಬಿಡದೆ ಇ ತ್ತದೆ. ಚಿಚ್ಛಕ್ತಿಯಿಲ್ಲದೆ ಆನಂದ ಶಕ್ತಿಯಿಲ್ಲ. ಒಂದಕ್ಕೊಂದು ಪರಸ್ಪರ ಅಧೀನ.

**ಸದಾಶಿವ ತತ್ವ :**—ಇದು ಮೂರನೆಯ ತತ್ವ. ಇಲ್ಲಿ ಹಿಂದಿ ಶಿವಶಕ್ತಿ ತತ್ವಗಳಿಗಿಂತ ಮುಖ್ಯವಾದ ಬದಲಾವಣೆ ಎಂದರೆ 'ಅಹಂ

ಚ್ಛಾದಿತ ಅಸ್ಪಷ್ಟ ಇದಂತಾ' ಎಂದು ಶಾಸ್ತ್ರದಲ್ಲಿ ಹೇಳಿದೆ. 'ಅಸ್ಪಷ್ಟ ಇದಂತಾ' ಅಂದರೆ ಸ್ವರೂಪಾಭಿನ್ನವಾಗಿರುವ ವಿಶ್ವ - ಗೌಣವಾದ ಗ್ರಾಹ್ಯತ್ವ. 'ಅಹಂತಾ' ಅಂದರೆ ಗ್ರಾಹಕತ್ವ. ಇಲ್ಲಿ ಗ್ರಾಹಕ ಭಾವವು ಪ್ರಧಾನವಾಗಿದ್ದು ಗ್ರಾಹ್ಯಭಾವವು ಪರಾಪರ ವಿಶ್ವರೂಪವಾಗಿ ಗೌಣವಾಗಿರುತ್ತದೆ. ಅಸಂಖ್ಯಾತರಾದ ಪ್ರಮಾತೃಗಳು ಇಲ್ಲಿಂದ ಮೊದಲಾಗುತ್ತಾರೆ. ಈ ತತ್ವದಲ್ಲಿರುವ ಪ್ರಮಾತೃಗಳಿಗೆ 'ಮಂತ್ರ ಮಹೇಶ್ವರ'ರೆಂದು ಹೆಸರು.

**ಈಶ್ವರ ತತ್ವ:—**ಈ ತತ್ವದಲ್ಲಿ ಗ್ರಾಹ್ಯ ಗ್ರಾಹಕ ಭಾವಗಳು ಸಮಾನವಾಗಿರುತ್ತವೆ. 'ಉದ್ರಿಕ್ತ ಕ್ರಿಯಾಶಕ್ತಿಃ ಈಶ್ವರಃ' ಎಂದು 'ಶಿವದೃಷ್ಟಿ'ಯಲ್ಲಿ ಹೇಳಿದೆ. ಈಶ್ವರ ಅಂದರೆ ಐಶ್ವರ್ಯಭಾವವುಳ್ಳವನು. ಈ ಕ್ರಿಯಾಶಕ್ತಿಯೇ ಮುಂದಿನ ಎಲ್ಲಾ ಸೃಷ್ಟಿಗೂ ಕಾರಣ. ಈ ಕ್ರಿಯಾಶಕ್ತಿಯು ಈಶ್ವರ ತತ್ವದಲ್ಲಿ ವಿಶಿಷ್ಟವಾಗಿರುತ್ತದೆ ಮತ್ತು ಮುಂದಿನ ತತ್ವಗಳ ಸೃಷ್ಟಿಗೆ ಕಾರಣವಾಗುತ್ತದೆ. ಇಲ್ಲಿಯೇ ಇಚ್ಛಾ ಜ್ಞಾನ ಶಕ್ತಿಗಳು ವಿಭಿನ್ನವಾಗಿ ರೂಪುಗೊಳ್ಳುತ್ತವೆ. ಈ ತತ್ವದಲ್ಲಿರುವ ಪ್ರಮಾತೃ ವರ್ಗಕ್ಕೆ 'ಮಂತ್ರೇಶ್ವರ'ರೆಂದು ಹೆಸರು.

**ಶುದ್ಧ ವಿದ್ಯಾ ತತ್ವ:—**ಇಲ್ಲಿ ಗ್ರಾಹ್ಯ ಗ್ರಾಹಕ ಭಾವಗಳು ಸಾಮಾನಾಧಿಕರಣ್ಯದಿಂದಿರುತ್ತವೆ. ಈ ತತ್ವದಲ್ಲಿ ಮುಂದಿನ ವಿಶ್ವವು ಭೇದ ಪ್ರಧಾನವಾಗಿದ್ದು ಗ್ರಾಹಕರಿಗೆ ಪ್ರಮೇಯವಾಗಿರುತ್ತದೆ. ಇಲ್ಲಿರುವ ಪ್ರಮಾತೃಗಳಿಗೆ ಭೇದವೇ ಪ್ರಧಾನವಾಗಿರುವ ವಿಶ್ವವೆಲ್ಲಾ ಪ್ರಮೇಯವಾಗಿರುತ್ತದೆ. ಅಂದರೆ ಇಲ್ಲಿನ ಪ್ರಮಾತೃಗಳು 'ಭಿನ್ನ ವೇದ್ಯ ಪ್ರಥಾತ್ಮಕ'ವಾದ ವಿಶ್ವವನ್ನೆಲ್ಲಾ ತಿಳಿಯುವವರಾಗಿರುತ್ತಾರೆ. ಇಲ್ಲಿನ ಪ್ರಮಾತೃಗಳಿಗೆ 'ಮಂತ್ರ'ರೆಂದು ಹೆಸರು.

ಈ ಐದು ತತ್ವಗಳಿಗೂ ಶುದ್ಧವಿದ್ಯಾ ತತ್ವಗಳೆಂದು ಹೆಸರು. ಇದರಲ್ಲಿ ಮೊದಲನೆಯದಾದ ಶಿವ ತತ್ವದಲ್ಲಿ ಶುದ್ಧ ಚಿದ್ರೂಪವಾದ ಪೂರ್ಣಾಹಂತಾನುಭವ. ಎರಡನೆಯ ಶಕ್ತಿ ತತ್ವದಲ್ಲಿ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳ ಸ್ಫುರಣ. ಮೂರನೆಯ ಸದಾಶಿವ ತತ್ವದಲ್ಲಿ ಗ್ರಾಹ್ಯ

ಗ್ರಾಹಕಗಳಿಗೆ ಪ್ರಾರಂಭ. ನಾಲ್ಕನೆಯ ಈಶ್ವರ ತತ್ವದಲ್ಲಿ ಗ್ರಾಹ್ಯ ಗ್ರಾಹಕಗಳ ಸಮಪ್ರಧಾನತಾ. ಐದನೆಯ ಶುದ್ಧ ವಿದ್ಯಾ ತತ್ವದಲ್ಲಿ ಭೇದ ಪ್ರಧಾನವಾದ ಗ್ರಾಹ್ಯಭಾವವೂ ಗ್ರಾಹಕ ನಿಷ್ಪತ್ತಿಯೂ ಆಗಿರುತ್ತದೆ. ಆ ಗ್ರಾಹಕರಿಗೆ ವಿಶ್ವವೆಲ್ಲಾ ಪ್ರಮೇಯು.

ಈಶ್ವರೋ ಬಹಿರುನ್ಮೇಷೋಂತಸ್ಸದಾಶಿವಃ ।
ಸಾಮಾನಾಧಿಕರಣ್ಯಂಚ ಸದ್ವಿದ್ಯಾಹಮಿದಂಧಿಯೋಃ ॥

## ಅಶುದ್ಧಾಧ್ವಗಳು

ಇವುಗಳಲ್ಲಿ ಮೊದಲನೆಯ ತತ್ವ ಮಾಯಾ. ಮಾತಿಯಾತಿ ಇತಿಮಾಯಾ - ಮಾತಿ ಅಂದರೆ 'ವಿಶ್ವಂ ಆತ್ಮಸಾತ್ಕರೋತಿ ಪ್ರಳಯೆ' ಪ್ರಳಯ ಕಾಲದಲ್ಲಿ ವಿಶ್ವವನ್ನು ತನ್ನಲ್ಲಿ ಉಪಸಂಹರಿಸಿಕೊಳ್ಳುತ್ತದೆ. ಯಾತಿ ಅಂದರೆ 'ವಿಸೃಜತಿ ಸೃಷ್ಟೌ.' ವಿಶ್ವವನ್ನು ಸೃಷ್ಟಿಮಾಡುತ್ತದೆ ಮಾಯೆಯು ಅಚಿದ್ರೂಪವಾದ ಶರೀರಾದಿ ವಿಷಯುಗಳಲ್ಲಿ ನಾನು ಎಂಬ ಪ್ರಮಾತೃತ್ವ ಅಭಿಮಾನವನ್ನುಂಟುಮಾಡುತ್ತದೆ. ಭಾವಗಳು ಅಥವಾ ಪದಾರ್ಥಗಳು ಚಿನ್ಮಯಗಳೇ ಆಗಿದ್ದರೂ ಇವುಗಳೆಲ್ಲಾ ಬೇರೆ ಬೇರೆಯೆಂದು ಅಭಿಮಾನವನ್ನು ಹುಟ್ಟಿಸುತ್ತದೆ. ಎಲ್ಲಾ ವಿಧದಲ್ಲಿಯೂ ಪದಾರ್ಥಗಳ ತತ್ವಸ್ವರೂಪವನ್ನು ಮರೆಸಿ ಭೇದಜ್ಞಾನವನ್ನುಂಟು ಮಾಡುತ್ತದೆ. ಚಿದ್ರೂಪವನ್ನು ಭಿನ್ನವಾಗಿಯೂ ಚಿತ್ತನ್ನು ಅಚಿತ್ತನ್ನಾಗಿಯೂ ತೋರಿಸುತ್ತದೆ. ಇದು ಪರಮೇಶ್ವರನ ಮಾಯಾಶಕ್ತಿಯಾಗಿರುತ್ತದೆ. ನಾನು ಎಂಬ ಅಹಂ ವ್ಯವಹಾರವು ಈ ಮಾಯೆಯ ಪ್ರಭಾವವೇ. ಹೆಂಡತಿ ಮಕ್ಕಳು ಐಶ್ವರ್ಯ ಮುಂತಾದ ದೂರವಾದ ವಸ್ತುಗಳಲ್ಲಿಯೂ ನಾನು ನನ್ನದು ಎಂಬ ತೀವ್ರ ಅಭಿಮಾನವನ್ನು ಹುಟ್ಟಿಸುತ್ತದೆ. ನಿದ್ದೆಯಲ್ಲಿಯೂ ಸಮಾಧಿಯಲ್ಲಿಯೂ ತಾನು ಇಲ್ಲವೆಂಬಂತಹ ಸ್ಥಿತಿಯಿದ್ದರೂ ಆಕಾಶದಂತೆ ವೇದ್ಯಭಾವದಿಂದ ನಾನು ಎನ್ನುವುದು ತೋರುತ್ತದೆ. ಶೂನ್ಯವಾಗಿ ಆಕಾಶದ ಹಾಗೆ ತಿಳಿಯಲ್ಪಡತಕ್ಕ ಸ್ಥಿತಿಯಿಂದ ನಾನು ಎಂದು ತೋರುತ್ತದೆ. ಉಚ್ಛ್ವಾಸ ನಿಶ್ವಾಸಗಳಲ್ಲಿ ನಾನು ಉಸಿರುಬಿಡುತ್ತೇನೆ ಎಂಬ ಅಭಿಮಾನ ಉಂಟಾಗುತ್ತದೆ. ನಾನು

ಸಣ್ಣಗಾಗಿದ್ದೇನೆ ದಪ್ಪಗಾಗಿದ್ದೇನೆ ಎಂಬುದರಲ್ಲಿ ಶರೀರವೇ ನಾನ ಎಂದು ತೋರುತ್ತದೆ. ಆದುದರಿಂದ ಒಳಗೂ ಹೊರಗೂ ಇರುವ ತಿಳಿವಳಿಕೆಗಳು ಭಾವಗಳು ಅಥವಾ ಪದಾರ್ಥಗಳು ಚಿನ್ಮಾತ್ರಸಾರಗಳಾಗಿಯೇ ಇದ್ದರೂ ಬೇರೆ ಬೇರೆಯಾಗಿ ತೋರುತ್ತವೆ.

ತಸ್ಮೈಶ್ವರ್ಯ ಸ್ವಭಾವಸ್ಯ ಪಶುಭಾವೆ ಪ್ರಕಾಶಿಕಾ।
ವಿದ್ಯಾಶಕ್ತಿಃ ತಿರೋಧಾನಕರೀ ಮಾಯಾಭಿಧಾಪುನಃ।

ಈಶ್ವರ ಪ್ರತ್ಯಭಿಜ್ಞಾ ೩-೭.

ಭೇದೆ ತ್ವೆಕರಸೆಭಾತೇ ಅಹಂತಯಾ ಅನಾತ್ಮನೀಕ್ಷಿತೆ।
ಶೂನ್ಯೆ ಬುದ್ಧೌ ಶರೀರೆ ವಾ ಮಾಯಾ ಶಕ್ತಿಃ ವಿಜೃಂಭತೆ।

ಈಶ್ವರ ಪ್ರತ್ಯಭಿಜ್ಞಾ ೩-೮.

ಶುದ್ಧ ಚಿನ್ಮಾತ್ರಾವಸ್ಥೆಯಲ್ಲಿ ಕೇವಲ ಪ್ರಮಾತೃವಾಗಿರುತ್ತಾನೆ. ಕಲಾದಿ ಪಂಚಕದಿಂದ ಕೂಡಿದರೆ ಪ್ರಮಾತೃ ಪ್ರಮೇಯ ಎರಡೂ ಆಗುವನು. ಮೇಲಿನ ತತ್ವವು ಕೆಳಗಿನ ತತ್ವಗಳನ್ನೆಲ್ಲಾ ಆವರಿಸಿರುತ್ತೆಂಬುದು ನಿಯಮ. ಹಾಗೆಯೇ ಮಾಯೆಯು ಕೆಳಗಿನ ಮಿಕ್ಕ ಮೂವತ್ತು ತತ್ವಗಳನ್ನಾವರಿಸಿರುತ್ತದೆ. ಬೇರೆ ಸಂಪ್ರದಾಯಗಳಂತೆ ಇಲ್ಲಿ ಮಾಯೆ ಎಂಬುದಕ್ಕೆ ಮಿಥ್ಯೆ ಎಂಬರ್ಥವಿಲ್ಲ. ಇದು ಪರಮೇಶ್ವರನ ಶಕ್ತಿ. ಮೂವತ್ತು ತತ್ವಗಳ ರೂಪವನ್ನು ಪಡೆಯುವ ಮಹತ್ವವುಳ್ಳಂಥಾದ್ದು. ಮಾಯೆಯನ್ನು ದಾಟಬೇಕೆನ್ನುವ ಪ್ರಾಚೀನರ ನುಡಿಗಳು ಶುದ್ಧವಿದ್ಯಾಪದಪ್ರಾಪ್ತಿಯಾಗಬೇಕೆಂದು ಸೂಚಿಸುತ್ತವೆ. ಮಾಯೆಯ ಮೇಲೆ ಶುದ್ಧವಿದ್ಯಾ ತತ್ವದ ಕೆಳಗಿರುವ ಅಂತರ ಸ್ಥಿತಿಯಲ್ಲಿ ವಿಜ್ಞಾನಾಕಲರೆಂಬ ಪ್ರಮಾತೃವರ್ಗವಿರುತ್ತದೆ.

## ಪಂಚ ಕಂಚುಕಗಳು

ಕಲಾ.—ಇದು ಕಿಂಚಿತ್ಕರ್ತೃತ್ವವನ್ನು ತೋರಿಸುತ್ತದೆ.

ವಿದ್ಯಾ.—ವಿದ್ಯೆಯು ಪ್ರಮಾತೃವಿನ ಕಿಂಚಿಜ್ಞತ್ವವನ್ನು ತೋರ್ಪಡಿಸುತ್ತಿರುವುದಾಗಿದೆ. ಇದು ಪ್ರಮಾತೃ ಪ್ರಮೇಯಗಳೆರಡರಲ್ಲೂ ತೋರುತ್ತಿರುತ್ತದೆ.

**ರಾಗ.**—ಇದು ನನಗೆ ಬೇಕು ಎಂಬ ಆಸೆ ಹುಟ್ಟುವುದು.

**ಕಾಲ.**—ಇದು ಪ್ರಮಾತೃವಿನಲ್ಲಿದ್ದು ಪ್ರಮೇಯದಲ್ಲಿಯೂ ಪ್ರಸರಿಸುತ್ತದೆ. ನಾನು ಸಣ್ಣಗಿದ್ದೆ ಈಗ ದಪ್ಪಗಾಗಿದ್ದೇನೆ, ನನಗೆ ವಯಸ್ಸಾಯಿತು ಮುಂತಾದ ವ್ಯವಹಾರಗಳು 'ನಾನು' ಎಂಬ ಪ್ರಮಾತೃಗಳಿಗೂ ಭೂತರೂಪವಾದ ಸಣ್ಣ ದಪ್ಪವಾದ ಶರೀರಕ್ಕೂ ಅನ್ವಯಿಸುತ್ತವೆ. ಸ್ವಸ್ವರೂಪದಿಂದ ಇವನು ಕಾಲಾಧೀನನಾಗದಿದ್ದರೂ ಮಾಯಾ ಪ್ರಭಾವದಿಂದ ಇವನು ಕಾಲಕ್ಕೆ ಆಧೀನನಾಗಿರುವವನಂತೆ ವ್ಯವಹಾರಮಾಡುತ್ತಾನೆ.

**ನಿಯತಿ.**—ರಾಗವು ಪಾರವಿಲ್ಲದೆ ಪ್ರಸರಿಸಿದರೂ ಕಾರ್ಯ ಕಾರಣ ಭಾವಗಳಿಗನುಸಾರವಾಗಿ ಫಲ ಪ್ರಾಪ್ತಿಯನ್ನುಂಟುಮಾಡುವುದೇ ನಿಯತಿ.

ಮೊದಲು ಸ್ವರೂಪಾಭಿನ್ನವಾಗಿರುವ ಚಿತ್, ಆನಂದ, ಇಚ್ಛಾ, ಜ್ಞಾನ, ಕ್ರಿಯಾಶಕ್ತಿಗಳು ಕ್ರಮವಾಗಿ ಸರ್ವ ಕರ್ತೃತ್ವ, ಸರ್ವಜ್ಞತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವ ಎಂಬ ಪ್ರಭಾವವುಳ್ಳವುಗಳಾಗಿದ್ದವು. ಇವುಗಳೇ ಅಶುದ್ಧಾಧ್ವದಲ್ಲಿ ಕಲಾ ವಿದ್ಯಾ ರಾಗ ಕಾಲ ನಿಯತಿ ರೂಪಗಳಿಂದ ಮಾರ್ಪಟ್ಟವು. ಇವುಗಳನ್ನೇ ಪಂಚಕಂಚುಕಗಳೆಂದು ಹೇಳುವುದು. ಈ ಶಕ್ತಿಗಳ ಸಂಪೂರ್ಣವಿಕಾಸವಿದ್ದಾಗ ಶಿವನು, ಸಂಕುಚಿತವಾಗಿದ್ದಾಗ ಬದ್ಧ ಜೀವನು. ಈ ಐದು ತತ್ವಗಳಿಂದ ಕೂಡಿ ಮಿತ ಪ್ರಮಾತೃವಾಗಿದ್ದಾನೆ. ತನ್ನ ಕ್ರಿಯಾಶಕ್ತಿ ತನ್ನ ತಿಳಿವಳಿಕೆ ತನ್ನ ಆಸೆ ತನ್ನ ಪರಿಮಿತಿ ತನ್ನ ಸ್ವಭಾವ ಧರ್ಮ ಇವುಗಳನ್ನು ವಿಶದವಾಗಿ ತಿಳಿದು ತತ್ವಜ್ಞಾನಿಯು ಜೀವನವನ್ನು ನಡೆಸುತ್ತಾನೆ. ಈ

---

.ಕಲಾ ಕರ್ತೃತ್ವ ಸಾಮರ್ಥ್ಯಂ ಕಿಂಚಿನ್ಮಾತ್ರಂ ಪ್ರಕೀರ್ತಿತಂ
ತಾದೃಶಂ ಜ್ಞಾನ ಸಾಮರ್ಥ್ಯಂ ವಿದ್ಯಾತತ್ವಂ ಇತಿಸ್ಮೃತಃ
ಇದಮೇವ ಇಷ್ಟಮಸ್ತೀತಿ ರಾಗ ಪಾಶೋಽಸ್ತಿ ಬಂಧನಂ
ಇದಾನೀಂತನ ಭಾವೇಽಸ್ಮಿನ್ ಕಾಲೋಽಪ್ಯಾಕಲನಂಮತಂ
ನಿಯತತ್ವಂ ಕರ್ಮಫಲಂ ನಿಯತ್ಯಾತ್ಮಕತಾತ್ಮನಃ
ಏತೇಷಾಂ ಅವಿವೇಕೋಽಯಃ ಸಾ [illegible]

ಐದು ತತ್ವಗಳು ಪ್ರಮೇಯಗಳಾಗಿಯೇ ಇದ್ದರೂ ಬಣ್ಣವು ಬಟ್ಟೆಯ ನ್ನಂಟಿಕೊಂಡಿರುವ ಹಾಗೆ ಪ್ರಮಾತೃವಿಗೆ ಅಂಟಿಕೊಂಡು ಅವನನ್ನು ಬಿಡದಿರುವವುಗಳಾಗಿವೆ. ಇವು ಈಶ್ವರಶಕ್ತಿ ರೂಪಗಳಾಗಿದ್ದರೂ ಪ್ರತಿಯೊಂದು ಪ್ರಮಾತೃವಿಗೂ ಬೇರೆ ಬೇರೆಯಾದ ತಾರತಮ್ಯವನ್ನುಂಟು ಮಾಡುವವುಗಳಾಗಿರುತ್ತವೆ.

ಸಪ್ತ ಪ್ರಮಾತೃವರ್ಗದ ಮಂತ್ರ, ಮಂತ್ರೇಶ್ವರ, ಮಂತ್ರ ಮಹೇಶ್ವರರಿಗೆ ೩೬ ಪ್ರಮೇಯಗಳು ಸಾಕ್ಷಾತ್ತಾಗಿ ತಿಳಿಯುತ್ತವೆ. ಸಕಲರಿಗೆ (ಸಂಸಾರಿಗಳಿಗೆ) ಅನುಮಾನ ಆಗಮಾದಿ ಪ್ರಮಾಣಗಳ ದ್ವಾರಾ ಪ್ರಮೇಯಗಳಾಗುತ್ತವೆ. ಕಲಾದಿ ತತ್ವಗಳು ಪ್ರಮೇಯಗಳಾಗಿದ್ದರೂ ಪ್ರಮಾತೃ ಸ್ವಭಾವವನ್ನು ಪಡೆದಿರುವವುಗಳಾಗಿರುವುದರಿಂದ ಪ್ರಮೇಯಗಳೆಂದು ವ್ಯವಹಾರವಿಲ್ಲ. ಪ್ರಮಾತೃವೇ ಪ್ರಮೇಯವಾಗಿರುವುದರಿಂದ ಪ್ರಮೇಯಗಳಿಂದ ಪ್ರಮಾತೃವು ಆಚ್ಛಾದಿತನಾಗಿರುತ್ತಾನೆ.[1] ಕಲಾದಿ ಪಂಚಕಂಚುಕಗಳು ಪ್ರಮಾತೃವಿನ ಸ್ವರೂಪದಲ್ಲಿ ಸೇರಿಹೋಗಿವೆ. ಈ ಪಂಚಕಂಚುಕಗಳಿಂದ ಆವೃತನಾದವನೇ ಪುರುಷ. ಇವನಿಗೆ ಸತ್ವ ರಜಸ್ತಮಸ್ಸುಗಳ ಪ್ರಭಾವದಿಂದ ಕೂಡಿದ ದೇಹ, ಇಂದ್ರಿಯ ಮತ್ತು ಅಂತಃಕರಣಗಳನ್ನು ಒದಗಿಸುವುದೇ ಪ್ರಕೃತಿ. ಈ ಪ್ರಕೃತಿಯು ಅಂತಃಕರಣ, ಇಂದ್ರಿಯಗಳು, ತನ್ಮಾತ್ರಗಳು ಮತ್ತು ಭೂತಗಳಿಗೆ ಮೂಲವಾಗಿರುತ್ತದೆ. ಪ್ರಕೃತಿಯಿಂದ ಕೆಳಗಿರುವ ಹದಿಮೂರು ಕರಣಗಳು (ಬುದ್ಧಿ ಅಹಂಕಾರ ಮನಸ್ಸು ಐದು ಜ್ಞಾನೇಂದ್ರಿಯಗಳು ಐದು ಕರ್ಮೇಂದ್ರಿಯಗಳು) ಶರೀರವನ್ನು ಧರಿಸುವುದಕ್ಕೆ ಸಾಧನಗಳಾಗಿವೆ. ಪಂಚಭೂತಗಳು ತನ್ಮಾತ್ರಗಳು ಶರೀರವಾಗಿವೆ. ಅಧ್ಯವಸಾಯಕ್ಕೆ ಕಾರಣವಾಗಿರುವುದು ಬುದ್ಧಿ. ಗ್ರಾಹ್ಯ ಗ್ರಾಹಕ ರೂಪವಾದದ್ದು ಅಹಂಕಾರ. ಸಂಕಲ್ಪಾದಿ ಭಾವೋದ್ರೇಕಗಳಿಗೆ ಕಾರಣವಾಗಿ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಮೂಲಕ ಉಂಟಾಗುವ ಎಲ್ಲಾ ಜ್ಞಾನಗಳಿಗೂ ಆಕರವಾಗಿರುವುದು ಮನಸ್ಸು. ಮಾಯೆಯಿಂದ ಈ ಮೂವತ್ತು ತತ್ವಗಳು ಸೃಷ್ಟಿಯಾ

1. ಆಚ್ಛಾದಿತ ಪ್ರಮೇಯತಾಃ ಪ್ರಮಾತ್ರ [illegible] ಅನುಮಾಣಶ್ಚ ಸಃ

ಗಿದ್ದರೂ ಮಾಯಿಾಯಗಳಾದ ದೇಹೇಂದ್ರಿಯಗಳಿಂದ ಜೀವನ ಜ್ಞಾನ ಸಂಕೋಚವು ಏರ್ಪಡುತ್ತಲಿರುತ್ತದೆ. ಆದುದರಿಂದ ಮಾಯೆಯು ಜೀವನ ಜ್ಞಾನಸಂಕೋಚಕ್ಕೆ ಸಾಕ್ಷಾತ್ಕಾರಣವಾಗಿಯೂ ಇದೇ ದೇಹ ಇಂದ್ರಿಯಾದಿಗಳಮೂಲಕ ಪರಂಪರಾಕಾರಣವಾಗಿಯೂ ಇದೆ. ಜ್ಞಾನ ಸಂಕೋಚಕ್ಕೆ ಮಾಯೆ ಕಾರಣವೆನ್ನುವಾಗ ಈ ಎರಡಂಶಗಳನ್ನು ಲಕ್ಷ್ಯದಲ್ಲಿಡಬೇಕು.

ಶುದ್ಧ ವಿದ್ಯಾ ತತ್ತ್ವಗಳಲ್ಲಿರುವ ಶಿವತತ್ತ್ವದಲ್ಲಿ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳು ಯಾವ ರೀತಿ ಸಾಮ್ಯಾವಸ್ಥೆಯಲ್ಲಿರುತ್ತವೆಯೋ ಅದೇ ರೀತಿಯಾಗಿ ಅಶುದ್ಧ ಸೃಷ್ಟಿಯಲ್ಲಿ ಪ್ರಕೃತಿಯು ಸತ್ವ ರಜಸ್ತಮಸ್ಸುಗಳ ಸಾಮ್ಯಾವಸ್ಥೆಯಿಂದ ಪ್ರಶಾಂತ ಸಾಗರದಂತಿರುತ್ತದೆ. ಸತ್ವ ರಜಸ್ತಮಸ್ಸುಗಳ ತಾರತಮ್ಯದಿಂದ ಮಿಕ್ಕ ೨೩ ತತ್ವಗಳ ಸೃಷ್ಟಿಯಾಗುತ್ತದೆ. ಪ್ರಕೃತಿಯಿಂದ **ಬುದ್ಧಿ**. ಇದನ್ನು ಮಹತ್ತೆಂದು ಕೆಲವರು ವ್ಯವಹರಿಸುತ್ತಾರೆ. ಈ ಬುದ್ಧಿಯು ಇದೇ ಸರಿ ಎಂದು ನಿರ್ಣಯ ಮಾಡುವ ಶಕ್ತಿಯಾಗಿರುತ್ತದೆ. ಇದು ಸರಿಯೇ ತಪ್ಪೇ ಎಂದು ವಿವೇಚನೆಮಾಡುವಾಗ ಕೊನೆ ತೀರ್ಮಾನವು ಬುದ್ಧಿಯಿಂದುಂಟಾಗುತ್ತದೆ. ಇದಕ್ಕೆ ಅಧ್ಯವಸಾಯವೆಂದು ಹೆಸರು.

ಮುಂದಿನ ತತ್ವವೇ **ಅಹಂಕಾರ.** ತನ್ನ ಸ್ವರೂಪಕ್ಕೆ ಸೇರದಿರುವ ವಿಷಯಗಳನ್ನು ತಾನೆಂದು ಭಾವಿಸುವಿಕೆಯೇ ಅಹಂಕಾರ. ಈ ಅಹಂಕಾರದ ದೆಸೆಯಿಂದ ಗ್ರಾಹ್ಯ ಮತ್ತು ಗ್ರಾಹಕಗಳಲ್ಲಿ ಭೇದ ಜ್ಞಾನಪೂರ್ವಕವಾದ ಅಭಿಮಾನವುಂಟಾಗುತ್ತದೆ. ನಾನು ನನ್ನದು ಎಂಬ ನಿಶ್ಚಿತವಾದ ಆಕಾಂಕ್ಷೆಯುಂಟಾಗುತ್ತದೆ. ಇದರಿಂದ ಸುಖ ದುಃಖಗಳಿಗೆ ಹೆಚ್ಚು ಅವಕಾಶ. ಅಹಂಕಾರವಿಲ್ಲದಿರುವವರಿಗೆ ಹೆಚ್ಚು ಸುಖವೂ ಇಲ್ಲ ಹೆಚ್ಚು ದುಃಖವೂ ಇಲ್ಲ. ಅಹಂಕಾರದ ಅನುಭವವು ಗ್ರಾಹ್ಯ ಗ್ರಾಹಕಗಳಲ್ಲಿ ಶುದ್ಧವಾದ ವ್ಯತ್ಯಾಸವನ್ನು ತಿಳಿಯಪಡಿಸದೆ ಸಮ್ಮೋಹವನ್ನುಂಟುಮಾಡುತ್ತದೆ. ಲೋಕರೂಢಿಯಾಗಿ ಅಹಂಕಾರವನ್ನು ಹೆಮ್ಮೆ ಜಂಭ ಗರ್ವ ಮುಂತಾದ ದುರ್ಗುಣಗಳಿಗೆ ಪರ್ಯಾಯಪದವಾಗಿ ಉಪಯೋಗಿಸುತ್ತಾರೆ.

**ಮನಸ್ಸು.**—ಇದು ವಿಷಯ ಸಂಕಲ್ಪಗಳಿಗೆ ಕಾರಣವಾಗಿಯೂ ವಿಷಯಜ್ಞಾನ ಲಜ್ಜೆ ಕೋಪ ಮುಂತಾದ ವಿಕಾರಗಳಿಗೆ ಆಶ್ರಯವಾಗಿಯೂ ಇದೆ. ಮನಸ್ಸಿಗೆ ಬರುವ ಎಲ್ಲಾ ಭಾವನೆಗಳೂ ದೇಶ ಕಾಲ ಆಕಾರ ಇವುಗಳನ್ನು ಕೂಡಿಯೇ ಬರುತ್ತವೆ. ಸ್ಮೃತಿ ತಾಪ ಮುಂತಾದ ಆಂತರಂಗಿಕವಾದ ಅನುಭವಗಳು ಇದರಿಂದಲೇ ಉಂಟಾಗುತ್ತವೆ. ಜ್ಞಾನೇಂದ್ರಿಯಗಳಿಂದಲೂ ಕರ್ಮೇಂದ್ರಿಯಗಳಿಂದಲೂ ಹತ್ತು ವಿಧವಾದ ತಿಳಿವಳಿಕೆಗಳುಂಟಾಗುತ್ತವೆ. ಆ ಹತ್ತು ವಿಧವಾದ ತಿಳಿವಳಿಕೆಗಳಿಗೂ ಇದು ಆಶ್ರಯವಾಗಿರುತ್ತದೆ. ಇದರ ಸಹಾಯವಿಲ್ಲದೆ ಯಾವ ಇಂದ್ರಿಯಕ್ಕೂ ಸ್ವತಂತ್ರವಾಗಿ ತಿಳಿವಳಿಕೆಯನ್ನುಂಟು ಮಾಡುವ ಯೋಗ್ಯತೆಯಿಲ್ಲ. ನಾವು ಏನೋ ಒಂದು ಬೇರೆ ಯೋಚನೆಯನ್ನು ಮಾಡುತ್ತಿದ್ದಾಗ ಕಣ್ಣು ನೋಡುತ್ತಿದ್ದರೂ ಕಿವಿ ಕೇಳುತ್ತಿದ್ದರೂ ಕಣ್ಣು ಕಾಣಿಸುವುದಿಲ್ಲ, ಕಿವಿ ಕೇಳಿಸುವುದಿಲ್ಲ. ಇದರಿಂದ ಹೊರಗಿನ ತಿಳಿವಳಿಕೆಗೆ ಮನಸ್ಸು ಮುಖ್ಯ ಕಾರಣವೆಂದು ಸಿದ್ಧವಾಗುತ್ತದೆ.

**ಜ್ಞಾನೇಂದ್ರಿಯಗಳು ಐದು.**—ಇವು ಸಾತ್ವಿಕಾಹಂಕಾರದಿಂದ ಹುಟ್ಟಿರುತ್ತವೆ. ಇವುಗಳ ಸ್ವರೂಪ ಅತಿ ಸೂಕ್ಷ್ಮವಾಗಿರುವುದರಿಂದ ಭೌತಿಕವಾದ ಶರೀರದ ಸಹಾಯವಿಲ್ಲದೆ ಇವು ಕೆಲಸ ಮಾಡಲಾರವು. ಈ ಐದು ಜ್ಞಾನೇಂದ್ರಿಯಗಳಿಗೂ ಐದು ಕರ್ಮೇಂದ್ರಿಯಗಳಿಗೂ ಈ ಭೌತಿಕ ಶರೀರವಿದ್ದಾಗಲೇ ಪ್ರವೃತ್ತಿ. ಕಿವಿಯಿಂದ ಕೇಳುತ್ತೇವೆ, ಕಣ್ಣಿನಿಂದ ನೋಡುತ್ತೇವೆ, ಮೂಗಿನಿಂದ ವಾಸನೆಯನ್ನು ಕಂಡುಹಿಡಿಯುತ್ತೇವೆ, ನಾಲಗೆಯಿಂದ ರುಚಿ ನೋಡುತ್ತೇವೆ, ಚರ್ಮದಿಂದ ಮುಟ್ಟುತ್ತೇವೆ, ಆದರೆ ಒಂದು ಇಂದ್ರಿಯದ ಕೆಲಸವು ಇನ್ನೊಂದು ಇಂದ್ರಿಯದಿಂದ ನಡೆಯುವುದಿಲ್ಲ. ಕಿವಿಯಿಂದ ನೋಡಲಾರೆವು, ಕಣ್ಣಿನಿಂದ ಕೇಳಲಾರೆವು.

**ಕರ್ಮೇಂದ್ರಿಯಗಳು ಐದು.**—ಮೇಲೆ ಹೇಳಿದ ರೀತಿಯೇ ಕರ್ಮೇಂದ್ರಿಯಗಳಾದ ವಾಕ್ ಪಾಣಿ ಪಾದ ಪಾಯು ಉಪಸ್ಥ ಇವುಗಳು ಒಂದರ ಕೆಲಸವನ್ನು ಇನ್ನೊಂದು ಮಾಡಲಾರವು. ಹೀಗೆ

ಸಾತ್ವಿಕಾಹಂಕಾರದಿಂದ ಈ ಐದು ಕರ್ಮೇಂದ್ರಿಯಗಳು ಮೇಲೆ ಹೇಳಿದ ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು ಈ ಹನ್ನೊಂದೂ ಹುಟ್ಟಿರುತ್ತವೆ.

ತಾಮಸಾಹಂಕಾರದಿಂದ ಶಬ್ದ ಸ್ಪರ್ಶ ರೂಪ ರಸ ಗಂಧ ತನ್ಮಾತ್ರಗಳೂ ಈ ತನ್ಮಾತ್ರಗಳಿಂದ ಕ್ರಮವಾಗಿ ಆಕಾಶ ವಾಯು ಅಗ್ನಿ ನೀರು ಭೂಮಿ ಹೀಗೆ ಪಂಚಭೂತಗಳೂ ಹುಟ್ಟುತ್ತವೆ. ಈ ಐದು ಭೂತಗಳಲ್ಲಿಯೂ ಪರಸ್ಪರ ವೈಲಕ್ಷಣ್ಯವಿದೆ. ಭೂಮಿಯಲ್ಲಿ ಶಬ್ದ ಸ್ಪರ್ಶ ರೂಪ ರಸ ಗಂಧಗಳೂ ನೀರಿನಲ್ಲಿ ಶಬ್ದ ಸ್ಪರ್ಶ ರೂಪ ರಸಗಳೂ ಅಗ್ನಿಯಲ್ಲಿ ಶಬ್ದ ಸ್ಪರ್ಶ ರೂಪಗಳೂ ವಾಯುವಿನಲ್ಲಿ ಸ್ಪರ್ಶ ಶಬ್ದಗಳೂ ಆಕಾಶದಲ್ಲಿ ಶಬ್ದ ಮಾತ್ರವೂ ಇರುತ್ತವೆ. ಈ ಪಂಚ ಭೂತಗಳ ಸಹಾಯವಿಲ್ಲದೆ ಜ್ಞಾನೇಂದ್ರಿಯಗಳ ಕೆಲಸ ನಡೆಯುವುದಿಲ್ಲ. ಆಕಾಶದ ಅವಕಾಶವಿಲ್ಲದೆ ಶಬ್ದ ಕೇಳಿಸುವುದಿಲ್ಲ. ವಾಯುವಿಲ್ಲದಿದ್ದರೆ ಸ್ಪರ್ಶ ತಿಳಿಯುವುದಿಲ್ಲ. ಬೆಳಕಿಲ್ಲದಿದ್ದರೆ ಕಣ್ಣು ಕಾಣಿಸುವುದಿಲ್ಲ. ನೀರಿಲ್ಲದಿದ್ದರೆ ರಸ ತಿಳಿಯುವುದಿಲ್ಲ. ಭೂಮಿಯಿಲ್ಲದಿದ್ದರೆ ಅಂದರೆ ಭೂಮಿಯಲ್ಲಿ ಬೆಳೆದ ವಸ್ತುವಿಲ್ಲದಿದ್ದರೆ ವಾಸನೆಯಿಲ್ಲ. ಹೀಗೆ ಬಾಹ್ಯ ಪ್ರಪಂಚವೆಲ್ಲಾ ಪಂಚಭೂತಮಯವಾಗಿದೆ. ಈ ಪಂಚ ಭೂತಗಳು ಇಂದ್ರಿಯಗಳಿಗೆ ಸಹಾಯಕಗಳಾಗಿವೆ. ಪ್ರಮಾತೃಗಳ ಸುಖ ದುಃಖಗಳಿಗೆ ಕಾರಣಗಳಾಗಿವೆ. ಜ್ಞಾನಿಯು ತನಗುಂಟಾಗುವ ಶಾರೀರಕ ಮತ್ತು ಮಾನಸಿಕ ಉದ್ವೇಗಗಳಲ್ಲಿ ವಿವೇಚನೆಯಿಂದ ಶಾರೀರಕವಾದ ಉದ್ವೇಗಗಳೆಷ್ಟು ಐಂದ್ರಿಯಿಕವಾದ ತೊಂದರೆಗಳೆಷ್ಟು ಮಾನಸಿಕವಾದ ಉಬ್ಬರವಿಳಿತಗಳೆಷ್ಟು ಎಂದು ತಿಳಿಯುತ್ತಾನೆ. ಇಂತಹ ವಿವೇಚನೆಯಿಂದ ಸುಖ ದುಃಖಗಳು ಗ್ರಾಹಕನ ಸ್ವಸ್ವರೂಪ ದಲ್ಲಿಲ್ಲವೆಂದೂ ಕರಣಗಳ ಮೂಲಕ ಪ್ರಮೇಯಗಳಿಂದುಂಟಾಗುತ್ತಿವೆ ಯೆಂದೂ ತಿಳಿದು ಶಾಂತನಾಗಿ ಸ್ವಸ್ವರೂಪಾನುಸಂಧಾನದಲ್ಲಿ ಆನಂದ ವನ್ನನುಭವಿಸುತ್ತಾನೆ.

ಪಂಚ ಭೂತಗಳ ಮಿಶ್ರಣದಿಂದ ಘಟಾದಿ ಪದಾರ್ಥಗಳು ಸ್ವಲಕ್ಷಣ (ಇತರ ಸಂಬಂಧವಿಲ್ಲದೆ ತನ್ನನ್ನು ಮಾತ್ರ ತೋರ್ಪಡಿಸಿಕೊಳ್ಳುವುದು)

ಭಾವದಿಂದ ಕರ್ಮೇಂದ್ರಿಯಗಳ ದ್ವಾರಾ ಸೇರಿ ಜ್ಞಾನೇಂದ್ರಿಯಗಳಿಂದ ಆಲೋಚಿಸಲ್ಪಟ್ಟು ಅಂತಃಕರಣದಲ್ಲಿ ಸಂಕಲ್ಪ ಮತ್ತು ಅಭಿಮಾನ ದಿಂದ ನಿಶ್ಚಯಿಸಲ್ಪಟ್ಟು ಬುದ್ಧಿಯಿಂದ ವಿವೇಚಿಸಲ್ಪಟ್ಟು ಕಲಾದಿತತ್ವ ಗಳೊಡನೆ ಸೇರಿ ಪ್ರಮಾತೃವಿನಲ್ಲಿ ಕೊನೆಗೊಳ್ಳುತ್ತವೆ. ಅಂದರೆ ಪೃಥ ವ್ಯಾದಿ ಆಭಾಸಗಳು ಚಿತ್ತಿನಲ್ಲಿ ವಿಶ್ರಾಂತಿಯನ್ನು ಪಡೆಯುತ್ತವೆಂಬುದೇ ಇದರ ಮುಖ್ಯ ಅಭಿಪ್ರಾಯ.

## ಬಂಧಸ್ವಭಾವ ಮತ್ತು ಕಾರಣಗಳು

ಎಲ್ಲಾ ದಾರ್ಶನಿಕರೂ ಬಂಧ ಮತ್ತು ಮೋಕ್ಷ ಈ ಎರಡು ಅಂಶ ಗಳನ್ನು ಬಹಳ ವಿಸ್ತಾರವಾಗಿ ನಿರೂಪಿಸಿರುತ್ತಾರೆ. ಅಜ್ಞಾನದಿಂದ ಬಂಧ ಜ್ಞಾನದಿಂದ ಮೋಕ್ಷ ಎಂಬುದು ಸಾಮಾನ್ಯವಾದ ನಿಯಮ. ಈ ಅಜ್ಞಾನವನ್ನು ಅದರ ಸ್ವರೂಪ ಸ್ವಭಾವಗಳನ್ನು ದಾರ್ಶನಿಕರು ಬಗೆ ಬಗೆಯಾಗಿ ವಿವರಿಸಿರುತ್ತಾರೆ. ಕಾಶ್ಮೀರ ಶಿವಾದ್ವೈತ ಸಂಪ್ರ ದಾಯದಲ್ಲಿ ಅಜ್ಞಾನ ಅಂದರೆ ಜ್ಞಾನವೇ ಇಲ್ಲದಿರುವಿಕೆಯಲ್ಲ. ಸಂಕುಚಿತವಾದ ತಿಳಿವಳಿಕೆ ಇರುವುದು ಎಂದರ್ಥ. ಈ ಸಂಕುಚಿತ ವಾದ ತಿಳಿವಳಿಕೆಯೂ ಕೂಡ ಅಸತ್ಯವಾದುದಲ್ಲ. ಸತ್ಯವಾದದ್ದೇ ಆಗಿದೆ. ಜ್ಞಾನ ಸಂಕೋಚಕ್ಕೆ ಇರುವ ಕಾರಣಗಳನ್ನು ಮೂರು ವಿಧ ವಾಗಿ ವಿಂಗಡಿಸಿರುತ್ತಾರೆ. ಇವುಗಳನ್ನೇ ಆಣವ ಮಾಯಿಾಯ ಕಾರ್ಮ ಎಂಬ ಹೆಸರುಗಳಿಂದ ಮಲತ್ರಯಗಳೆಂದು ಕರೆಯುತ್ತಾರೆ. ಈ ಮೂರು ಮಲಗಳಲ್ಲಿ ಆಣವಮಲವಿಲ್ಲದೆ ಮಾಯಿಾಯಮಲವಿರುವು ದಿಲ್ಲ. ಇವೆರಡೂ ಇಲ್ಲದಿದ್ದರೆ ಕಾರ್ಮಮಲಕ್ಕವಕಾಶವಿಲ್ಲ. ಸರ್ವ

---

ತತ್ರ ಪೃಥಿವ್ಯಾದ್ಯಾಭಾಸಾ ಏವ ಮಿಶ್ರೀಭೂಯ ಘಟಾದಿ ಸ್ವಲಕ್ಷಣೀ ಭೂತಾಃ, ಕರ್ಮೇಂದ್ರಿಯೈರುಪಸರ್ಪಿತಾ, ಬುದ್ಧೀಂದ್ರಿಯೈರಾ ಲೋಚಿತಾ, ಅಂತಃಕರಣೇನ ಸಂಕಲ್ಪಿತಾ ಅಭಿಮತ ನಿಶ್ಚಿತ ರೂಪಾ, ವಿದ್ಯಯಾ ವಿವೇಚಿತಾಃ, ಕಲಾದಿಭಿರನುರಂಜಿತಾಃ, ಪ್ರಮಾತರಿ ವಿಶ್ರಾಮ್ಯಂತಿ ಇತಿ ತಾತ್ಪರ್ಯಂ.

ಈಶ್ವರ ಪ್ರತ್ಯಭಿಜ್ಞಾ — ಶ್ಲೋ. ೨೧.

ಜ್ಞತ್ವ, ಸರ್ವ ಕರ್ತೃತ್ವಾದಿ ಶಕ್ತಿಗಳುಳ್ಳ ಶಿವನು ತನ್ನ ಲೀಲೆಯಿಂದ ತನ್ನಲ್ಲಿಯೇ ವಿಶ್ವವನ್ನು ಹೊರಹೊಮ್ಮಿಸುವಾಗ ಅಭಿನ್ನವಾದ ಸ್ಥಿತಿಯಿಂದ ಗ್ರಾಹ್ಯ ಗ್ರಾಹಕ ಎಂಬ ಭೇದ ವ್ಯಾಪ್ತಿಯನ್ನು ಅಂಗೀಕರಿಸಿದನು. ಅಭೇದ ವ್ಯಾಪ್ತಿಯನ್ನು ಬಿಟ್ಟು ಭೇದ ವ್ಯಾಪ್ತಿಯನ್ನು ಅಂಗೀಕರಿಸುವಿಕೆಯೇ ಆಣವಮಲದ ಆವಿರ್ಭಾವ. ಮಲಗಳು ಜ್ಞಾನಾನುಬಂಧಿಗಳಾಗಿವೆ. ಸಪ್ತ ಪ್ರಮಾತೃಗಳಲ್ಲಿ ಮಂತ್ರಮಹೇಶ್ವರರಿಂದ ವಿಜ್ಞಾನಾಕಲರವರೆವಿಗೂ ಆಣವ ಮಲವು ಗೌಣಪ್ರಧಾನಭಾವಗಳಿಂದಿರುತ್ತದೆ. ಅಜ್ಞಾನವು ಅನುಭವಕ್ಕೆ ಬರಬೇಕಾದರೆ ಜ್ಞಾನಕ್ಕೆ ಸಂಕೋಚವನ್ನುಂಟುಮಾಡುವ ಪ್ರತಿಬಂಧಕಗಳಿರಬೇಕು. ಇಂತಹ ಪ್ರತಿಬಂಧಕಗಳಾಗಿರುವವುಗಳಲ್ಲಿ ಮೊದಲನೆಯುವು ಷಟ್ಕಂಚುಕಗಳು. ಇವು ಸರ್ವಜ್ಞತ್ವಾದಿ ಶಕ್ತಿಗಳನ್ನು ಸಂಕುಚಿತವಾದವುಗಳನ್ನಾಗಿ ಮಾಡುತ್ತವೆ. ಇದು ಮಾಯಿಾಯ ಮಲದ ಪೂರ್ವಾರ್ಧ. ಅಂತಃಕರಣ ಇಂದ್ರಿಯಗಳು ಸ್ಥೂಲ ಶರೀರ ಇವುಗಳ ಸಂಬಂಧವೇರ್ಪಟ್ಟರೆ ಜ್ಞಾನಕ್ಕೆ ಸಂಕೋಚವನ್ನುಂಟುಮಾಡುವ ಉಪಕರಣಗಳ ಸಂಪುಟವು ಸಂಪೂರ್ಣವಾಯಿತು. ಇಷ್ಟು ಮಾಯಿಾಯ ಮಲದ ವಿಲಾಸ. ಆಣವ ಮತ್ತು ಮಾಯಿಾಯ ಈ ಎರಡು ಮಲಗಳಿಂದಲೂ ದೇಹ ಅಂತಃಕರಣ ಇಂದ್ರಿಯಗಳಿಂದಲೂ ಕೂಡಿದ ಪ್ರಮಾತೃವು ತನ್ನ ಇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಸುಖ ದುಃಖಾನುಭವಗಳನ್ನುಂಟುಮಾಡುವ ಕರ್ಮಗಳನ್ನಾಚರಿಸುತ್ತಾನೆ. ಇದೇ ಕಾರ್ಮ ಮಲ. ಆಣವ ಮಲದಿಂದ ಸ್ವರೂಪಸಂಕೋಚವಾಗಿ ಮಾಯಿಾಯ ಮಲದಿಂದ ಜ್ಞಾನಶಕ್ತಿಗಳು ಸಂಕುಚಿತವಾಗಿ ದೇಹ ಮತ್ತು ಇಂದ್ರಿಯಗಳಿಗೆ ಅಧೀನನಾದವನು ಫಲಗಳನ್ನು ಕೊಡುವ ಕಾರ್ಮಮಲಕ್ಕೆ ತುತ್ತಾಗಿ ಮಲತ್ರಯಗಳಿಂದ ಕೂಡಿದವನಾಗಿರುತ್ತಾನೆ.

ಈ ಮಲತ್ರಯಗಳು ಯಾವಾಗ ಮೊದಲಾಗುತ್ತವೆ ಯಾವಾಗ ಕೊನೆಗೊಳ್ಳುತ್ತವೆ ಎಂಬ ವಿಷಯದಲ್ಲಿ ಬಗೆ ಬಗೆಯಾದ ವಿವರಣೆಗಳಿವೆ. ಅಭಿನವಗುಪ್ತಾಚಾರ್ಯರವರು ಬಹಳ ಸುಲಭವಾದ ಒಂದು ದೃಷ್ಟಾಂತದಿಂದ ಈ ಮಲಗಳ ಆವಿರ್ಭಾವ ಮತ್ತು ಸ್ವರೂಪಸ್ವಭಾವ

ಗಳನ್ನು ವಿವರಿಸಿರುತ್ತಾರೆ. ಭತ್ತದ ಕಾಳನ್ನು ಬಿತ್ತಿದರೆ ಮೊಳಕೆಯಾಗಿ ಪೈರಾಗುತ್ತದೆ. ಈ ಪೈರು ಬೆಳೆದು ತೆನೆ ಬಿಡುವಾಗ ಎಳ ತೆನೆಯಲ್ಲಿ ಬರೀ ಹಾಲು ಕಂಡುಬರುತ್ತದೆ. ಬಲಿತಮೇಲೆ ಮೇಲಿನ ಭಾಗವು ಹೊಟ್ಟಾಗಿಯೂ ಗರ್ಭದಲ್ಲಿರುವುದು ಅಕ್ಕಿಯಾಗಿಯೂ ಅಕ್ಕಿಯ ಅಂಶಕ್ಕೂ ಹೊಟ್ಟಿಗೂ ಮಧ್ಯೆ ಇರುವುದು ಒಂದು ತೌಡಿನ ಮುಸುಕಾಗಿಯೂ ರೂಪನ್ನು ಹೊಂದುತ್ತದೆ. ಈ ತೌಡಿನ ಮುಸುಕು ಎರಡು ಬಗೆಯಾಗಿರುತ್ತದೆ. ಒಂದು ದಪ್ಪ ತೌಡು ಇನ್ನೊಂದು ತೆಳುವಾದ ಸೂಕ್ಷ್ಮ ತೌಡು. ಇದನ್ನೇ ಸಂಸ್ಕೃತದಲ್ಲಿ ತುಷಾ (ಹೊಟ್ಟು) ಕಿಂಶಾರುಕ (ದಪ್ಪ ತೌಡು) ಕಂಬುಕ (ಸೂಕ್ಷ್ಮ ತೌಡು) ಎಂದು ಹೇಳುವುದು. ತೆನೆ ಬಿಡುವುದಕ್ಕಿಂತ ಮುಂಚೆ ಈ ಮೂರು ಅಂಶಗಳೂ ಪೈರಿನಲ್ಲಿ ಅಭಿನ್ನವಾಗಿ ಅಡಗಿದ್ದವು. ಬಲಿತಾಗ ಈ ಮೂರು ಭಿನ್ನ ಭಿನ್ನವಾಗಿ ರೂಪುಗೊಂಡವು. ಈ ಮೂರು ಆವರಣಗಳು ಬೀಜಕ್ಕೆ ಇಲ್ಲದಿದ್ದರೆ ಮರಳಿ ಇದು ಮೊಳಕೆಗೆ ಬರಲಾರದು. ಇದೇ ರೀತಿ ಮಲಾವರಣಗಳು ಜನ್ಮಾಂತರಗಳನ್ನುಂಟುಮಾಡುತ್ತವೆ. ಮೊದಲನೆಯದು ಆಣವಮಲ. ಇದು ಸೂಕ್ಷ್ಮವಾದದ್ದು. ಮಾಯಿಾಯ ಕಂಚುಕಗಳು ಸ್ಥೂಲವಾದ ಆವರಣಗಳು. ಇವುಗಳ ಹೊರಗಿರುವುದು ಶರೀರ. ಇದು ಇನ್ನೂ ಸ್ಥೂಲವಾದದ್ದು. ಈ ಮೂರು ಆವರಣಗಳಿಂದ ಪರಿವೇಷ್ಟಿತನಾಗಿರುವವನು ಬದ್ಧಾತ್ಮ. ಇವನಿಗೆ ಈ ಮೂರು ಮಲಗಳಿಲ್ಲದಿದ್ದರೆ ಜೀವ ಭಾವವಿಲ್ಲ ಜನನ ಮರಣಗಳಿಲ್ಲ ಜನ್ಮಾಂತರಗಳಿಲ್ಲ. ಚಿದಾತ್ಮಕನ ಶಕ್ತಿಸಂಕೋಚಕ್ಕೆ ಮಲಗಳೆಂದೆನ್ನುತ್ತೇವೆ. ಇಚ್ಛಾ ಜ್ಞಾನ ಕ್ರಿಯಾ ಶಕ್ತಿಗಳ ಸಂಕೋಚಗಳೇ ಈ ಮಲಗಳು. ಶಕ್ತಿಗಳು ಇವನ ಸ್ವರೂಪದಿಂದ ಬೇರೆಯಲ್ಲ. ಸಂಕೋಚವೇ ಮಲ. ವಿಕಾಸವೇ ಮುಕ್ತಿ.

---

ಪರಮಾವರಣಂ ಮಲ ಇಹ ಸೂಕ್ಷ್ಮಂ ಮಾಯಾದಿ ಕಂಚುಕಂ ಸ್ಥೂಲಂ।
ಬಾಹ್ಯಂ ವಿಗ್ರಹ ರೂಪಂ ಕೋಶತ್ರಯವೇಷ್ಟಿತೋ ಹ್ಯಾತ್ಮಾ॥

ಪರಮಾರ್ಥಸಾರ—೫೫.

ತುಷ ಕಂಬುಕ ಕಿಂಶಾರುಕಮುಕ್ತಂ ಬೀಜಂ ಯಥಾಂಕುರಂಕುರುತೇ।
ನೈವ ತಥಾಣವ ಮಾಯಾ ಕರ್ಮವಿಯುಕ್ತೋ ಭವಾಂಕುರಂ ಹ್ಯಾತ್ಮಾ॥

ತಂತ್ರಸಾರ—೫೭.

ಕಾರ್ಮಮಲವು ಶುಭಾಶುಭ ಫಲಗಳನ್ನುಂಟುಮಾಡುವ ಕರ್ಮಾಚರಣೆಗೂ ಮಾಯೀಯ ಮಲವು ಜನ್ಮಾಂತರ ಲೋಕಾಂತರ ಸಂಚಾರಗಳಿಗೂ ಕಾರಣವಾಗಿ ಕರ್ಮಸಂಸ್ಕಾರಗಳನ್ನು ಪ್ರಮಾತೃವಿಗೆ ಉಂಟುಮಾಡುತ್ತಿರುತ್ತದೆ. ಕರ್ಮಗಳಿಗೆ ಒಂದು ವಿಶೇಷ ಶಕ್ತಿಯುಂಟು. ಒಂದು ಕ್ರಿಯೆಯಿಂದ ಇನ್ನೊಂದು ಕ್ರಿಯೆ ಹುಟ್ಟುತ್ತದೆ. ಹಾಗೆಯೇ ಒಂದು ಕರ್ಮದಿಂದ ಇನ್ನೊಂದು ಕರ್ಮವು ಅಳಿಯುತ್ತದೆ. ಒಂದು ಕರ್ಮದಿಂದ ಇನ್ನೊಂದು ಕರ್ಮವು ಮುಚ್ಚಲ್ಪಡುತ್ತದೆ. ಅದೇ ರೀತಿ ಒಂದು ಕರ್ಮದಿಂದ ಇನ್ನೊಂದು ಕರ್ಮಕ್ಕೆ ಆವಿರ್ಭಾವವುಂಟಾಗುತ್ತಧೆ. ಈ ರೀತಿಯಾಗಿ ಕರ್ಮ ಪ್ರವಾಪವು ವಿಕಲ್ಪ ಸಂತತಿಗಳನ್ನಾಶ್ರಯಿಸಿರುತ್ತದೆ. ಇಂದಿನ ಕರ್ಮಗಳೇ ಮುಂದಿನ ಸಂಸ್ಕಾರಗಳಾಗುತ್ತವೆ. ಸಂಸ್ಕಾರಾನುಸಾರವಾಗಿ ಕರ್ಮಗಳು ಕರ್ಮಗಳಿಂದ ಪುನಃ ಸಂಸ್ಕಾರಗಳು ಈ ರೀತಿ ಕರ್ಮಚಕ್ರವು ತಿರುಗುತ್ತಿರುತ್ತದೆ. ಸತ್ವ, ರಜಸ್ಸು, ತಮಸ್ಸು ಎಂಬ ಪ್ರಕೃತಿಯ ಮೂರು ಗುಣಗಳು ಕರ್ಮಗಳ ಮಿತಿಯನ್ನು ಸೂಚಿಸುತ್ತವೆ. ಈ ಮೂರು ಗುಣಗಳು ಒಂದನ್ನೊಂದು ಬಿಡದೆ ಇದ್ದರೂ ಯಾವ ಗುಣವು ಉದ್ರಿಕ್ತವಾಗಿರುತ್ತದೆಯೋ ಆ ಕಾಲದಲ್ಲಿ ನಡೆಯುವ ಕರ್ಮ ಆ ಗುಣವನ್ನು ಮುಖ್ಯವಾಗಿ ಪಡೆದಿರುತ್ತದೆ. ಜ್ಞಾನವಿಕಾಸವನ್ನುಂಟುಮಾಡುವವುಗಳು ಸಾತ್ವಿಕ ಕರ್ಮಗಳು. ಕಾಮ ಕ್ರೋಧ ಮೊದಲಾದ ಅಶಾಂತಿಗೆ ಕಾರಣವಾಗಿರುವವುಗಳು ರಾಜಸ ಕರ್ಮಗಳು. ಇವುಗಳಿಂದಲೇ ಮದ ಮಾತ್ಸರ್ಯ ಮೊದಲಾದವುಗಳುಂಟಾಗುತ್ತಿರುತ್ತವೆ. ಪ್ರಮಾದ ಮೋಹ ಮೊದಲಾದವುಗಳು ತಾಮಸ ಕ್ರಿಯೆಗಳು. ಜ್ಞಾನವಿಕಾಸಕ್ಕೆ ಕಾರಣಗಳಾಗಿರುವ ಸತ್ಕರ್ಮಾಚರಣೆಯಿಂದ ರಜಃ ಪ್ರವೃತ್ತಿಗಳು ಮತ್ತು ತಮಃ ಪ್ರವೃತ್ತಿಗಳು ಶಿಥಿಲವಾಗಲಾಗಿ ಕರ್ಮ ಪ್ರವಾಹಕ್ಕೆ ಆಶ್ರಯವಾಗಿರುವ ವಿಕಲ್ಪ ಸಂತತಿಯು ಕ್ಷೀಣವಾಗುತ್ತದೆ. ವಿಕಲ್ಪಗಳು ಕಡಿಮೆಯಾದಾಗ ಅದರ ಸಂಸ್ಕಾರದಿಂದ ಕೆಟ್ಟ ವಿಕಲ್ಪಗಳಿಲ್ಲದೆ ಒಳ್ಳೆ ವಿಕಲ್ಪಗಳುಂಟಾಗುತ್ತಿದ್ದು ಜ್ಞಾನವಿಕಾಸವು ಕ್ರಮಕ್ರಮವಾಗಿ ಹೆಚ್ಚಾಗುತ್ತದೆ. ಪರಿಪಾಕಕ್ಕನುಗುಣವಾಗಿ ಕಾರ್ಮ ಮಲ ಕ್ಷೀಣವಾಗುತ್ತಾ ಬಂದರೆ ಮಾಯೀಯ ಮಲಕ್ಕೆ ಪ್ರಯೋಜನ

ವಿರುವುದಿಲ್ಲ. ಮಾಯೀಯ ಮಲವು ೩೧ ತತ್ವಗಳ ಸಂಪುಟಾಂತರ್ಗತವಾಗಿರುವ ಕಂಚುಕಗಳು ಪುರ್ಯಷ್ಟಕ, ದೇಹೇಂದ್ರಿಯಗಳಿಂದ ಕೂಡಿರುವಾಗ ಮಾತ್ರ ಅನುಭವಕ್ಕೆ ಬರುತ್ತಿರುವುದು. ಈ ಮಲವು ಕಳಚಿಹೋದರೆ ಗ್ರಾಹ್ಯ ಗ್ರಾಹಕಭಾವ ಮಾತ್ರ ಉಳಿದಿರುವ ಶುದ್ಧ ಜ್ಞಾನವು ವಿಜ್ಞಾನಾಕಲರಿಗಿರುತ್ತದೆ. ಸಕಲನಿಗೆ ಮೂರು ಮಲಗಳೂ ಪ್ರಳಯಾಕಲನಿಗೆ ಮಾಯೀಯ ಮತ್ತು ಆಣವ ಈ ಎರಡು ಮಲಗಳೂ ವಿಜ್ಞಾನಾಕಲನಿಂದ ಮಂತ್ರಮಹೇಶ್ವರರವರೆಗಿರುವ ನಾಲ್ಕು ಪ್ರಮಾತೃಗಳಿಗೆ ಆಣವಮಲ ಮಾತ್ರ ಇರುತ್ತವೆ.

ಈ ಸಪ್ತಪ್ರಮಾತೃಗಳ ವಿಷಯವಾಗಿ ಆಚಾರ್ಯ ಅಭಿನವಗುಪ್ತರು ಮನನಮಾಡುವುದಕ್ಕೆ ಒಂದು ಯುಕ್ತಿಯನ್ನು ಸೂಚಿಸಿದ್ದಾರೆ. ಚಿತ್, ಆನಂದ, ಇಚ್ಛಾ, ಜ್ಞಾನ, ಕ್ರಿಯಾ ಎಂಬ ಐದು ಶಕ್ತಿಗಳು ಚಿತ್ತಿನ ಸ್ವರೂಪಾನುಬಂಧಿಗಳು. ಸಪ್ತ ಪ್ರಮಾತೃಭಾವದಲ್ಲಿ ಸಕಲ ಪ್ರಮಾತೃವಿಗೆ ಮೂರು ಮಲಗಳೂ ಪ್ರಳಯಾಕಲನಿಗೆ ಎರಡು ಮಲಗಳೂ ವಿಜ್ಞಾನಾಕಲನಿಂದ ಮಂತ್ರಮಹೇಶ್ವರರವರೆಗಿರುವ ನಾಲ್ಕು ಪ್ರಮಾತೃಗಳಿಗೆ ಒಂದು ಮಲವೂ ಇದೆಯೆಂದು ಈ ಸಂಪ್ರದಾಯದ ವಿಭಾಗಕ್ರಮ. ಎಲ್ಲರ ಅನುಭವದಲ್ಲಿಯೂ ಇರುವ ಜಾಗ್ರದಾದ್ಯವಸ್ಥೆಗಳೂ ಈ ಅನುಭವದಲ್ಲಿ ಮನನಮಾಡುವುದಕ್ಕೆ ಸಹಾಯಕಾರಿಯಾಗಿರುತ್ತವೆ. ಜಾಗ್ರದವಸ್ಥೆಯೇ 'ಸಕಲ' ಪ್ರಮಾತೃವಿನ ಸಂಪೂರ್ಣಾನುಭವವುಳ್ಳದ್ದು. ಸ್ವಪ್ನಾವಸ್ಥೆಯು 'ಪ್ರಳಯಾಕಲ' ಪ್ರಮಾತೃಭಾವವನ್ನು ಅನುಭವಿಸುವುದಾಗಿದೆ. ಸುಷುಪ್ತ್ಯವಸ್ಥೆಯು 'ವಿಜ್ಞಾನಾಕಲ' ಸ್ಥಿತಿಯನ್ನು ಅನುಭವಿಸುವುದಕ್ಕೆ ಆಶ್ರಯವಾಗಿದೆ. ಸಾಧಕನು ಮೂರು ಮಲಗಳ ಅನುಭವಕ್ಕೆ ಬರುವ ಜಾಗ್ರದವಸ್ಥೆಗೂ ಎರಡು ಮಲಗಳ ಅನುಭವವುಳ್ಳ ಸ್ವಪ್ನಾವಸ್ಥೆಗೂ ಒಂದು ಮಲದ ಅನುಭವವಿರುವ ಸುಷುಪ್ತ್ಯವಸ್ಥೆಗೂ ಇರುವ ವ್ಯತ್ಯಾಸವನ್ನು ಮನನ ಮಾಡಬೇಕು. ಹೀಗೆ ಮನನಮಾಡುವಾಗ ಸ್ವಭಾವತಃ ಮೂಲರೂಪದಲ್ಲಿ ಪಂಚಶಕ್ತಿಗಳಿಂದ ಕೂಡಿರುವ ಪ್ರಮಾತೃವು ಜಾಗ್ರದವಸ್ಥೆಯಲ್ಲಿ ಐದು ಶಕ್ತಿಗಳಿಂದಲೂ ಸ್ವಪ್ನಾವಸ್ಥೆಯಲ್ಲಿ ನಾಲ್ಕು ಶಕ್ತಿಗಳಿಂದಲೂ

ಸುಷುಪ್ತ್ಯವಸ್ಥೆಯಲ್ಲಿ ಮೂರು ಶಕ್ತಿಗಳಿಂದಲೂ ಕೂಡಿರುವುದನ್ನು ಗಮನಿಸಬೇಕು. ಕ್ರಿಯಾಶಕ್ತಿ ಪ್ರಧಾನವಾಗಿರುವುದು ಜಾಗ್ರತ್. ಜ್ಞಾನಶಕ್ತಿ ಮಾತ್ರ ಪ್ರಧಾನವಾಗಿರುವುದು ಸ್ವಪ್ನ. ಇಚ್ಛಾಶಕ್ತಿ ಪ್ರಧಾನವಾಗಿರುವುದು ಸುಷುಪ್ತಿ. ವಿಜ್ಞಾನಾಕಲಾ, ಮಂತ್ರ, ಮಂತ್ರೇಶ್ವರ, ಮಂತ್ರಮಹೇಶ್ವರ ಈ ನಾಲ್ಕು ಪ್ರಮಾತೃಭಾವಾನುಭವವೂ ತುರ್ಯಾವಸ್ಥಾನುಭವವೂ ಒಂದೇ. ಆಣವಮಲವಿಲ್ಲದಿರುವ ಅಭೇದ ವ್ಯಾಪ್ತಿಸಾರವಾಗಿರುವ ಶಿವತತ್ವರೂಪವಾಗಿರುವ ಸಪ್ತ ಪ್ರಮಾತ್ರಾನುಭವವು ತುರ್ಯಾತೀತಾವಸ್ಥೆಗೆ ಸಮಾನವಾದವುಗಳು. ಜ್ಞಾನ ವಿಕಾಸಕ್ಕೆ ಬಾಹ್ಯ ಪ್ರಪಂಚದಲ್ಲಿ ಆಚರಿಸುವ ಸತ್ಕರ್ಮಗಳೂ ಆಂತರಂಗಿಕವಾಗಿ ಅಭ್ಯಾಸಮಾಡುವವುಗಳೂ ಉಪಾಯಗಳು.

---

ತುರ್ಯಾತೀತ:—೫ನೆ ಅವಸ್ಥೆ. ಸಪ್ತಮ ಪ್ರಮಾತೃ - ಶಿವ. ಶಕ್ತಿಗಳಲ್ಲಿ ಚಿತ್ ಪ್ರಧಾನ. ಮಲಗಳಿಲ್ಲ.

---

ತುರ್ಯಾ:—೪ನೆ ಅವಸ್ಥೆ. ಮಂತ್ರ, ಮಂತ್ರೇಶ್ವರ, ಮಂತ್ರ ಮಹೇಶ್ವರ ಈ ಮೂರು ಪ್ರಮಾತೃಗಳು. ಚಿತ್, ಆನಂದ ಇವೆರಡು ಶಕ್ತಿಗಳು ಇರುತ್ತವೆ. ಆಣವಮಲ ಒಂದೇ ಇಲ್ಲಿರುವುದು. ಆನಂದಾನುಭವ.

---

ಸುಷುಪ್ತಿ:—೩ನೆ ಅವಸ್ಥೆ. ವಿಜ್ಞಾನಾಕಲಾ ಪ್ರಮಾತೃ. ಚಿತ್, ಆನಂದ, ಇಚ್ಛಾ ಈ ಮೂರು ಶಕ್ತಿಗಳು. ಆಣವಮಲ ಒಂದೇ ಇಲ್ಲಿರುವುದು. ಇಚ್ಛೆಗೆ ಹೆಚ್ಚು ಅವಕಾಶ.

---

ಸ್ವಪ್ನ:—೨ನೆ ಅವಸ್ಥೆ. ಪ್ರಳಯಾಕಲಾ ಪ್ರಮಾತೃ. ಚಿತ್, ಆನಂದ, ಇಚ್ಛಾ, ಜ್ಞಾನ ಈ ೪ ಶಕ್ತಿಗಳು. ಆಣವ ಮತ್ತು ಮಾಯೀಯ ಮಲಗಳು. ಜ್ಞಾನಕ್ಕೆ ಹೆಚ್ಚು ಅವಕಾಶ.

---

ಜಾಗ್ರತ್:—ಮೊದಲಿನ ಅವಸ್ಥೆ. ಸಕಲಾ ಪ್ರಮಾತೃ. ಚಿತ್, ಆನಂದ, ಇಚ್ಛಾ, ಜ್ಞಾನ, ಕ್ರಿಯಾ ಈ ೫ ಶಕ್ತಿಗಳು. ಆಣವ, ಮಾಯೀಯ, ಕಾರ್ಮ ಮಲಗಳು. ಕ್ರಿಯೆಗೆ ಹೆಚ್ಚು ಅವಕಾಶ.

## ಉಪಾಯಗಳು

ಈ ಕಾಶ್ಮೀರ ಶಿವಾದ್ವೈತ ಸಿದ್ಧಾಂತದಲ್ಲಿ ಶಿವನಿಗಿಂತ ಅತಿರಿಕ್ತವಾದದ್ದು ಯಾವ ತತ್ವವೂ ಇಲ್ಲ. ಚಿತ್, ಆನಂದ, ಇಚ್ಛಾ, ಜ್ಞಾನ, ಕ್ರಿಯಾಶಕ್ತಿಗಳಿಂದ ಪರಿಪೂರ್ಣನಾಗಿರುವ ಶಿವನು ತನ್ನ ಲೀಲೆಯಿಂದ ವಿಶ್ವವನ್ನು ಸೃಷ್ಟಿಮಾಡುವಾಗ ಇಚ್ಛಾ, ಜ್ಞಾನ, ಕ್ರಿಯಾ ಶಕ್ತಿಗಳು ಸಂಕೋಚವನ್ನು ಪಡೆದು ಆಣವ ಮಾಯೀಯ ಕಾರ್ಮ ಎಂಬ ಮೂರು ಮಲಗಳ ರೂಪವನ್ನು ಪಡೆಯುತ್ತವೆ. ಮರಳಿ ಶಕ್ತಿ ವಿಕಾಸವಾದರೆ ಸ್ವಸ್ವರೂಪಾವಿರ್ಭಾವವುಂಟಾಗುತ್ತದೆ. ಈ ಸ್ವರೂಪ ಪ್ರಾಪ್ತಿಗೋಸ್ಕರ ಯಾವ ಸಾಧನವನ್ನೇ ಅಭ್ಯಾಸಮಾಡಲಿ ಯಾವ ಉಪಾಯವನ್ನೇ ಅನುಷ್ಠಾನಮಾಡಲಿ ಅದು ಕೇವಲ ಪ್ರತಿಬಂಧಕವನ್ನು ನಿವೃತ್ತಿಮಾಡುವಂಥಾದ್ದಾಗಿರುತ್ತದೆ. ಏಕೆಂದರೆ ಎಲ್ಲಾ ಪ್ರಮಾತೃಗಳೂ (ಜೀವರುಗಳೂ) ಶಿವರೂಪಿಗಳೇ ಆಗಿರುತ್ತಾರೆ. ಅವರುಗಳಿಗೆ ಸಂಕೋಚ ನಿವೃತ್ತಿ ಮಾತ್ರ ಆಗಬೇಕಾಗಿರುತ್ತದೆ. ಶಿವತ್ವವು ಜೀವನಲ್ಲಿ ಸಿದ್ಧವಾಗಿದ್ದರೂ ಅವ್ಯಕ್ತವಾಗಿದೆ. ಶಾಸ್ತ್ರಕಾರರು ಸಂಕೋಚದಿಂದ ವಿಕಾಸವನ್ನು ಪಡೆಯುವಂತಹ ಈ ಪರಮ ಫಲಕ್ಕೆ ಬಗೆ ಬಗೆಯ ಮಾರ್ಗಗಳನ್ನು ಸೂಚಿಸಿರುತ್ತಾರೆ. ಅವರವರ ಸಂಸ್ಕಾರಕ್ಕೆ ಯಾವುದು ಹೊಂದುತ್ತದೆಯೋ ಆಯಾ ಸಾಧನಾಭ್ಯಾಸವನ್ನು ಅವರು ಮಾಡಬೇಕೆನ್ನುವುದೇ ಅವರ ಮುಖ್ಯ ತಾತ್ಪರ್ಯ. ಮಾರ್ಗಗಳು ಬೇರೆ ಬೇರೆಯಾಗಿದ್ದರೂ ಗುರಿ ಒಂದೇ ಆಗಿರುತ್ತದೆ. ಆ ಪರಮ ಫಲವು ಶಕ್ತಿ ವಿಕಾಸರೂಪವಾದ ಪೂರ್ಣಾಹಂ ವಿಮರ್ಶಾತ್ಮಕವಾಗಿರುತ್ತದೆ. ಈ ತತ್ವದೃಷ್ಟಿಯಿಂದ ಸಾಧಕನು ಅನುಸರಿಸಬೇಕಾದ ಉಪಾಯಗಳನ್ನು ನಾಲ್ಕು ವಿಧವಾಗಿ ವಿಂಗಡಿಸಿರುತ್ತಾರೆ.

ಉಪಾಯ ಎಂದರೆ ಒಂದು ಕೆಲಸವನ್ನು ಸಿದ್ಧಮಾಡಿಕೊಡುವ ಸಾಧನ ಎಂದು ಅರ್ಥವಾಗುತ್ತದೆ. ಲೌಕಿಕ ದೃಷ್ಟಾಂತದಿಂದ ಪ್ರಕೃತದಲ್ಲಿ ನಿರೂಪಿಸಲಿರುವ ಉಪಾಯದ ಅರ್ಥವು ಸ್ಪಷ್ಟವಾಗುವುದು ಕಷ್ಟ. ನಾವು ಬೊಂಬಾಯಿಗೆ ಹೋಗಬೇಕು. ಇದು ಕಾರ್ಯ. ಮನೆ

ಯಿಂದ ರೈಲ್ವೆ ನಿಲ್ದಾಣದವರೆಗೂ ಒಂದು ಗಾಡಿಯಲ್ಲಿ ಹೋಗುತ್ತೇವೆ. ಗಾಡಿಯು ಉಪಾಯವಾಗಿತ್ತು. ಆದರೆ ಆ ಗಾಡಿಯು ಬೊಂಬಾಯನ್ನು ಸೇರಿಸಲಾರದು. ಅದು ಪೂರ್ಣೋಪಾಯವಲ್ಲ. ಅವಾಂತರೋಪಾಯ. ರೈಲ್‌ಗಾಡಿಯಲ್ಲಿ ಬೊಂಬಾಯಿ ನಿಲ್ದಾಣವನ್ನು ತಲುಪಿದೆವು. ಅದುವರೆಗೂ ರೈಲುಗಾಡಿಯು ಉಪಾಯವಾಗಿತ್ತು. ಬೊಂಬಾಯಿ ತಲುಪಿದನಂತರ ರೈಲು ನಮಗೆ ಬೇಕಾಗಿಲ್ಲ. ಉಪಾಯ ಅಂದರೆ ಸಾಧನ, ಉಪೇಯ ಅಂದರೆ ಸಾಧ್ಯ. ಲೌಕಿಕ ದೃಷ್ಟಾಂತಗಳಲ್ಲಿ ಉಪೇಯ ಪ್ರಾಪ್ತಿಯಾದರೆ (ಕಾರ್ಯ ಸಿದ್ಧಿಯಾದರೆ) ಉಪಾಯಗಳವಶ್ಯಕತೆ ಇಲ್ಲ. ಪ್ರಕೃತದಲ್ಲಿ ಇಲ್ಲಿ ನಿರೂಪಿಸುವ ಉಪಾಯಗಳನ್ನು ಸ್ವಲ್ಪ ವ್ಯತ್ಯಾಸದಿಂದ ಅನುಸಂಧಾನಮಾಡಬೇಕು. ಇಲ್ಲಿಯ ಉಪಾಯಗಳಿಂದ ಪಡೆಯಲಿರುವ ಉಪೇಯವು ನಿತ್ಯಪ್ರಾಪ್ತವಾಗಿದೆ. ಉಪಾಯವು ನಿಮಿತ್ತಮಾತ್ರ. ವ್ಯಕ್ತಿಯ ಸಂಸ್ಕಾರ, ಕರ್ಮಪರಿಪಾಕಗಳಿಗನುಸಾರವಾಗಿ ಉಪಾಯವು ಬದಲಾಯಿಸುತ್ತದೆ. ಕೆಲವಂಶಗಳಲ್ಲಿ ಉಪಾಯವೂ ಉಪೇಯವೂ ಒಂದೇ ಆಗಿರುವುದುಂಟು. ಇನ್ನೊಂದು ಕ್ರಮದಲ್ಲಿ ಉಪಾಯ ಉಪೇಯಗಳು ಭಿನ್ನಾಭಿನ್ನವಾಗಿರುತ್ತವೆ. ಮತ್ತೊಂದು ಕ್ರಮದಲ್ಲಿ ಉಪಾಯ ಉಪೇಯಗಳು ಭಿನ್ನವಾಗಿಯೇ ಇರುತ್ತವೆ. ಅಭಿನವಗುಪ್ತಾಚಾರ್ಯರು ಕಾಶ್ಮೀರ ಶೈವ ಸಂಪ್ರದಾಯದಲ್ಲಿ ನಿರೂಪಿಸಿರುವ ಶಾಂಭವೋಪಾಯಕ್ಕೆ ಅಭೇದೋಪಾಯವೆಂದೂ ಶಾಕ್ತೋಪಾಯಕ್ಕೆ ಭೇದಾಭೇದಾತ್ಮಕವಾಗಿರುವ ಉಪಾಯವೆಂದೂ ಆಣವೋಪಾಯಕ್ಕೆ ಭೇದೋಪಾಯವೆಂದೂ ವಿವರಣೆಯನ್ನಿತ್ತಿರುವರು.

ಅಭೇದೋಪಾಯಮತ್ರೋಕ್ತಂ ಶಾಂಭವಂ ಶಾಕ್ತಮುಚ್ಯತೆ।
ಭೇದಾ ಭೇದಾತ್ಮಕೋಪಾಯಂ ಭೇದೋಪಾಯಂ ತದಾಣವಂ ॥

ತಂತ್ರಾಲೋಕ—ಆಹ್ನಿಕ ೧, ಪುಟ ೩೪೫.

ಜೀವನು ಬದ್ಧನಾಗಿರುವುದು ದೇಹ, ಪ್ರಾಣ, ಇಂದ್ರಿಯಗಳು ಪುರ್ಯಷ್ಟಕ ಇವುಗಳ ಸಂಬಂಧದಿಂದ. ಇವುಗಳಲ್ಲಿ ಎಲ್ಲಾ ಪೂರ್ವಾಪರ ಜ್ಞಾನಗಳಿಗೂ ಕಾರಣವಾಗಿರುವುದು ಚಿತ್ತ. ಇದರ ಪ್ರಭಾವವು

ಬದಲಾವಣೆ ಆಗುವವರೆಗೂ ಸ್ವರೂಪವಿಕಾಸಕ್ಕವಕಾಶವಿಲ್ಲ. ಸಾಂಪ್ರದಾಯಕವಾಗಿ ಶಾಂಭವೋಪಾಯವು ಚಿತ್ತ ಪ್ರಳಯರೂಪವಾಗಿ ನಿರ್ವಿಕಲ್ಪ ಭೂಮಿಗಾಶ್ರಯವಾಗಿಯೂ ಶಾಕ್ತೋಪಾಯವು ಚಿತ್ತ ಸಂಬೋಧ ಲಕ್ಷಣವಾಗಿ ವಿಕಲ್ಪ ಸಂಸ್ಕಾರದಿಂದ ಅಭಿನ್ನವಾದವಿಕಲ್ಪಗಳಿಗೆ ಆಧಾರಭೂಮಿಯಾಗಿಯೂ ಆಣವೋಪಾಯವು ಚಿತ್ತ ವಿಶ್ರಾಂತರೂಪವಾಗಿಯೂ ಇರುತ್ತದೆ.

## ಅನುಪಾಯ

ಈ ಮೂರು ಉಪಾಯಗಳಲ್ಲದೆ ಪರಿಪಾಕವುಳ್ಳ ತೀವ್ರಾಧಿಕಾರಿಗಳಿಗೆ 'ಆನುಪಾಯ' ಎಂಬ ಮತ್ತೊಂದು ಉಪಾಯವುಂಟು. ಅನುಪಾಯವು ಬಹಳ ಗಹನವಾದದ್ದು. ಈ ಉಪಾಯದಲ್ಲಿ ಸಾಧಕನ ಯೋಗ್ಯತೆಯು ಪ್ರಧಾನವಾಗಿದೆಯೇ ಹೊರತು ಮಿಕ್ಕ ಯಾವ ಕ್ರಿಯಾ ಕಲಾಪಗಳೂ ಪ್ರಾಮುಖ್ಯವಲ್ಲ. ಒಂದುಸಲ ಗುರುವಿನ ಉಪದೇಶದಿಂದಾಗಲಿ ಅಥವಾ ಬೇರೆ ಪ್ರಮಾಣದಿಂದಾಗಲಿ, ಅಥವಾ ಶಾಸ್ತ್ರಗಳಿಂದಾಗಲಿ ಶಿವತ್ವವು ತಿಳಿದು ಅದರಲ್ಲಿ ದೃಢವಾದ ವಿಶ್ವಾಸವೇರ್ಪಟ್ಟರೆ ಯಾವ ಕ್ರಿಯಾ ಕಲಾಪವೂ ಬೇಕಿಲ್ಲ. ಚಿನ್ನವನ್ನು ನಾವು ಚಿನ್ನ ಅಂತ ತಿಳಿದರೆ ಅದನ್ನು ಪುನಃ ಚಿನ್ನ ಅಂತ ತಿಳಿಯುವುದಕ್ಕೆ ಕಷ್ಟಪಡಬೇಕಾಗಿಲ್ಲ. ನಾವು ತಂದೆ ತಾಯಿಗಳನ್ನು ಗುರುತಿಸುವುದಕ್ಕೆ ಶಾಸ್ತ್ರ ಬೇಕಾಗಿಲ್ಲ.

## ಶಾಂಭವೋಪಾಯ

ಶಾಂಭವೋಪಾಯವೆಂದರೆ ಚಿತ್ಸ್ವರೂಪದಲ್ಲಿ ಅಭಿನ್ನವಾಗಿರುವ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳಲ್ಲಿ ಇಚ್ಛಾಶಕ್ತಿಯನ್ನು ಪ್ರಧಾನ

---

'ಏಕವಾರಂ ಪ್ರಮಾಣೇನ ಶಾಸ್ತ್ರಾದ್ವಾ ಗುರುವಾಕ್ಯತಃ ।
ಜ್ಞಾತೆ ಶಿವತ್ವೆ ಸರ್ವಸ್ಥೆ ಪ್ರತಿಪತ್ತ್ಯಾ ದೃಢಾತ್ಮನಾ ॥
ಕರಣೇನ ನಾಸ್ತಿಕೃತ್ಯಂ ಕ್ವಾಪಿ ಭಾವನಯಾಪಿವಾ ।
ಸಕೃದ್ ಜ್ಞಾತೆ ಸುವರ್ಣೆಕಿಂ ಭಾವನಾ ಕರಣಾದಿನಾ ॥
ಸರ್ವದಾ ಪಿತೃಪುತ್ರಾದಿ ತುಲ್ಯದಾರ್ಢ್ಯೇನ ಸತ್ಯತಾ ।'

ವಾಗಿಟ್ಟುಕೊಂಡು ಶಕ್ತಿವಿಕಾಸವನ್ನು ಪಡೆಯುವಿಕೆ. ಬದ್ಧ ಪ್ರಮಾತೃವಿಗೆ ಅಂಟಿಕೊಂಡಿರುವ ದೇಹ, ಪ್ರಾಣ, ಪುರ್ಯಷ್ಟಕಗಳಿಂದ ಈ ಉಪಾಯಕ್ಕೆ ಪ್ರಯೋಜನವಿಲ್ಲ. ಪ್ರಮಾತೃವಿಗಿರುವ ಐದು ಶಕ್ತಿಗಳಲ್ಲಿ ಚಿತ್ ಅನಂದ ಇವೆರಡು ಸ್ವರೂಪ ನಿರೂಪಕ ಧರ್ಮಗಳು ಅಂದರೆ ಸಂಕೋಚ ವಿಕಾಸಗಳಿಗೆ ಹೆಚ್ಚು ಆಸ್ಪದಗಳಿಲ್ಲವೆಂದರ್ಥ. ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳು ಸ್ವರೂಪ ನಿರೂಪ ಧರ್ಮಗಳಾಗಿಯೂ ಅಂದರೆ ಮೂಲರೂಪದಲ್ಲಿ ವ್ಯತ್ಯಾಸವಿಲ್ಲದಿದ್ದರೂ ನಿರೂಪಿತ ಸ್ವರೂಪ ಧರ್ಮಗಳಾಗಿರುತ್ತವೆ; ಅಂದರೆ ಇವನ ಅವಸ್ಥೆಗನುಸಾರವಾಗಿ ಸಂಕೋಚ ವಿಕಾಸಗಳನ್ನು ಪಡೆಯುವವುಗಳಾಗಿರುತ್ತವೆ. ಶಕ್ತಿ ಸಂಕೋಚವೇ ಮಲಗಳು. ವಿಕಾಸವೇ ಪೂರ್ಣಾಹಂತಾ. ಪ್ರಮಾತೃವು ತನ್ನ ಸ್ವರೂಪವನ್ನು ತನ್ನ ಸ್ವರೂಪದಲ್ಲಿರುವ ಶಕ್ತಿಗಳನ್ನು ಅಸಂಕೀರ್ಣವಾಗಿ ಆ ಶಕ್ತಿಗಳ ಸ್ವಭಾವ ಸ್ವರೂಪಗಳೊಡನೆ ಅರಿತು ಸ್ವರೂಪಕ್ಕಿಂತ ಬೇರೆಯಾಗಿರುವ ಯಾವ ಕರಣವನ್ನೂ ಅಪೇಕ್ಷಿಸದೆ ತನ್ನ ಇಚ್ಛಾಶಕ್ತಿಯ ಪ್ರಭಾವದಿಂದಲೇ ವಿಕಾಸವನ್ನು ಪಡೆಯುವಿಕೆಯೇ ಶಾಂಭವೋಪಾಯ. ಇವನು ಯಾವ ಅನುಸಂಧಾನವನ್ನೂ ಮಾಡಬೇಕಾಗಿಲ್ಲ. ಧ್ಯಾನ ಧಾರಣಾದಿಗಳನ್ನೂ ಮಾಡಬೇಕಾಗಿಲ್ಲ. ಈ ಉಪಾಯನಿಷ್ಠನಿಗೆ ೩೬ ತತ್ವರೂಪವಾಗಿರುವ ವಿಶ್ವವೆಲ್ಲಾ ನನ್ನಿಂದಲೇ ಹೊರಹೊಮ್ಮಿದೆ, ನನ್ನಲ್ಲಿಯೇ ಪ್ರತಿಫಲಿಸಿದೆ, ನನ್ನಿಂದ ಬೇರೆಯಲ್ಲ ಎಂಬ ವಿರಾಡ್ಭಾವನೆಯುಂಟಾಗಿರುತ್ತದೆ. ಈ ಉಪಾಯದಲ್ಲಿ ತನ್ನ ಸ್ವರೂಪಾನುಬಂಧ ಶಕ್ತಿಗಳನ್ನು ಬಿಟ್ಟು ಬೇರೆ ಯಾವುದನ್ನೂ ಅಪೇಕ್ಷಿಸದೆ ಇರುವುದರಿಂದ ಅಭೇದೋಪಾಯವೆನ್ನಿಸಿಕೊಂಡಿರುತ್ತದೆ. ತನ್ನ ಸ್ವರೂಪಾಭಿನ್ನವಾಗಿರುವ ಇಚ್ಛಾಶಕ್ತಿಯೇ ಇಲ್ಲಿ

---

ಮತ್ತ ಏವೋದಿತಮಿದಂ ಮಯ್ಯೇವ ಪ್ರತಿಬಿಂಬಿತಂ ।
ಮದಭಿನ್ನಮಿದಂಚೇತಿ ತ್ರಿಧೋಪಾಯಸ್ಸಶಾಂಭವಃ ॥

ತಂತ್ರಾಲೋಕ—ಅನ್ಹಿಕ ೩ ಶ್ಲೋಕ ೨೮೦.

ಅಕಿಂಚಿತ್ ಚಿಂತಕಸ್ಯೈವ ಗುರುಣಾ ಪ್ರತಿಬೋಧತಃ ।
ಯಂ ಸಮಾವೇಶ ಮಾಪ್ನೋತಿ ಶಾಂಭವಸ್ಸ ಉದಾಹೃತಃ ।

ಶಿವಸೂತ್ರ ವಿಮರ್ಶಿನಿ.

[ಇಲ್ಲಿ ಗುರುಣಾ ಎಂದರೆ ತನ್ನಿಂದಲೇ ಅಂತ ಅರ್ಥ.]

ಉಪಾಯವಾಗಿ ಅಂಗೀಕರಿಸಲ್ಪಟ್ಟಿದೆ. ಸ್ವರೂಪವಿಕಾಸವೇ ಉಪೇಯ. ಆದುದರಿಂದ ಉಪಾಯವೇ ಉಪೇಯವಾಗಿಯೂ ಉಪೇಯವೇ ಉಪಾಯವಾಗಿಯೂ ಇದ್ದಹಾಗಾಯಿತು. ಇಲ್ಲಿ ಶಾಸ್ತ್ರ ಗುರು ಸಂಸ್ಕಾರ ಮೊದಲಾದವುಗಳೆಲ್ಲಾ ಪರಂಪರಾ ಕಾರಣಗಳಾಗಬಹುದೇ ಹೊರ್ತು ಸ್ವತಂತ್ರ ಕಾರಣಗಳಲ್ಲ.

## ಶಾಕ್ತೋಪಾಯ

ನಮ್ಮ ಅನುಭವದಲ್ಲಿರುವ ತಿಳಿವಳಿಕೆಗಳೆಲ್ಲಾ ಒಂದರಿಂದ ಒಂದು ಬೇರೆಯಾಗಿವೆ. ಬೇರೆಯಾಗಿರುವುದಲ್ಲದೆ ಪ್ರತಿಯೊಂದು ತಿಳಿವಳಿಕೆಯು ತನ್ನದೇ ಆದ ವ್ಯಕ್ತಿತ್ವವನ್ನು ಪಡೆದಿರುತ್ತದೆ. ಇಂತಹ ಬಗೆಬಗೆಯಾಗಿರುವ ಸ್ಥಿತಿಗಳನ್ನೇ ವಿಕಲ್ಪಗಳೆಂದು ಪಾರಿಭಾಷಿಕವಾಗಿ ಕರೆಯುತ್ತಾರೆ. 'ವಿವಿಧಃ ಕಲ್ಪಃ ವಿಕಲ್ಪಃ' ಈ ವಿಕಲ್ಪಗಳು ಲೆಕ್ಕವಿಲ್ಲದಷ್ಟು ಹುಟ್ಟಿ ನಾಶವಾಗುತ್ತಿರುತ್ತವೆ. ಭೂಮಿಯ ಮೊದಲು ಶಿವತತ್ವದವರೆಗೂ ಇರುವ ತತ್ವಗಳ ತಿಳಿವಳಿಕೆಗಳೂ ವಿಕಲ್ಪಗಳೇ ಆಗಿವೆ. ಭೇದಜ್ಞಾನವಿಲ್ಲದೆ ವಿಕಲ್ಪವಿಲ್ಲ. ಈ ವಿಕಲ್ಪಗಳ ಮಹಿಮೆಯಿಂದಲೇ ನಾನು, ನನ್ನದು, ನಾನುಬೇರೆ ಎಂಬ ಭಾವನೆಗಳು ನಿಂತಿರುತ್ತವೆ. ನಮ್ಮ ಭಾವನಾಪ್ರಪಂಚದಲ್ಲಿ ಯಾವ ಯೋಚನೆಗಳೂ ಇಲ್ಲದಿದ್ದರೆ ನಿರ್ವಿಕಲ್ಪ ಸ್ಥಿತಿಯೆನ್ನುತ್ತೇವೆ. ಶಾಸ್ತ್ರಜ್ಞರು ದೇಶ ಕಾಲ ಆಕಾರ ಈ ಮೂರು ಅಂಶಗಳಿಗೆ ಒಳಪಟ್ಟಿರುವುದೆಲ್ಲಾ ವಿಕಲ್ಪಗಳೆಂದೂ ಅದಿಲ್ಲದ ಸ್ಥಿತಿಯು ನಿರ್ವಿಕಲ್ಪವೆಂದೂ ಹೇಳುತ್ತಾರೆ. ಈ ವಿಕಲ್ಪ ಪ್ರವಾಹದಿಂದಲೇ ಶಕ್ತಿ ಸಂಕೋಚವಾಗಿ ಬದ್ಧಾವಸ್ಥೆಯುಂಟಾಗಿದೆ. ಈ ಅವಸ್ಥೆಯಲ್ಲಿ ವಿಕಲ್ಪ ಪ್ರಭಾವವು ರಾಗದ್ವೇಷಗಳಿಗೂ ಸುಖ ದುಃಖಗಳಿಗೂ ಕಾರಣವಾಗಿದೆ. ಎಷ್ಟೇ ಅವಾಂತರಗಳಿಗೆ ಕಾರಣಗಳಾಗಿದ್ದರೂ ಇವುಗಳಿಗೆ ಒಂದು ಅತಿಶಯವಾದ ಸಾಮರ್ಥ್ಯವಿದೆ. ಲೆಕ್ಕ ಮಾಡಿದ ಪದಾರ್ಥಗಳ ಹಾಗೆ ಇವು ನಿಯಮಿತವಾದ ಸಂಖ್ಯೆಯಲ್ಲೇ ಇರುವುದಿಲ್ಲ. ಒಂದು ವಿಕಲ್ಪದಿಂದ ಇನ್ನೊಂದು ಸಮಾನವಾದ

ವಿಕಲ್ಪವು ಹುಟ್ಟುತ್ತದೆ. ಅನೇಕವೇಳೆ ಒಂದೇ ವಿಕಲ್ಪದಿಂದ ಅನೇಕ ವಿಕಲ್ಪಗಳುಂಟಾಗುತ್ತವೆ. ಅನೇಕ ವಿಕಲ್ಪಗಳಿಂದ ಒಂದು ವಿಕಲ್ಪ ಹುಟ್ಟುವುದೂ ಉಂಟು. ಈ ವಿಕಲ್ಪ ಸಂತಾನವು ವಿಲಕ್ಷಣವಾದ ಸಂತತಿಯಾಗಿದೆ. ಇದರ ಬೆಳವಣಿಗೆ ಇದ್ದಹಾಗೆ ಇದರ ನಾಶವೂ ಆಶ್ಚರ್ಯಕರವಾಗಿದೆ. ಒಂದು ವಿಕಲ್ಪವು ಅದಕ್ಕೆ ವಿರುದ್ಧವಾದ ವಿಕಲ್ಪದಿಂದ ನಾಶವಾಗುತ್ತದೆ. ಅಥವಾ ತನ್ನ ತೀವ್ರತೆಯನ್ನು ಕಳೆದುಕೊಳ್ಳುತ್ತದೆ. ಒಂದು ವಿಕಲ್ಪದಿಂದ ಇನ್ನೊಂದು ವಿಕಲ್ಪವು ಸಂಸ್ಕರಿಸಲ್ಪಟ್ಟು ರೂಪಾಂತರಗಳನ್ನು ಪಡೆಯುವುದೂ ಉಂಟು.

ವಿಕಲ್ಪಗಳನ್ನು ನಾವು ತಿಳಿವಳಿಕೆಗೋಸ್ಕರ ಅಸ್ಫುಟವಾಗಿರುವುದು, ಸ್ಫುಟವಾಗದಿರುವುದು, ಸ್ಫುಟವಾಗಲಿಕ್ಕೆ ಪ್ರಾರಂಭವಾಗಿರುವುದು, ಸ್ಫುಟವಾಗಿರುವುದು, ಎಂದು ನಾಲ್ಕು ಬಗೆಯಾಗಿ ವಿಂಗಡಿಸಬಹುದು. ಇವು ಮೊದಲನೆಯ ಅವಸ್ಥೆಯನ್ನು ಬಿಟ್ಟು ಮಿಕ್ಕ ಮೂರು ಹಂತಗಳಲ್ಲಿಯೂ ಸುಖ ದುಃಖವನ್ನುಂಟುಮಾಡುತ್ತವೆ.

ಸಾಮಾನ್ಯರಾದವರು ಯೋಗ್ಯರಾದವರ ಸಹವಾಸದಲ್ಲಿ ಹತ್ತಾರು ವರ್ಷಗಳಿದ್ದು ಇವರೂ ಯೋಗ್ಯರಾಗುವುದನ್ನು ನಾವು ಕಂಡಿದ್ದೇವೆ. ಅದೇ ನೀಚರ ಸಹವಾಸದಿಂದ ಕೆಡುವುದನ್ನೂ ನೋಡಬಹುದು. ಹೊರಗಿನ ಪ್ರಪಂಚದಲ್ಲಿ ಹೇಗೆ ವಿಕಲ್ಪಗಳು ಸಂಸ್ಕರಿಸಲ್ಪಡುತ್ತವೆಯೋ ಅದಕ್ಕಿಂತಲೂ ಸೂಕ್ಷ್ಮರೀತಿಯಲ್ಲಿ ಆಂತರ್ಯತೆಯಲ್ಲಿಯೂ ವಿಕಲ್ಪ ಸ್ವರೂಪಗಳು ಬದಲಾವಣೆಯನ್ನು ಪಡೆಯುತ್ತವೆ.

ವಿಕಲ್ಪ ಪ್ರವಾಹವು ಆಶ್ಚರ್ಯಕರವಾಗಿ ಎಡಬಿಡದೆ ಹರಿಯುತ್ತಿದ್ದರೂ ಮಧ್ಯೆ ಮಧ್ಯೆ ಮಿಂಚಿನಂತೆ ವಿಕಲ್ಪಗಳಿಲ್ಲದ ಚಿತ್ಸಂಸ್ಪರ್ಶವೇರ್ಪಡುತ್ತಿರುತ್ತದೆ.

---

" ಚತುಷ್ವೇವ ವಿಕಲ್ಪೇಷು ಯಃ ಸಂಸ್ಕಾರಃ ಕ್ರಮಾದಸೌ ।
ಅಸ್ಫುಟಃ ಸ್ಫುಟತಾಭಾವೀ ಪ್ರಸ್ಫುಟಃ ಸ್ಫುಟತಾತ್ಮಕಃ " ॥

ತಂತ್ರಾಲೋಕ, ಆಹ್ನಿಕ ೪.

" ಸಾಚದೃಶ್ಯಾ ಹೃದದ್ದೇಶೆ ಕಾರ್ಯಸ್ಮರಣ ಕಾಲತಃ।
ಪ್ರಹರ್ಷಾವೇದ ಸಮಯೆ ದರಸಂದರ್ಶನಕ್ಷಣೆ।
ಅನಾಲೋಚನತೋದೃಷ್ಟೆ ವಿಸರ್ಗ ಪ್ರಸರಾಸ್ಪದೆ।
ವಿಸರ್ಗೋಕ್ತಿ ಪ್ರಸಂಗೇಚ ವಾಚನೆ ಧಾವನೆ ತಥಾ।
ಏತೇಷ್ವೇವ ಪ್ರಸಂಗೇಷು ಸರ್ವಶಕ್ತಿ ವಿಲೋಲತಾ ॥ "

ಶಿವದೃಷ್ಟಿ.

ಓದುವುದು ಓಡುವುದು ಭಯ, ಸಂತೋಷ, ಆಶ್ಚರ್ಯ, ವಿಸರ್ಗೋಚ್ಚಾರಣೆ ಮೊದಲಾದ ಘಟನೆಗಳಲ್ಲಿ ಹೀಗೆ ಎಂದು ಹೇಳಲಿ ಕ್ಕಾಗದಿರುವ ಕ್ಷಣಕಾಲ ಮಾತ್ರ ಅನುಭವಕ್ಕೆ ಬರುವ ನಿಸ್ತರಂಗ ಸ್ಥಿತಿಯೇರ್ಪಡುತ್ತದೆ. ಈ ನಿಸ್ತರಂಗ ಸ್ಥಿತಿ ದೃಢ ಭೂಮಿಯಾಗು ವುದಕ್ಕೆ ಈ ಉಪಾಯಗಳು ಹೊರಟಿವೆ. ಶಿವನ ಮೊದಲು ಭೂಮಿ ವರೆಗೂ ಇರುವ ತತ್ವ ಸ್ವರೂಪಜ್ಞಾನವೂ ವಿಕಲ್ಪಗಳೆಂದು ಹೇಳಿದೆವು. ನಮ್ಮ ವ್ಯವಹಾರ ಸೌಕರ್ಯಕ್ಕಾಗಿ ವಿಕಲ್ಪಗಳನ್ನು ಮೂರು ಬಗೆ ಯಾಗಿ ವಿಂಗಡಿಸಬಹುದು. ಹೊರಗಿನ ಪ್ರಪಂಚದಲ್ಲಿ ನಮ್ಮ ಜೀವನ ವ್ಯವಹಾರವನ್ನು ಸಾಗಿಸುವುದಕ್ಕೆ ಆಶ್ರಯವಾಗಿರುವ ವಿಕಲ್ಪಗಳ ಗುಂಪೊಂದು. ನಮ್ಮ ಸ್ವಸ್ವರೂಪ ವಿಕಾಸವನ್ನು ಪಡೆಯುವುದಕ್ಕೋ ಸ್ಕರ ನಾವು ತಿಳಿಯುವ ಪರಾ, ಪರಾಪರಾ, ಅಪರಾ ಎಂಬ ಮೂರು ಬಗೆಯಾದ ತತ್ವಗಳ ವಿಮರ್ಶನಾರೂಪವಾದ ವಿಕಲ್ಪಗಳ ಗುಂಪೊಂದು. ವಿಕಲ್ಪ ಭೂಯಿಷ್ಠವಾದ ವಿಕಲ್ಪ ಸಂತತಿಯನ್ನು ಕ್ರಮಕ್ರಮವಾಗಿ ತೊಡೆದುಹಾಕಿ ನಿರ್ವಿಕಲ್ಪ ಭೂಮಿಯನ್ನು ಪಡೆಯುವುದಕ್ಕೆ ನಾವು ಉಪಯೋಗಿಸುವ ವಿಕಲ್ಪಗಳ ಗುಂಪೊಂದು. ಅಂದರೆ ಶಿವನಿಗಿಂತ ಬೇರೆ ಯಾವ ವಿಕಲ್ಪವಿಲ್ಲದಿದ್ದರೂ ಅಖ್ಯಾತಿಯ ಬಲದಿಂದ ರೂಪು ಗೊಂಡಿರುವ ಭಿನ್ನವೇದ್ಯಪ್ರಥಾತ್ಮಕವಾಗಿರುವ ಈ ವಿಶ್ವದ ಪದಾರ್ಥ ವಿಕಲ್ಪಗಳನ್ನು ತೊಡೆದುಹಾಕಬೇಕು. ಹಾಗೆಯೇ ಅಖ್ಯಾತಿಯಿಂದ ಕಲುಷಿತವಾಗದ ಸ್ವಯಂಪ್ರಕಾಶವಾದ ಸ್ವಸ್ವರೂಪ ವಿಕಾಸಾತ್ಮಕವಾದ ಸ್ಥಿತಿಯನ್ನು ಪಡೆಯಲಿಕ್ಕೋಸ್ಕರ ಮಾಡುವ ಅನುಸಂಧಾನವೇ ನಿರ್ವಿ ಕಲ್ಪ ಭೂಮಿ. ದ್ವೈತ ಭಾವನೆಯಿಂದಿರುವ ವಿಕಲ್ಪ ಭೂಮಿಗಳನ್ನು ತೊಡೆದುಹಾಕುವುದಕ್ಕೆ ನಾವು ಉಪಯೋಗಿಸುವ ವಿಕಲ್ಪವು ವಿಕಲ್ಪ

ಗಳನ್ನು ತೊಡೆದುಹಾಕಿ ತಾನೂ ಮಾಯವಾಗುತ್ತದೆ. ಚಿತ್ಸ್ವರೂಪ ದಲ್ಲಿ ಯಾವ ಅಂಶವನ್ನೂ ತೆಗೆದುಹಾಕುವಹಾಗಿಲ್ಲ. ಹೊಸ ಅಂಶ ವನ್ನು ಸೇರಿಸುವಹಾಗಿಲ್ಲ. ಅದರ ಅನುಭವವು ಸ್ಫುಟವಾಗುವು ದೊಂದೇ ಗುರಿ.

ಈ ವಿಕಲ್ಪಗಳ ಹೊಯ್ದಾಟದಿಂದ ತಪ್ಪಿಸಿಕೊಳ್ಳುವುದಕ್ಕೆ ಮಾಡುವ ಪ್ರಯತ್ನಗಳು ವಿಕಲ್ಪರೂಪಗಳಾಗಿಯೇ ಇದ್ದರೂ ಅವು ಶುದ್ಧವಿದ್ಯಾ ವಿಕಲ್ಪಗಳು. ಈ ವಿಧವಾದ ವಿಮರ್ಶೆಯು ಸಾಧಕನಿಗೆ ಹುಟ್ಟಬೇಕಾದರೆ ಸತ್ತರ್ಕ, ಸದಾಗಮ, ಸದ್ಗುರೂಪದೇಶ ಇವುಗಳು ಬೇಕು. ಸತ್ತರ್ಕವೆನ್ನುವುದು ಇವನಿಗಿರುವ ತಿಳಿವಳಿಕೆಯಲ್ಲಿ ಸ್ವಸ್ವರೂಪ ವಿಕಾಸವನ್ನುಂಟುಮಾಡುವ ಕ್ರಮವನ್ನು ನಿರ್ಣಯಿಸುತ್ತದೆ. ಬಾರಿ ಬಾರಿಗೂ ಜ್ಯೋತಿ ಸ್ವರೂಪವನ್ನು ವಿಮರ್ಶೆಮಾಡುವವರಿಗೆ ಸ್ಫುಟ ವಾದ ಸಾಕ್ಷಾತ್ಕಾರವೇರ್ಪಡುತ್ತದೆ. ಅದರ ಪ್ರಭಾವದಿಂದ ವಿಶ್ವಾತ್ಮ ಕನೂ ವಿಶ್ವಾತೀತನೂ ನಾನೇ ಎಂಬ ಪೂರ್ಣಾಹಂಭಾವ ವುಂಟಾಗುತ್ತದೆ.

ಬದ್ಧ ದಶೆಯಲ್ಲಿ ವಿಕಲ್ಪಗಳಿಗಾಶ್ರಯವಾಗಿರುವುದು ಚಿತ್ತ. ಚಿತ್ತದಿಂದುಂಟಾಗುವ ವಿಕಲ್ಪಗಳಿಂದ ಜೀವನಯಾತ್ರೆಯು ನಡೆಯು ತ್ತಿರುವುದು ಎಲ್ಲರ ಅನುಭವದಲ್ಲಿಯೂ ಇದೆ. ಈ ವಿಕಲ್ಪಗಳನ್ನೇ

---

ವಿಕಲ್ಪಃ ಸಂಸ್ಕೃತಸ್ತೂತೆ ವಿಕಲ್ಪಂ ಸ್ವಾತ್ಮ ಸಂಸ್ಕೃತಂ।
ಸ್ವತುಲ್ಯಂ ಸೋಽಪಿ ಸೋಽಪ್ಯನ್ಯಂ ಸೋಽಪ್ಯನ್ಯಂ ಸದೃಶಾತ್ಮಕಂ ॥
ತಂತ್ರಾಲೋಕ—೪ನೆ ಆಹ್ನಿಕ, ಶ್ಲೋಕ ೩.

ತತಃಸ್ಫುಟತರೋಯಾವದಂತೆ ಸ್ಫುಟತಮೋ ಭವೇತ್ ।
ಅಸ್ಫುಟಾದೌ ವಿಕಲ್ಪೇಚ ಭೇದೋಽಸ್ಯಸ್ತ್ಯಾಂತರಾಲಿಕಃ ॥
ತತಸ್ಫುಟತಮೋದಾರ ತಾದ್ರೂಪ್ಯ ಪರಿಬೃಂಹಿತಾ ।
ಸಂವಿದಭ್ಯೇತಿ ವಿಮಲಾಮ ವಿಕಲ್ಪಸ್ವರೂಪತಾಂ ॥
ತಂತ್ರಾಲೋಕ—೪ನೆ ಆಹ್ನಿಕ, ಶ್ಲೋಕ ೫, ೬.

ಅತಶ್ಚ ಭೈರವೀಯಂ ಯತ್ ತೇಜಃ ಸಂವಿತ್ಸ್ವಭಾವಕಂ ।
ಭೂಯೋ ಭೂಯೋ ವಿಮೃಶತಾಂ ಜಾಯತೆ ತತ್ಸ್ಫುಟಾತ್ಮತಾ ॥
ತಂತ್ರಾಲೋಕ—೪ನೆ ಆಹ್ನಿಕ, ಶ್ಲೋಕ ೭.

ಪ್ರತ್ಯಾಹಾರ ಧ್ಯಾನ ಧಾರಣ ಮೊದಲಾದ ಸಾಧನಗಳಿಂದ ಹದ ಗೊಳಿಸಬೇಕು. ಹಾಗೆಯೇ ಸ್ವಸ್ವರೂಪಾನುಸಂಧಾನದಿಂದ ಮರಳಿ ಉಂಟಾಗುವ ವಿಕಲ್ಪಗಳಿಗೆ ಅಧಿಕಾರವನ್ನು ಕಡಿಮೆ ಮಾಡಬೇಕು. ಒಂದು ಮುಖದಲ್ಲಿ ವಿಕಲ್ಪಗಳನ್ನು ಸಂಸ್ಕರಿಸುವುದು ಇನ್ನೊಂದು ಮುಖದಲ್ಲಿ ನಿರ್ವಿಕಲ್ಪ ಭೂಮಿಯಲ್ಲಿ ಸ್ಥೈರ್ಯವನ್ನು ಸಂಪಾದಿಸುವುದು ಈ ಎರಡಂಶಗಳು ಈ ಉಪಾಯದಲ್ಲಡಗಿವೆ. ವಿಕಲ್ಪಗಳನ್ನು ಸಂಸ್ಕರಿಸುವುದಕ್ಕೆ ನಾವು ಉಪಯೋಗಿಸುವ ಸಾಧನೆಗಳು ಭೇದರೂಪವಾಗಿವೆ. ನಿರ್ವಿಕಲ್ಪ ಭೂಮಿಯಲ್ಲಿ ನಾವು ಸ್ಥೈರ್ಯವನ್ನು ಸಂಪಾದಿಸುವ ಸಾಧನೆ ಅಭೇದ ದೃಷ್ಟಿ. ಈ ಎರಡಂಶಗಳು ಕೂಡಿರುವುದರಿಂದ ಇದಕ್ಕೆ ಭೇದಾ ಭೇದೋಪಾಯವೆಂದು ಹೆಸರು. ಇದನ್ನೇ ಜ್ಞಾನೋಪಾಯವೆಂದೂ ಶಾಕ್ತೋಪಾಯವೆಂದೂ ಹೇಳುವುದು. ಈ ಉಪಾಯದಿಂದ ಸಾಕ್ಷಾತ್ಕಾರವನ್ನು ಪಡೆದಿರುವವನು ಜಾಗ್ರದವಸ್ಥೆಯಲ್ಲಿಯೂ ಚಿದ್ರಸಘನರೂಪವಾದ ಪರಮಾರ್ಥಾನಂದವನ್ನು ಅನುಭವಿಸುತ್ತಿರುತ್ತಾನೆ.

ಉಚ್ಚಾರರಹಿತಂ ವಸ್ತು, ಚೈತಸೈವ ವಿಚಿಂತಯನ್ ।
ಯಂ ಸಮಾವೇಶ ಮಾಪ್ನೋತಿ ಶಾಕ್ತಸ್ಸೋಽತ್ರಾಭಿಧೀಯತೇ ॥
ಶಿವಸೂತ್ರ ವಿಮರ್ಶಿನಿ.

ನಮ್ಮ ಭಾಷೆಯಿಂದ ಉಚ್ಚರಿಸಲಾಗದಿರುವ ಪರಮಾರ್ಥ ತತ್ವವನ್ನು ಮನಸ್ಸಿನಿಂದಲೇ ಧ್ಯಾನಮಾಡುತ್ತಾ ಸಾಧಕನು ಯಾವ ಸಮಾವೇಶವನ್ನು ಪಡೆಯುತ್ತಾನೋ ಅದಕ್ಕೆ ಶಾಕ್ತೋಪಾಯವೆಂದು ಹೆಸರು.

## ಆಣವೋಪಾಯ

ಪರಶಿವನ ವಿಶ್ವಾತ್ಮ ತತ್ವಕ್ಕೆ ಅಥವಾ ವಿಶ್ವರೂಪಿಯಾಗಿರಲಿಕ್ಕೆ ಯಾವ ಶಕ್ತಿಯು ಸ್ವತಂತ್ರವಾಗಿ ಇತರ ಅಪೇಕ್ಷೆಯಿಲ್ಲದೆ ಕಾರಣವಾಗಿದೆಯೋ ಅಂತಹ ಶಕ್ತಿಯನ್ನು ಅನುತ್ತರಾ, ಪ್ರತಿಭಾ, ಪರಾಶಕ್ತಿ ಎಂದು ಕರೆಯುತ್ತಾರೆ.

ಪರಿಪೂರ್ಣನಾಗಿರುವ ಪರಮಶಿವನು ತನ್ನ ಸ್ವಾತಂತ್ರ್ಯಶಕ್ತಿಯ ವಿಲಾಸದಿಂದ ವಿಶ್ವವನ್ನು ಹೊರಹೊಮ್ಮಿಸುವುದಕ್ಕೋಸ್ಕರ ಶಿವ, ಶಕ್ತಿ ಈ ಎರಡು ರೂಪಗಳನ್ನು ತನ್ನಲ್ಲಿಯೇ ತೋರ್ಪಡಿಸಿಕೊಳ್ಳುತ್ತಾನೆ.

ಶಿವನಿಗೆ 'ಅಕುಲ' ಎಂಬ ಪರಿಭಾಷೆ. ಪರಾಶಕ್ತಿಗೆ 'ಕೌಲಿಕೀ' ಎಂಬ ಸಂಜ್ಞೆ. ಇವೆರಡೂ ಒಂದನ್ನೊಂದು ಬಿಟ್ಟಿರುವುದಿಲ್ಲ. ಈ ಎರಡು ತತ್ವಗಳ ಸಂಘಟ್ಟರೂಪವಾದ ಚಲನ ಅಥವಾ ಸ್ಪಂದವೇ 'ಸ್ವಾತ್ಮೋಚ್ಛಲತ್ತ' ಎನ್ನಿಸಿಕೊಳ್ಳುವುದು. ಸ್ವಾತ್ಮೋಚ್ಛಲತ್ತ ಎಂದರೆ ತನ್ನ ಸ್ವರೂಪದ ಸ್ಫುರಣ. ಇದರಿಂದ ಪ್ರಕಾಶ ವಿಮರ್ಶ ರೂಪವಾಗಿ ಅನುತ್ತರಾವಸ್ಥೆಯಲ್ಲಿರುವ ಶಿವಶಕ್ತಿಗಳ ಸಂಘಟ್ಟ ದಿಂದಲೇ ಇಚ್ಛಾ ಜ್ಞಾನಾದಿ ಶಕ್ತಿಗಳ ಪ್ರಸರಣರೂಪವಾದ ವಿಶ್ವ ಸೃಷ್ಟಿಯುಂಟಾಗುತ್ತದೆ. ವಿಶ್ವೋತ್ತೀರ್ಣವಾಗಿಯೂ ವಿಶ್ವಮಯ ವಾಗಿಯೂ ಈ ಎರಡು ಶಕ್ತಿಗಳೂ ವಿರಾಜಿಸುತ್ತವೆ. ವಿಶ್ವಮಯ ವಾಗಿದ್ದಾಗಲೂ ವಿಶ್ವೋತ್ತೀರ್ಣವಾದ ಸ್ಥಿತಿಯಿಂದ ಪರಿಪೂರ್ಣ ವಾಗಿವೆ. ಈ ಪರಾಶಕ್ತಿಯಿಂದ ಕೂಡಿದ ಪರಮಶಿವನು ಮೂರು ಬಗೆಯಾಗಿ ಪರಾ, ಪರಾಪರಾ, ಅಪರಾ ಎಂಬ ಭೇದಗಳಿಂದ ವಿಶ್ವಾತ್ಮಕ ವಾಗಿಯೂ ವಿಶ್ವೋತ್ತೀರ್ಣವಾಗಿಯೂ ವಿರಾಜಿಸುತ್ತಿದ್ದಾನೆ. ಇಲ್ಲಿ ಪರಾ ಎಂದರೆ ಪರಮಶಿವ. ಪರಾಪರಾ ಎಂದರೆ ಶಿವನಿಂದ ಶುದ್ಧ ವಿದ್ಯೆಯವರೆಗಿರುವ ಐದು ತತ್ವಗಳು. ಅಪರಾ ಎಂದರೆ ಕಲಾದಿ ಧರಣ್ಯಂತ ಇರುವ ೩೦ ತತ್ವಗಳು. ಇದನ್ನೇ ಅಭೇದ, ಭೇದಾಭೇದ ಭೇದ ಎಂದು ಹೇಳುವುದು. ಎಲ್ಲಾ ತತ್ವ ಶಾಸ್ತ್ರಗಳಲ್ಲಿಯೂ ಈ ಮೂರು ಬಗೆಯಾದ ಮನೋಭಾವಗಳು ಅಂತರ್ಭೂತವಾಗಿರುತ್ತವೆ.

ಪರಮೇಶ್ವರಿಯಾದ ಈ ಪರಾವಾಕ್ ಶಕ್ತಿಯು ಪ್ರಸರಣ ಕ್ರಮ ದಲ್ಲಿ ಇಚ್ಛಾ ಜ್ಞಾನ ಕ್ರಿಯಾ ರೂಪವನ್ನಂಗೀಕರಿಸುತ್ತದೆ. ಅನಂತರ ಬೀಜ, ಯೋನಿ, ವರ್ಗ, ವರ್ಗ್ಯಾದಿ ರೂಪಗಳಿಂದ ಸ್ಫುರಿಸುತ್ತದೆ.

---

ಅನನ್ಯಾಪೇಕ್ಷಿತಾಯಾಸ್ಯ ವಿಶ್ವಾತ್ಮತ್ವಂ ಪ್ರತಿಪ್ರಭೋಃ ।
ತಾಂ ಪರಾಂ ಪ್ರತಿಭಾಂ ದೇವೀಂ ಸಂಗಿರಂತೆಹ್ಯನುತ್ತರಾಂ ॥
ಅಕುಲಸ್ಯಾಸ್ಯದೇವಸ್ಯ ಕುಲಪ್ರಥನ ಶಾಲಿನೀ ।
ಕೌಲಿಕೀ ಸಾ ಪರಾಶಕ್ತಿಃ ಅವಿಯುಕ್ತೊ ಯಯಾಪ್ರಭುಃ ॥
ತಯೋರ್ಯದ್ಯಾಮಲಂ ರೂಪಂ ಸಸಂಘಟ್ಟ ಇತಿಸ್ಮೃತಃ ।
ಆನಂದ ಶಕ್ತಿಸ್ಸೈವೋಕ್ತಾಯತೋವಿಶ್ವಂ ವಿಸೃಜ್ಯತೆ ॥
ತಂತ್ರಾಲೋಕ—ಆನ್ನಿಕ [illegible] ೬೮.

ಶಿವ ಶಕ್ತಿ ಮಾಹೇಶ್ವರ್ಯಾದಿ ವಾಚಕಗಳಾದ ಅಕಾರ ಮೊದಲು ಕ್ಷಕಾರದವರೆಗೂ ಇರುವ ಮಾತೃಕಾರೂಪವನ್ನಂಗೀಕರಿಸುತ್ತದೆ. ಇದರಿಂದ ಎಲ್ಲಾ ಪ್ರಮಾತೃಗಳಲ್ಲಿಯೂ ಅವಿಕಲ್ಪವಾದ ಮತ್ತು ಸವಿಕಲ್ಪಕವಾದ ಆಯಾಯ ತಿಳಿವಳಿಕೆಯ ಅನುಭವಗಳನ್ನುಂಟು ಮಾಡುತ್ತದೆ. ಅಂತಃವ್ಯಾಪಿನಿ ಪರಾಮರ್ಶರೂಪವಾಗಿದ್ದು ಸ್ಥೂಲವಾದ ಮತ್ತು ಸೂಕ್ಷ್ಮವಾದ ಶಬ್ದವನ್ನು ಹೊರಹೊಮ್ಮಿಸುತ್ತಾ ವರ್ಗ ಮತ್ತು ವರ್ಗ್ಯ ಈ ಅಕ್ಷರಗಳ ದ್ವಾರಾ ವಿಸ್ಮಯ ಹರ್ಷ, ಭಯ, ರಾಗ ದ್ವೇಷ ಮೊದಲಾದ ಭಾವಗಳನ್ನು ಹುಟ್ಟಿಸುತ್ತಾ ಅಸಂಕುಚಿತವಾದ ಸ್ವತಂತ್ರವಾದ ಚಿದ್ಘನಾತ್ಮಕವಾದ ತನ್ನ ರೂಪನ್ನು ಮರೆಸಿಕೊಂಡಿರುತ್ತದೆ. ಸಂಕುಚಿತವಾದ ಪರಾಧೀನವಾದ ದೇಹ ಪ್ರಾಣಾದಿಗಳಲ್ಲಿ ಮಮಕಾರವನ್ನು ಹುಟ್ಟಿಸುತ್ತದೆ. ಮಾಯಾಪದದಲ್ಲಿ ಇದು ಪರಾಶಕ್ತಿಯ ವಿಲಾಸ.

ವಿಕಲ್ಪಗಳನ್ನು ಸಂಸ್ಕರಿಸುವಾಗ ಇನ್ನೊಂದು ವಿಕಲ್ಪವನ್ನು ಉಪಯೋಗಿಸಿ ಸಂಸ್ಕರಿಸುವುದು ಒಂದು ಬಗೆ. ಅಂದರೆ ಕೆಲವರಿಗೆ ಬೇರೊಂದು ಉಪಾಯದಿಂದ ವಿಕಲ್ಪ ಸಂಸ್ಕರಣವಾಗಬೇಕು. ಕೆಲವರಿಗೆ ಉಪಾಯದ ಅಪೇಕ್ಷೆಯಿಲ್ಲದೆ ಇರುವುದರಿಂದ ವಿಕಲ್ಪಗಳು ಸ್ಥಿರವಾಗಿ ನಿಲ್ಲುತ್ತವೆ.

ಯಾವಾಗ ವಿಕಲ್ಪ ಸಂಸ್ಕಾರಗಳಿಗೆ ಉಪಾಯಗಳನ್ನು ಅಪೇಕ್ಷಿಸುತ್ತೇವೆಯೋ ಆಗ ಇನ್ನೊಂದು ವಿಕಲ್ಪವನ್ನು ನಾವು ಕೋರಿದಂತಾಯಿತು. ಈ ಸ್ಥಿತಿಯಲ್ಲಿ ಅಣುವಾಗಿರುವ ಈ ಬದ್ಧಾತ್ಮನು ತನಗಿರುವ ಬುದ್ಧಿ ದೇಹ ಪ್ರಾಣ ಮೊದಲಾದ ಕರಣಗಳನ್ನು ಉಪಾಯಗಳನ್ನಾಗಿ ಸ್ವೀಕರಿಸುತ್ತಾನೆ. ಅಣುವಾಗಿರುವ ಈ ಆತ್ಮನು ಪರಿಮಿತಿ

---

ವಿಕಲ್ಪಃ ಕಸ್ಯಚಿತ್ಸ್ವಾತ್ಮ ಸ್ವಾತಂತ್ರ್ಯಾದೇವ ಸುಸ್ಥಿರಃ ।
ಉಪಾಯಾಂತರ ಸಾಪೇಕ್ಷ ವಿಯೋಗೇನೈವಜಾಯತೆ ॥
ಕಸ್ಯಚಿತ್ ವಿಕಲ್ಪೋಽಸೌ ಸ್ವಾತ್ಮಸಂಸ್ಕರಣಂ ಪ್ರತಿ ।
ಉಪಾಯಾಂತರ ಸಾಪೇಕ್ಷಃ ತತ್ಪ್ರೋಕ್ತಃ ಪೂರ್ವಕೋವಿಧಿಃ ॥

[illegible]

ಗಳಾಗಿರುವ ಈ ಕರಣಗಳನ್ನು ಉಪಾಯಗಳಾಗಿ ಸ್ವೀಕರಿಸಿ ಚಿತ್ತ ವಿಶ್ರಾಂತವನ್ನು ಸಾಧಿಸುವ ಕ್ರಮಕ್ಕೆ ಆಣವೋಪಾಯವೆಂದು ಹೆಸರು. ಇಲ್ಲಿ ಬುದ್ಧಿಯು ಧ್ಯಾನಾತ್ಮಕವಾಗಿದೆ. ಸ್ವಪ್ರಕಾಶವಾದ ಸರ್ವ ತತ್ವಾಂತರ್ಭೂತವಾದ ಪರತತ್ವವನ್ನು ತನ್ನ ಹೃದಯದಲ್ಲಿ ಪ್ರಮಾತೃ ಪ್ರಮಾಣ ಪ್ರಮೇಯರೂಪದ ಸಂಪುಟಾತ್ಮಕವಾಗಿ ಧ್ಯಾನಮಾಡ ಬೇಕು. ಧ್ಯಾನಕ್ರಮದಲ್ಲಿ ಆ ಪರತತ್ವದಿಂದ ಚಕ್ಷುರಾದಿ ಇಂದ್ರಿಯ ಗಳ ಮೂಲಕ ಹೊರಹೊಮ್ಮಿ ಪ್ರಮೇಯರೂಪವಾಗಿ ಸೃಷ್ಟಿಯ ವಿಲಾಸವನ್ನನುಭವಿಸುತ್ತದೆ. ಅದೇ ಪ್ರಮೇಯಗಳೇ ಮರಳಿ ಚಿದ್ರೂಪನಾದ ಪರಮಾತ್ಮನಲ್ಲಿಯೇ ಲೀನವಾಗುತ್ತವೆ. ಅಷ್ಟಕ್ಕೇ ನಿಲ್ಲದೆ ಪರಶಿವನಲ್ಲಿ ಸೇರಿಹೋಗುತ್ತವೆ. ಈ ಬಗೆಯಾದ ಧ್ಯಾನದಿಂದ ಈ ವಿಶ್ವವೆಲ್ಲಾ ಸೃಷ್ಟಿ ಸ್ಥಿತಿ ಸಂಹಾರ ಕ್ರಮಗಳಿಂದ ಪ್ರಕಾಶಿಸು ತ್ತಿದ್ದರೂ ಸಂವಿತ್ ಶಕ್ತಿಗಿಂತ ಬೇರೆಯಲ್ಲ ಎಂಬ ದೃಢವಾದ ಅಧ್ಯವ ಸಾಯವೇರ್ಪಡುತ್ತದೆ.

ಪ್ರಾಣಶಕ್ತಿಯು ಎರಡು ಮುಖಗಳುಳ್ಳದ್ದಾಗಿದೆ. ಚಿಚ್ಛಕ್ತಿಯೇ ಅವರೋಹಣಕ್ರಮದಿಂದ ಬಾಹ್ಯರೂಪದಲ್ಲಿ ಮೊದಲು ಪ್ರಾಣಶಕ್ತಿ ಎನ್ನಿಸಿಕೊಳ್ಳುತ್ತದೆ. ಶಾಸ್ತ್ರಜ್ಞರು ಈ ವಿಷಯವನ್ನು 'ಪ್ರಾಕ್ ಸಂವಿತ್ ಪ್ರಾಣೆ ಪರಿಣತಾ' ಎಂದು ಸೂಚಿಸಿರುತ್ತಾರೆ. ಅದ ಕ್ಕಿಂತಲೂ ಬಾಹ್ಯರೂಪವು ಅಪಾನ. ಈ ಅಪಾನಶಕ್ತಿಯು ಪ್ರಮಾತೃ ಗಳಿಗೆ ರಕ್ಷಕವಾಗಿಯೂ ಧಾರಕವಾಗಿಯೂ ಇದೆ. ಇದರ ಪ್ರಭಾವ ದಿಂದ ಪ್ರಮಾತೃಗಳಿಗೆ ಪ್ರಮೇಯ ಗ್ರಹಣ ಸಾಮರ್ಥ್ಯವುಂಟಾಗು ತ್ತದೆ. ಅನಂತರ ಸಮಾನಶಕ್ತಿಯಾಗಿ ಬಗೆಬಗೆಯಾದ ಅರ್ಥಗಳನ್ನು ಒಂದಾಗಿ ಸೇರಿಸುವ ಯೋಗ್ಯತೆಯನ್ನುಂಟುಮಾಡುತ್ತದೆ. ಮುಂದಿನ ಬದಲಾವಣೆಯೇ ಉದಾನಶಕ್ತಿ. ಈ ಸ್ಥಿತಿಯಲ್ಲಿ ಪ್ರಮಾತೃ ಪ್ರಮೇಯ ಮೊದಲಾದವುಗಳ ಸಂಕಲನ ಶಕ್ತಿಯು ಒಳಗೊಂಡಿರು ತ್ತದೆ. ಕೊನೆಯದಾಗಿ ವ್ಯಾನಶಕ್ತಿ. ಇದರ ಆವಿರ್ಭಾವವಾದರೆ ಎಲ್ಲಾ ಭೇದಜ್ಞಾನಗಳೂ ನಶಿಸಿ ಅಖಂಡಜ್ಞಾನಾನುಭವವುಂಟಾಗು ತ್ತದೆ. ಹೀಗೆ ಪ್ರಾಣವಾಯುಗಳು ಕ್ರಮವಾಗಿ ಬೆಳೆಯುತ್ತಾ ನಿರಾ

ನಂದ, ಪರಾನಂದ, ಬ್ರಹ್ಮಾನಂದ, ಮಹಾನಂದ, ಚಿದಾನಂದ ಎಂಬ ಆರು ವಿಶ್ರಾಂತಿರೂಪಗಳಾದ ಆನಂದಭೂಮಿಗಳೆಂದು ಉಪದೇಶಿಸಲ್ಪಟ್ಟದೆ.

ಪ್ರಾಣಶಕ್ತಿಯ ಎರಡನೇ ಮುಖವು ವರ್ಣರೂಪವಾಗಿದೆ. ವರ್ಣವೆಂದರೆ 'ಅವ್ಯಕ್ತ ಅನುಕೃತಿ ಪ್ರಾಯವಾದ ಧ್ವನಿ' ಕಕಾರದಿಂದ ಮಕಾರದವರೆಗಿರುವ ಅಕ್ಷರಗಳು ಸಾಚ್ಕವಾಗಿಯೂ ಅನಚ್ಕವಾಗಿಯೂ ಇರುತ್ತವೆ. ಇವುಗಳನ್ನು ಉಚ್ಚರಿಸಿದರೂ ನೆನೆದರೂ ಸಮಯಾಪೇಕ್ಷೆಯಿಂದ ಉಪಯೋಗಿಸಿದರೂ ಸಮಯ ನಿಯಮವಿಲ್ಲದೆ ಉಪಯೋಗಿಸಿದರೂ ಸಂವಿತ್ ಸ್ಪಂದ ಸ್ಪರ್ಶವಿದ್ದೇ ಇರುತ್ತದೆ. ಈ ರೀತಿಯಾಗಿ ಅನುಸಂಧಾನಮಾಡುವುದೇ ವರ್ಣ ರಹಸ್ಯ.

ಸಾಧಕನು ಯಾವ ಉಪಾಯದಿಂದ ಅಂದರೆ ಪ್ರಾಣವಾಯುಗಳ ಅಥವಾ ವರ್ಣಗಳ ಅನುಸಂಧಾನದಿಂದ ಸಿದ್ಧಿಯನ್ನು ಪಡೆದರೂ ಅವನ ಭಾವನಾ ಪ್ರಪಂಚವು ಒಂದೇರೀತಿಯಾಗಿರುತ್ತದೆ. ಈ ಜನ್ಮದಲ್ಲಿ ಬದುಕಿರುವಾಗಲೇ ಸಿದ್ಧಿಯನ್ನು ಪಡೆಯಬೇಕು. ಈ ಸಿದ್ಧನು ಪ್ರಪಂಚ ವ್ಯವಹಾರವನ್ನು ಬಿಡಬೇಕಾಗಿಲ್ಲ. ಅವನು ಕರ್ಮಶೇಷದಿಂದ ಬಂದಿರುವ ಈ ಶರೀರವಿರುವವರೆಗೂ ಸಾಮಾನ್ಯನಾದವನಂತೆಯೇ ಇರಬೇಕು. ಇವನು ಶರೀರದಿಂದಿರುವಿಕೆಯೇ ಒಂದು ವ್ರತ. ಇವನು ಲೋಕಾನುಗ್ರಹಕ್ಕೋಸ್ಕರವಾಗಿ ಜ್ಞಾನದಾನವನ್ನು ಮಾಡುತ್ತಾನೆ. ಶರೀರವು ಕಳಚಿಹೋದನಂತರ ಶಿವನೇ ಆಗುತ್ತಾನೆ. ಶರೀರವಿರುವವರೆಗೆ ಶಿವನಿಗೆ ಸಮಾನನಾಗಿರುತ್ತಾನೆ. ಇವನು ಬದುಕಿರುವವರೆಗೂ ಇವನಿಗೆ ಒದಗಬಹುದಾದ ಸುಖ ದುಃಖಗಳನ್ನು 'ಇದಂ' ಭಾವನೆಯಿಂದ ನೋಡುತ್ತಾನೆ. 'ಅಹಂ'ಭಾವನೆಯಿಂದ ನೋಡುವುದಿಲ್ಲ.

## ಷಡಧ್ವಗಳು

ಸಾಧಕನು ಈ ವಿಶ್ವವನ್ನು ಅನುಭವಾರೂಢವಾಗಿ ವಿಮರ್ಶಿಸುವ ಕ್ರಮಕ್ಕೆ ಷಡಧ್ವ ಭಾವನೆಗಳನ್ನು ಉಪಯೋಗಿಸುತ್ತಾನೆ. ಅಧ್ವ

ಎಂದರೆ ಮಾರ್ಗ ಅಥವಾ ದಾರಿ. ವಿಮರ್ಶೆಮಾಡಿ ಅನುಸಂಧಾನ ಮಾಡುವವನು ಈ ಆರು ಮಾರ್ಗಗಳನ್ನು ಅಸಂಕೀರ್ಣವಾಗಿ (ಬೇರೆ ಬೇರೆಯಾಗಿ) ಪರಿಶೀಲಿಸಬೇಕು. ಹಾಗೆಯೇ ಈ ಆರು ದಾರಿಗಳು ಎಲ್ಲಿಂದ ಹೊರಟಿರುತ್ತವೆ, ಎಲ್ಲಿಗೆ ಸೇರುತ್ತವೆ, ಯಾವ ರೀತಿ ಒಂದ ನ್ನೊಂದು ಸೇರಿವೆ ಎಂಬ ವಿಷಯವನ್ನು ತಿಳಿಯಬೇಕು. ಈ ಷಡಧ್ವ ಗಳನ್ನು ಮಂತ್ರಾಧ್ವ, ವರ್ಣಾಧ್ವ, ಪದಾಧ್ವ, ಕಲಾಧ್ವ, ತತ್ತ್ವಾಧ್ವ, ಭುವನಾಧ್ವ ಎಂದು ಕರೆಯುತ್ತಾರೆ.

ಈ ಷಡಧ್ವಗಳು ಎರಡು ವಿಭಾಗವುಳ್ಳವುಗಳಾಗಿವೆ. ವಾಚಕ ವಿಭಾಗದಿಂದ ಮಂತ್ರ ವರ್ಣ ಪದ ಎಂಬ ಮೂರು ಬಗೆಯಾಗಿಯೂ ವಾಚ್ಯರೂಪವಾಗಿ ಕಲಾ ತತ್ತ್ವ ಭುವನಾ ಎಂಬ ಮೂರು ಬಗೆ ಯಾಗಿಯೂ ಇವೆ. ಶಿವನ ಕ್ರಿಯಾಶಕ್ತಿಯು ಈ ವಿಶ್ವರೂಪವನ್ನು ನಿರೂಪಿಸುವಾಗ ಮೊದಲು ಪ್ರಾಣಶಕ್ತಿಯಾಯಿತು. ಅನಂತರ ಕಾಲ ಕಲಾ ಭುವನಾ ಮೊದಲಾದ ರೂಪಗಳನ್ನು ಪಡೆಯಿತು. ಈ ಷಡಧ್ವಗಳ ವಿಸ್ತಾರವಾದ ವರ್ಣನೆಯನ್ನೂ ಅವುಗಳನ್ನನುಸಂಧಾನ ಮಾಡುವ ಕ್ರಮಗಳನ್ನು ಅಭಿನವಗುಪ್ತಾಚಾರ್ಯರು ತಂತ್ರಸಾರ ದಲ್ಲಿ ಸರ್ವಾಂಗಸುಂದರವಾಗಿ ವಿವರಿಸಿರುತ್ತಾರೆ. ಈ ಎಲ್ಲಾ ಅಧ್ವ ಸ್ವರೂಪ ವಿಮರ್ಶನೆಯು ಸಾಧಕನು ತನ್ನಲ್ಲಿ ಆರೋಪಿಸಿಕೊಳ್ಳು ವುದಕ್ಕೆ ಸಹಕಾರಿಯಾಗುತ್ತದೆ. ಈ ವಿಶ್ವವೆಲ್ಲಾ ತನ್ನ ಶರೀರದಲ್ಲಿದೆ ಯೆಂದು ಭಾವಿಸಿ ಶರೀರವನ್ನು ಪ್ರಾಣಶಕ್ತಿಯಲ್ಲಿಯೂ ಪ್ರಾಣಶಕ್ತಿ ಯನ್ನು ಧೀ ಶಕ್ತಿಯಲ್ಲಿಯೂ ಆ ಬುದ್ಧಿಯನ್ನು ಶೂನ್ಯದಲ್ಲಿಯೂ ಆ ಶೂನ್ಯ ತತ್ತ್ವವನ್ನು ಚಿತ್ತಿನಲ್ಲಿಯೂ 'ವಿಲಾಪನ' ಮಾಡುವಂತೆ ಅನು ಸಂಧಾನ ಮಾಡಬೇಕು. ಈ ಆರೋಹಣ ಕ್ರಮವು ಅನುಭವಕ್ಕೆ ಬಂದರೆ ಆಗ ನಿರ್ಭರ ಪರಿಪೂರ್ಣ ಸಂವಿದ್ರೂಪಿಯಾದ ಷಟ್ತ್ರಿಂಶ ತತ್ತ್ವ ಸ್ವರೂಪಜ್ಞನಾಗುತ್ತಾನೆ. ಈ ತತ್ತ್ವಗಳಿಂದ ಆಚೆ ಇರುವ ಚಿದಾನಂದ

ಇಲ್ಲಿ ಕಲಾ ಅಂದರೆ ತತ್ತ್ವಗಳಲ್ಲಿ ಸೇರಿಕೊಂಡಿರುವ ಶಕ್ತಿ. ತತ್ತ್ವ ಅಂದರೆ ೩೬ ತತ್ತ್ವಗಳು. ಭುವನಗಳು ಅಂದರೆ ಭೂಲೋಕ ಮೊದಲ್ಗೊಂಡು ಅಸಂಖ್ಯಾತವಾದ ಲೋಕಗಳು.

ಘನನಾಡ ಪರಮಶಿವ ರೂಪವನ್ನು ಅನುಸಂಧಾನ ಮಾಡುತ್ತಾ ಆ ಪರಮಶಿವನೇ ವಿಶ್ವಮಯನಾಗಿರುವನೆಂದು ತಿಳಿಯುತ್ತಾನೆ.[1]

### ಶಕ್ತಿಪಾತ

ಶಿವಾದ್ವೈತ ಸಂಪ್ರದಾಯದಲ್ಲಿ ಶಿವನಿಗಿಂತ ಬೇರೆಯಾದ ಪದಾರ್ಥವಿಲ್ಲ. ಎಲ್ಲಾ ಜೀವಿಗಳ ಸುಖ ದುಃಖಗಳೂ ಆ ಪರಮ ಶಿವನ ಸ್ವಾತಂತ್ರ್ಯ ಶಕ್ತಿಯಿಂದಲೇ ನಡೆಯುತ್ತಲಿವೆ. ಇಹಲೋಕ ಮತ್ತು ಪರಲೋಕದಲ್ಲುಂಟಾಗುವ ಸುಖ ದುಃಖಗಳು ಬಗೆಬಗೆ ಯಾಗಿವೆ. ಇವುಗಳು ತರತಮಭಾವಗಳಿಂದ ಕೂಡಿರುವ ಮಲ ಮತ್ತು ಕರ್ಮಗಳ ಫಲಸ್ವರೂಪಗಳಾಗಿವೆ. ಈಶ್ವರನು ಎಲ್ಲಾ ಕರ್ಮ ಗಳಿಗೂ ಫಲವನ್ನು ಕೊಡುವವನಾಗಿದ್ದಾನೆ. ಇಹಲೋಕ ಮತ್ತು ಪರಲೋಕಗಳಲ್ಲಿ ಜೀವರುಗಳು ಸುಖಗಳನ್ನೂ ದುಃಖಗಳನ್ನೂ ಅನು ಭವಿಸಬೇಕಾದರೆ ಸುಖ ದುಃಖಗಳನ್ನನುಭವಿಸುವುದಕ್ಕೆ ಉಪಕರಣ ಗಳಾಗಿರುವ ಶರೀರ, ಪ್ರಾಣ, ಪುರ್ಯಷ್ಟಕಾದಿಗಳು ಬೇಕು. ಶಿವನು ಸರ್ವಶಕ್ತನಾಗಿ ಸರ್ವ ಫಲಪ್ರದನಾಗಿದ್ದರೂ ಸುಖ ದುಃಖಾನುಭವ ಗಳನ್ನು ಜೀವನಿಗುಂಟುಮಾಡಬೇಕಾದರೆ ಮಲ ಮತ್ತು ಕರ್ಮಗಳ ಪರಿಮಿತಿಗನುಸಾರವಾಗಿ ಉಂಟುಮಾಡುತ್ತಾನೆ. ಹಾಗೆಯೇ ಬ್ರಹ್ಮ ರುದ್ರಾದಿ ಅವಸ್ಥಾಂತರ ಪ್ರಾಪ್ತಿಗಳನ್ನೂ ಉಂಟುಮಾಡುತ್ತಾನೆ.

ಶಿವನ ಪಂಚಕೃತ್ಯಗಳಲ್ಲಿ ಜೀವರುಗಳಿಗನ್ವಯಿಸುವ ಸೃಷ್ಟಿ ಸ್ಥಿತಿ ಪ್ರಳಯ ಈ ಮೂರು ಕೃತ್ಯಗಳು ಕರ್ಮಸಾಪೇಕ್ಷವಾಗಿ ನಡೆಯುತ್ತವೆ. ಶಿವನು ಸ್ವತಂತ್ರವಾಗಿ ಯಾವ ಅಪೇಕ್ಷೆಯೂ ಇಲ್ಲದೆ ಪಂಚಕೃತ್ಯಗಳಲ್ಲಿ

---

1 ತಂ ಸಮಸ್ತಂ ಅಧ್ವಾನಂ ದೇಹೆ ವಿಲಾಪ್ಯ, ದೇಹಂಚಪ್ರಾಣೆ, ತಂಧಿಯಿ, ತಾಂಶೂನ್ಯೆ, ತತ್‌ಸಂವೇದನೆ, ನಿರ್ಭರಪರಿಪೂರ್ಣ . ಸಂವಿತ್ ಸಂಪದ್ಯತೆ ಷಟ್ತ್ರಿಂಶ ತತ್ವ ಸ್ವರೂಪಜ್ಞಃ, ತದುತ್ತೀ ರ್ಣಾಂ ಸಂವಿದಂ ಪರಮಶಿವರೂಪಾಂಪಶ್ಯ್‌ ವಿಶ್ವಮಯಿಮ ಮಪಿ ಸಂವೇದಯೇತ.

ಅಧ್ವಾಸಮಸ್ತ ಏವಾಯಂ ಚಿನ್ಮಾತ್ರೆ ಸಂವ್ಯವಸ್ಥಿತಃ।
ಯತ್ರತ್ರನಹಿ ವಿಶ್ರಾಂತಂ ತನ್ನಭಕುಸಮಾಯತೆ॥
ತಂತ್ರಸಾರ—ಆಹ್ನಿಕ ೯.

ಒಂದಾದ ಅನುಗ್ರಹವನ್ನು ಅಂದರೆ ಶಕ್ತಿಪಾತವನ್ನು ಅರ್ಹರಾಗಿಯೂ ಸಿದ್ಧತೆಯನ್ನು ಪಡೆದಿರುವವರೂ ಆದ ಭಕ್ತರಲ್ಲಿ ವಿನಿಯೋಗಿಸುತ್ತಾನೆ. ಪ್ರತಿಯೊಬ್ಬ ಜೀವಿಯೂ ಮೋಕ್ಷಕ್ಕೆ ಅರ್ಹನಾಗಿದ್ದಾನೆ ಅಥವಾ ಅಧಿಕಾರಿಯಾಗಿದ್ದಾನೆ (Eligible). ಇದಕ್ಕೆ ಸಾಧನವಾಗಿರುವ ಶಕ್ತಿಪಾತಕ್ಕೂ ಅರ್ಹನಾಗಿದ್ದಾನೆ. ಅರ್ಹತೆ ಒಂದೇ ಪ್ರಧಾನ ಕಾರಣವಾಗುವುದಿಲ್ಲ. ಒಳ್ಳೆಯದಕ್ಕಾಗಲಿ ಕೆಟ್ಟದ್ದಕ್ಕಾಗಲಿ ಸಿದ್ಧತೆಯೂ ಬೇಕು. ಈ ಸಿದ್ಧತೆಯು ಕರ್ಮಾಚರಣೆಯಿಂದುಂಟಾಗುತ್ತದೆ. ಕರ್ಮಗಳು ಎರಡು ವಿಧ. ಜ್ಞಾನವಿಕಾಸವನ್ನುಂಟುಮಾಡಿ ಶಕ್ತಿಪಾತಕೆ ಕಾರಣವಾಗಿ ತನ್ಮೂಲಕ ಮೋಕ್ಷವನ್ನುಂಟುಮಾಡುವುದೊಂದು ವಿಧ, ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖ ಸಂತೋಷಗಳನ್ನುಂಟುಮಾಡುವ ಉನ್ನತ ಸ್ಥಿತಿಗೆ ಕಾರಣವಾಗಿರುವುದಿನ್ನೊಂದು ವಿಧ. ಯಾಗ ಯೋಗ ಜಪ ಧ್ಯಾನ ವ್ರತ ದೀಕ್ಷೆ ಮೊದಲಾದವುಗಳು ಜ್ಞಾನವಿಕಾಸಕ್ಕೆ ಕಾರಣವಾಗಿರುವ ಕರ್ಮಗಳು. ದಾನ ಹೋಮ ಯಜ್ಞ ಮೊದಲಾದವುಗಳು ಇಹಲೋಕ ಮತ್ತು ಪರಲೋಕಗಳಲ್ಲಿ ಅಭ್ಯುದಯಕ್ಕೆ ಕಾರಣವಾಗಿರುವ ಕಾಮ್ಯ ಕರ್ಮಗಳು. ಈ ಎರಡು ಬಗೆಯ ಕರ್ಮರಾಶಿಗೂ ಫಲವನ್ನು ಕೊಡುವವನು ಶಿವನೇ. ಜ್ಞಾನವಿಕಾಸವನ್ನುಂಟುಮಾಡುವ ಕರ್ಮಗಳಿಗೆ ಸ್ವತಂತ್ರವಾಗಿ ಮಲ ಮತ್ತು ಕರ್ಮಗಳ ಅಪೇಕ್ಷೆಯಿಲ್ಲದೆ ಫಲವನ್ನು ಕೊಡುತ್ತಾನೆ. ಇದೇ ಭಗವದನುಗ್ರಹ ಅಥವಾ ಶಕ್ತಿಪಾತ. ಮಿಕ್ಕ ಕರ್ಮಗಳಿಗೆ ಜೀವರುಗಳಿಗಿರುವ ಮಲ ಮತ್ತು ಕರ್ಮಸಾಪೇಕ್ಷವಾಗಿ ಫಲವನ್ನು ಕೊಡುತ್ತಾನೆ. ಜೀವರುಗಳು ತಮ್ಮ ತಿಳಿವಳಿಕೆಯಿಂದ ಯಾವ ಬಗೆಯ ಕರ್ಮಗಳನ್ನಾಚರಿಸುತ್ತಾರೆಯೋ ಅಂತಹ ಫಲಗಳನ್ನು ಪಡೆಯುತ್ತಾರೆ.

ದೀಕ್ಷಾಸಿಚ್ಛಿನ್ನಪಾಶತ್ವಾತ್ ಭಾವನಾ ಭಾವಿತಸ್ಯಹಿ ।
ವಿಕಾಸಂ ತತ್ವಮಾಯಾತಿ ಪ್ರಾತಿಭಂತದುದಾಹೃತಂ ॥

ತಂತ್ರಾಲೋಕ—ಆಹ್ನಿಕ ೧೩, ಶ್ಲೋಕ ೧೭೪.

ದೀಕ್ಷೆಯೆಂಬ ಕತ್ತಿಯಿಂದ ಪಾಶಗಳು ಕತ್ತರಿಸಲ್ಪಡಲಾಗಿ ಭಾವನೆಯಿಂದ (ಅನುಸಂಧಾನದಿಂದ) ಪರಿಷ್ಕೃತನಾದವನ ಚಿತ್ತತ್ವವು

ವಿಕಸಿತವಾಗುತ್ತದೆ ಇದಕ್ಕೆ 'ಪ್ರಾತಿಭ' ಎಂದು ಹೆಸರು. ಇಂತಹ ಪ್ರಾತಿಭವನ್ನು ಹೊಂದಿದವನಿಗೆ ಶಕ್ತಿಪಾತವಾಗುತ್ತದೆ.

ಬೀಜಂ ಕಾಲೋಕ್ತ ಸಂಸಿಕ್ತಂ ಯಥಾವರ್ಧೇತ ತತ್ಥತಾ।
ಯೋಗ ಯಾಗ ಜಪ್ಯೈರುಕ್ತ್ಯೈಃ ಗುರುಣಾ ಪ್ರಾತಿಭಂ ಸ್ಫುಟೀತ್॥
ತಂತ್ರಾಲೋಕ—ಆಹ್ನಿಕ ೧೩, ಶ್ಲೋಕ ೧೭೬.

ಸಕಾಲದಲ್ಲಿ ಬಿತ್ತಿದ ಬೀಜಕ್ಕೆ ನೀರು ಹಾಕುತ್ತಿದ್ದರೆ ಮೊಳಕೆ ಬಂದು ವೃದ್ಧಿಯಾಗುವಹಾಗೆ ಗುರುಗಳಿಂದ ಹೇಳಲ್ಪಟ್ಟ ಯೋಗ ಯಾಗ ಜಪಗಳಿಂದ ಪ್ರಾತಿಭವು ಸ್ಫುಟಸುತ್ತದೆ.

ಮಿತಪ್ರಮಾತೃವಿಗೆ ಜ್ಞಾನವಿಕಾಸವಾಗಬೇಕಾದರೆ ಗುರುವು ಸಹಕಾರಿ ಕಾರಣ. ಎಲ್ಲಾ ವಿಷಯಗಳನ್ನೂ ತಿಳಿದು ಸಿದ್ಧಪುರುಷನಾಗಿರುವ ಗುರುವು ಈ ಲೋಕದಲ್ಲಿ ಸಿಕ್ಕುವುದು ಕಷ್ಟ. ಜ್ಞಾನ ಪಿಪಾಸೆಯಿರುವ ಸಾಧಕನು ಒಬ್ಬೊಬ್ಬ ಗುರುವಿನಲ್ಲಿ ಒಂದೊಂದು ವಿಷಯವನ್ನಾದರೂ ಗ್ರಹಿಸಿ ತನ್ನ ಜ್ಞಾನವನ್ನು ಅಭಿವೃದ್ಧಿಪಡಿಸಿಕೊಳ್ಳಬೇಕು. ಪುಷ್ಪ ರಸವನ್ನು ಕೋರುವ ದುಂಬಿಯು ಬಗೆಬಗೆಯ ಪುಷ್ಪಗಳಲ್ಲಿ ರಸವನ್ನು ಹೀರುವ ಹಾಗೂ ಅನೇಕ ನದಿಗಳು ಸಮುದ್ರವನ್ನು ಸೇರುವ ಹಾಗೂ ಸಾಧಕನು ಅನೇಕ ಮುಖಗಳಿಂದ ಜ್ಞಾನವನ್ನು ಗ್ರಹಿಸಬೇಕು. ಸ್ವಪ್ರಯತ್ನದಿಂದ ಶಾಸ್ತ್ರಜ್ಞಾನವನ್ನು ಗ್ರಹಿಸಿ ಸಾಧನಾಭ್ಯಾಸಗಳನ್ನು ಮಾಡಿದರೆ ಪ್ರಾತಿಭವು ಸ್ಫುಟಿಸಿ ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಇಂತಹ ಸತ್ಪಾತ್ರಕ್ಕೆ ಶಕ್ತಿಪಾತ ವುಂಟಾಗುತ್ತದೆ.

---

ಆಮೋದಾರ್ಥೀ ಯಥಾ ಭೃಂಗಃ ಪುಷ್ಪಾತ್ ಪುಷ್ಪಾಂತರಂ ವ್ರಜೇತ್।
ವಿಜ್ಞಾನಾರ್ಥೀ ತಥಾ ಶಿಷ್ಯೋ ಗುರೋರ್ಗುರುವಂತರಂ ವ್ರಜೇತ್॥
ತಂತ್ರಾಲೋಕ—ಆಹ್ನಿಕ ೧೩, ಪುಟ ೩೩೫.

ನಾನಾಗುರುವಾಗಮಸ್ರೋತಃ ಪ್ರತಿಭಾಮಾತ್ರ ಮಿಶ್ರಿತಂ।
ಕೃತ್ವಾ ಜ್ಞಾನಾರ್ಣವಂ ಸ್ವಾಭಿಃ ವಿತ್ರುಡ್ಭಿಃ ಪ್ಲಾವಯೇನ್ನಕಿಂ॥
ತಂತ್ರಾಲೋಕ—ಆಹ್ನಿಕ ೧೩, ಪುಟ ೩೪೩.

ಎಲ್ಲರೂ ಶಿವಸ್ವರೂಪಿಗಳಾಗಿದ್ದರೂ ಎಲ್ಲರಿಗೂ ಶಕ್ತಿಪಾತವಾಗುವುದಿಲ್ಲ. ಜ್ಞಾನವಿಕಾಸಕ್ಕೆ ಕಾರಣವಾಗಿರುವ ಕರ್ಮಾಚರಣೆಯಿಂದ ಪ್ರಾತಿಭಜ್ಞಾನ (ಸ್ವರೂಪಜ್ಞಾನ)ವು ವಿಕಸಿಸುತ್ತದೆ. ಪ್ರಾತಿಭಜ್ಞಾನದಿಂಧ ಮಿತಪ್ರಮಾತೃವು (ಬದ್ಧಜೀವನು) ತಾನು ಮಲಗಳಿಂದ ಕೂಡಿರುವವನೆಂದು ತಿಳಿಯುತ್ತಾನೆ ಮತ್ತು ಈ ಬಂಧನವು ತನ್ನ ಸ್ವರೂಪಕ್ಕೆ ಸೇರಿದ್ದಲ್ಲವೆಂದು ಅನುಭವಕ್ಕೆ ತಂದುಕೊಳ್ಳುತ್ತಾನೆ. ಇಂತಹವನಿಗೆ ಶಕ್ತಿಪಾತವಾಗುತ್ತದೆ.

ಈ ಲೋಕದಲ್ಲಿ ಯಾರಿಗೆ ಶಕ್ತಿಪಾತವಾಗಿದೆ ಯಾರಿಗೆ ಶಕ್ತಿಪಾತವಾಗಿಲ್ಲವೆಂಬುದನ್ನು ನಾವು ಊಹಿಸಬಹುದು. ನೈಮಿತ್ತಿಕಜ್ಞಾನದಿಂದ ಬರತಕ್ಕ ತಿಳಿವಳಿಕೆಗಳಿಂದುಂಟಾಗುವ ಮಾರ್ಪಾಡುಗಳಿಗಿಂತ ಅತಿಶಯವಾದ ಪ್ರವೃತ್ತಿ ವಿಶೇಷಗಳು ಯಾರಲ್ಲಿ ಕಂಡುಬರುತ್ತವೆಯೋ ಅಲ್ಲಿ ಶಕ್ತಿಪಾತವಾಗಿದೆಯೆಂದು ತಿಳಿಯಬಹುದು.

ರುದ್ರಶಕ್ತಿಸಮಾವೇಶಸ್ತತ್ರ ನಿತ್ಯಂ ಪ್ರತಿಷ್ಠಿತಂ ।
ಸತಿತಸ್ಮಿಂಶ್ಚ ಚಿನ್ಹಾನಿ ತಸ್ಯೈತಾನಿವಿಲಕ್ಷಯೇತ್ ॥
ತತ್ರೈತತ್ಪ್ರಥಮಂಚಿನ್ಹಂ ರುದ್ರೇ ಭಕ್ತಿಸುನಿಶ್ಚಲಾ ।
ದ್ವಿತೀಯಂ ಮಂತ್ರಸಿದ್ಧಿಃ ಸ್ಯಾತ್ ಸದ್ಯಃ ಪ್ರತ್ಯಯಕಾರಿಕಾ ॥
ಸರ್ವತತ್ತ್ವವಶಿತ್ವಂ ಚ ತೃತೀಯಂ ಲಕ್ಷಣಂ ಸ್ಮೃತಂ ।
ಪ್ರಾರಬ್ಧಕಾರ್ಯನಿಷ್ಪತ್ತಿ ಶ್ಚಿನ್ಹಮಾಹುಶ್ಚತುರ್ಥಕಮ್ ॥
ಕವಿತ್ವಂ ಪಂಚಮಂಜ್ಞೇಯಂ ಸಾಲಂಕಾರಂ ಮನೋಹರಮ್ ।
ಸರ್ವಶಾಸ್ತ್ರಾರ್ಥವೇತೃತ್ವ ಮಕಸ್ಮಾಚ್ಚಾಸ್ಯಜಾಯತೇ ॥

ತಂತ್ರಾಲೋಕ—VIII ಪುಟ ೧೩೬.

ರುದ್ರನಲ್ಲಿ ಅಚಲವಾದ ಭಕ್ತಿ, ಮಂತ್ರಸಿದ್ಧಿ, ತತ್ತ್ವಗಳ ವಿಶದವಾದ ಅನುಭವ, ಪ್ರಾರಂಭಿಸಿದ ಕಾರ್ಯಸಿದ್ಧಿ, ಸೋಪಜ್ಞತ್ವ, ಸರ್ವಶಾಸ್ತ್ರಜ್ಞಾನ ಇವುಗಳೆಲ್ಲಾ ಶಕ್ತಿಪಾತದ ಮಹಿಮೆಯಿಂಧ ತಾವಾಗಿಯೇ ಉಂಟಾಗುತ್ತವೆ. ಇವುಗಳು ಯಾರಲ್ಲಿ ಕಂಡುಬರುತ್ತವೆಯೋ ಅವರಿಗೆ ಶಕ್ತಿಪಾತವಾಗಿದೆಯೆಂದು ಊಹಿಸಬಹುದು.

ಶಕ್ತಿಪಾತವು ತೀವ್ರ ಮಧ್ಯ ಮಂದ ಎಂಬ ಮೂರು ಭೇದಗಳುಳ್ಳದ್ದಾಗಿದೆ. ಒಂದೊಂದು ಭೇದವೂ ಮೂರು ಮೂರು ಭೇದಗಳನ್ನೊಳ

ಗೊಂಡಿದೆ. ಉತ್ಕೃಷ್ಟವಾದ ತೀವ್ರ ಶಕ್ತಿಪಾತವಾದರೆ ಮಾನವನು ಶರೀರ ಬಿದ್ದೊಡನೆಯೇ ಪರಶಿವನಾಗುತ್ತಾನೆ. ಮಧ್ಯತೀವ್ರನಿಗೆ ಶಕ್ತಿಪಾತವಾದರೆ ಪ್ರಾತಿಭ ಜ್ಞಾನವುಂಟಾಗುತ್ತದೆ. ಅಂತಹವನಿಗೆ ಶಾಸ್ತ್ರ ಗುರು ಬಾಹ್ಯ ಸಂಸ್ಕಾರಗಳು ಬೇಕಿಲ್ಲ. ಮಂದತೀವ್ರನಿಗೆ ಶಕ್ತಿಪಾತವಾದರೆ ಗುರುವಿನಲ್ಲಿ ಹೋಗಿ ವಿಷಯಗಳನ್ನು ತಿಳಿಯ ಬೇಕೆನ್ನುವ ಇಚ್ಛೆಯುಂಟಾಗುತ್ತದೆ. ಇವನಿಗೆ ಶಾಸ್ತ್ರ ಗುರು ಅಭ್ಯಾಸ ಎಲ್ಲಾ ಬೇಕು. ಇದರಿಂದ ಈತರಹ ಶಕ್ತಿಪಾತವಾಗಿದೆಯೆಂದು ಊಹಿಸಬಹುದು.

ಶಕ್ತಿಪಾತವು ಇಪ್ಪತ್ತೇಳು ಬಗೆಯೆಂದು ಸ್ಥೂಲವಾಗಿ ನಿರೂಪಿಸಿರುತ್ತಾರೆ. ವ್ಯಕ್ತಿಗಳ ಮಟ್ಟವನ್ನನುಸರಿಸಿ ಇದು ಎಷ್ಟೋ ಬಗೆಯಾಗುತ್ತದೆ. ತಾರತಮ್ಯಗಳ ದೆಸೆಯಿಂದ ಅನೇಕ ಭೇದಗಳನ್ನು ಪಡೆಯುವ ಈ ಶಕ್ತಿಪಾತದ ಎಲ್ಲಾ ಅಂಶಗಳನ್ನೂ ಗುರುತಿಸುವುದು ಕಷ್ಟ. ಒಟ್ಟಾಗಿ ಇಷ್ಟರಮಟ್ಟಿಗೆ ಊಹಿಸಬಹುದು. ಯಾವನು ಅಂತರ್ಯಾತೆಯನ್ನು ಪ್ರಧಾನವಾಗಿ ಭಾವಿಸುವನೋ ಅಂತಹವನಿಗೆ ಶಕ್ತಿಪಾತವಾಗಿದೆಯೆಂದು ಸಾಮಾನ್ಯವಾಗಿ ತಿಳಿಯಬಹುದು. ಗುರುವಿನಿಂದ ಶಾಸ್ತ್ರವನ್ನು ತಿಳಿದು ತನ್ನ ಅನುಭವಕ್ಕೆ ಶಾಸ್ತ್ರ ತತ್ವವನ್ನು ಅಳವಡಿಸಿಕೊಳ್ಳುವಿಕೆಯೇ ಇವನ ಪ್ರಯತ್ನ. ಇದು ಅನೇಕ ಮಾರ್ಗಾಚರಣಾರೂಪವಾಗಿದೆಯೆಂದು ತಿಳಿಸಿದ್ದಾರೆ. ಕರ್ಮವನ್ನಾಚರಿಸುವುದು ಇವನ ಸ್ವಾತಂತ್ರ್ಯ. ಅದಕ್ಕೆ ಫಲವನ್ನು ಕೊಡುವುದು ಈಶ್ವರನ ಅಧಿಕಾರ. ಈಶ್ವರಾನುಗ್ರಹವಿಲ್ಲದೆ ಮೋಕ್ಷವುಂಟಾಗಲಾರದು.

ಉಪನಿಷತ್ತುಗಳಲ್ಲಿಯೂ ಕೂಡ ಪರಮಾತ್ಮನ ಅನುಗ್ರಹವೇ ಮೋಕ್ಷಕ್ಕೆ ಮುಖ್ಯ ಕಾರಣವೆಂದು ಹೇಳಲ್ಪಟ್ಟಿದೆ.

‘ ನಾಯಮಾತ್ಮಾ ಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ
ಯ ಮೈವೇಷ ವೃಣುತೆ ತೇನಲಭ್ಯೋ
ಯಸ್ಯೈ ವಿವೃಣುತೆ ತನೂಂ ಸ್ವಾಮ್.’

‘ ಮಂದ ತೀವ್ರಾತ್ ಶಕ್ತಿಪಾತಾತ್ [illegible] ಪ್ರಜಾಯತೆ’

## ಉಪಸಂಹಾರ

ಶಮಾರ್ಥಂ ಸರ್ವಶಾಸ್ತ್ರಾಣಿ ವಿಹಿತಾನಿ ಮನೀಷಿಭಿಃ ।
ಸ ಏವ ಸರ್ವಶಾಸ್ತ್ರಜ್ಞಃ ಯಸ್ಯ ಶಾಂತಂ ಮನಸ್ಸದಾ ॥

ಮಹಾಭಾರತ.

ಎಲ್ಲಾ ಶಾಸ್ತ್ರಗಳೂ ಎಲ್ಲಾ ದರ್ಶನಗಳೂ ಮಾನವನಿಗೆ ಈ ಲೋಕದಲ್ಲಿ ಶಾಂತಿಯನ್ನೂ ಪರಲೋಕದಲ್ಲಿ ಶ್ರೇಯಸ್ಸನ್ನೂ ಉಂಟು ಮಾಡುವುದಕ್ಕೋಸ್ಕರ ಉಪದೇಶಿಸಲ್ಪಟ್ಟವೆ. ಈ ಶಿವಾದ್ವೈತ ಸಿದ್ಧಾಂತದಲ್ಲಿ ಈ ಲೋಕ ಪರಲೋಕ ಮೊದಲಾದ ಎಲ್ಲಾ ಭೇದ ಗಳೂ ಶಿವನಿಂದ ಬೇರೆಯಲ್ಲ. ಇಲ್ಲಿ ಬದುಕಿರುವಾಗಲೇ ವಿಕಲ್ಪಗಳ ಉಬ್ಬರವಿಳಿತಗಳ ದೆಸೆಯಿಂದ ಅಶಾಂತನಾಗದೆ ಇರುವ ಸ್ಥಿತಿಯನ್ನು ಪಡೆಯಬೇಕು. ಈ ಸ್ಥಿತಿಯುಂಟಾಗಬೇಕಾದರೆ ವಿಕಲ್ಪಗಳಿಂದ ದೂರವಾಗಿರುವ ಪ್ರಶಾಂತವಾಗಿರುವ ಚಿತ್ಸ್ವರೂಪಾನುಭವವೇರ್ಪಡ ಬೇಕು. ಹೊರಗಿನ ತನ್ನ ಚಲನ ವಲನಗಳನ್ನೂ ಇವುಗಳಿಂದುಂಟಾ ಗುವ ತಿಳಿವಳಿಕೆಗಳನ್ನೂ ವಿಕಲ್ಪರೂಪಗಳನ್ನು ಪಡೆದಿರುವ ಈ ತಿಳಿ ವಳಿಕೆಗಳ ಪರಿಣಾಮಗಳನ್ನೂ ತನ್ನಲ್ಲಿ ತಾನೇ ಪರಿಶೀಲಿಸಿದರೆ ಪ್ರಶಾಂತ ಸ್ಥಿತಿಗೂ ಅಶಾಂತತೆಗೂ ಇರುವ ವ್ಯತ್ಯಾಸವು ಗೋಚರಿಸು ತ್ತದೆ. ಎಲ್ಲಾ ಶಾಸ್ತ್ರಕಾರರೂ "ನಿನ್ನ ಸ್ವರೂಪವನ್ನು ನೀನು ತಿಳಿ" ಎಂದು ಉಪದೇಶಿಸಿಯೇ ಇರುತ್ತಾರೆ. ಆದರೆ ಕೆಲವರು ಅಧ್ಯಾತ್ಮ ಶಾಸ್ತ್ರದ ಗಹನವಾದ ಪರಿಭಾಷೆಗಳಿಂದ ವಿಷಯ ವಿಮರ್ಶೆಗೆ ಹೆಚ್ಚು ಗಮನ ಕೊಟ್ಟಿರುತ್ತಾರೆ. ಒಬ್ಬನು ವಿಷಯ ವಿಮರ್ಶೆ ಮಾಡಬಹುದು. ಇತರರಿಗೆ ಉಪದೇಶಿಸಬಹುದು. ಗ್ರಂಥಗಳನ್ನೂ ಬರೆಯಬಹುದು. ಆದರೆ ತನ್ನ ಸ್ವರೂಪಾನುಭವವು ಏರ್ಪಡದಿದ್ದರೆ ಅಂತಹವನಿಗೆ ಶಾಂತಿ ಯುಂಟಾಗಲಾರದು. ಅಲ್ಪ ಸ್ವಲ್ಪ ಶಾಂತಿಯುಂಟಾದರೂ ಅದು ಬಾಹ್ಯ ಕಾರಣಗಳಿಂದಲೂ ಸಾಂಪ್ರದಾಯಿಕವಾದ ಅನುಕರಣ ದಿಂದಲೂ ಉಂಟಾಗುತ್ತದೆ. ಇಂತಹ ಶಾಂತಿಯೊಡನೆ ಆಂತರೀಯ ವಾದ ಅನುಭವವು ಸಾಮರಸ್ಯವನ್ನು ಪಡೆಯುವುದಿಲ್ಲ. ಆಂತರೀಯ ವಾದ ಸ್ವರೂಪಾನುಭವದಿಂದ ಶಾಂತಿಯುಂಟಾಗಿ ಅದರ ಸುಖದಿಯ

ಮೇಲೆ ಹೊರಗಿನ ವ್ಯಾಪಾರಗಳನ್ನು ನಡೆಸುತ್ತಿರುವವನು ಜೀವನ್ಮುಕ್ತ ನೆನಿಸುತ್ತಾನೆ. ಎಂತಹ ವ್ಯವಹಾರದಲ್ಲಿ ತೊಡಗಿದ್ದರೂ ಚಿದ್ರೂಪ ವಾದ ಸ್ವಸ್ವರೂಪಾನುಸಂಧಾನವು ಎಡಬಿಡದೆ ಇದ್ದಲ್ಲಿ ಅವನೇ 'ಯುಕ್ತ'ನೆಂದೆನಿಸುವನು.

ಇತಿ ವಾ ಯಸ್ಯ ಸಂವಿತ್ತಿಃ ಕ್ರೀಡಾತ್ವೇನಾಖಿಲಂ ಜಗತ್ ।
ಸಪಶ್ಯನ್ ಸತತಂ ಯುಕ್ತೋ ಜೀವನ್ಮುಕ್ತೋ ನ ಸಂಶಯಃ ॥
ಪ್ರತ್ಯಭಿಜ್ಞಾಹೃದಯ—ಪುಟ ೩೭.

ಈ ಸ್ಥಿತಿಯನ್ನು ಪರಾಶಾಂತಿಯೆಂದು ಭಗವದ್ಗೀತೆಯಲ್ಲಿಯೂ ಉದಹರಿಸಿರುತ್ತಾರೆ.

ಯದಾ ವಿನಿಯತಂ ಚಿತ್ತಂ ಆತ್ಮನ್ಯೇವಾವತಿಷ್ಠತೆ ।
ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೆ ತದಾ ॥
ಅಧ್ಯಾಯ ೬, ಶ್ಲೋಕ ೧೮.

ಯಾವಾಗ ಮನಸ್ಸು ನಿಗ್ರಹಿಸಲ್ಪಟ್ಟು ಆತ್ಮನಲ್ಲಿಯೇ ನಿಲ್ಲು ವಂತಾಗಿ ಕಾಮನೆಗಳಲ್ಲಿ ಆಸೆಯಿಲ್ಲದಿರುವವನಾಗುವನೋ ಆಗ 'ಯುಕ್ತ'ನೆನಿಸುವನು. 'ಯುಕ್ತ' ಎಂದರೆ ಯಾವಾಗಲೂ ಸ್ವಸ್ವ ರೂಪದಲ್ಲಿರುವವನು.

ಇದನ್ನು ಪಡೆಯುವುದಕ್ಕೆ ಹಿಂದಿನ ಸಂಸ್ಕಾರ, ಇಂದಿನ ಪರಿಸ್ಥಿತಿ, ಶಾಸ್ತ್ರಾಭ್ಯಾಸ, ಗುರೂಪದೇಶ, ಸ್ವಪ್ರಯತ್ನ, ಅಭ್ಯಾಸ, ಸ್ವಾತ್ಮ ವಿಮರ್ಶೆ ಇವುಗಳು ಮುಖ್ಯವಾದ ಕಾರಣಗಳು. ಕಾಶ್ಮೀರ ಶಿವಾ ದ್ವೈತ ಸಂಪ್ರದಾಯದಲ್ಲಿ ಗುರೂಪದೇಶವನ್ನೇ ಪ್ರಧಾನವಾಗಿಟ್ಟು ಕೊಂಡು ಜ್ಞಾನವಿಕಾಸವನ್ನು ಪಡೆಯುವುದಕ್ಕೆ ಅರ್ಹರಾದ ಉತ್ತ ಮಾಧಿಕಾರಿಗಳಿಗೆ ಅನುಪಾಯವು ಉಪದೇಶಿಸಲ್ಪಟ್ಟಿದೆ. ಶರೀರ ಇಂದ್ರಿಯಗಳು ಪ್ರಾಣ ಪುರ್ಯಷ್ಟಕ ಈ ತತ್ವ ಸಂಚಯದಿಂದ ಬೇರೆ ಯಾಗಿರುವ ಚಿತ್ಸ್ವರೂಪವನ್ನು ಅನುಭವದಿಂದ ಗುರುತಿಸಲು ಸಮರ್ಥ

ರಾದವರಿಗೆ ಶಾಂಭವೋಪಾಯವು ನಿರೂಪಿಸಿದೆ. ಇಲ್ಲಿ ಮಿತಪ್ರಮಾತೃ ವಾಗಿರುವ ಜೀವನ ಸ್ವರೂಪದಿಂದ ಬೇರೆಯಾಗದಿರುವ ಇಚ್ಛಾಶಕ್ತಿಯ ಅನುಸಂಧಾನವೇ ಪ್ರಧಾನವಾಗಿರುತ್ತದೆ. ಭಿನ್ನಾಭಿನ್ನವಾಗಿರುವ ವಿಕಲ್ಪಗಳನ್ನು ಸಂಸ್ಕರಿಸುತ್ತಾ ಅಭಿನ್ನವಾಗಿರುವ ಚಿದ್ವಿಕಾಸವನ್ನು ಹೊಂದಲರ್ಹರಾಗಿರುವವರಿಗೆ ಶಾಕ್ತೋಪಾಯವು ವಿವರಿಸಲ್ಪಟ್ಟದೆ. ಬದ್ಧದಶೆಯಲ್ಲಿ ಉಪಕರಣಗಳಾಗಿರುವ ಶರೀರ ಪ್ರಾಣ ಮೊದಲಾದ ಪಾಶವೀಯ ಉಪಕರಣಗಳನ್ನೇ ಆಸನ, ಪ್ರಾಣಾಯಾಮ, ಮುದ್ರಾ, ಬಂಧಾ ಮೊದಲಾದ ಉಪಾಯಗಳಲ್ಲಿ ವಿನಿಯೋಗಿಸಿ ಅಥವಾ ಅಳ ವಡಿಸಿ ಮಾರ್ಪಡಿಸಿ ಚಿದ್ವಿಕಾಸವನ್ನು ಪಡೆಯಲು ಸಮರ್ಥರಾಗಿರು ವವರಿಗೆ ಆಣವೋಪಾಯವು ಉಪದೇಶಿಸಲ್ಪಟ್ಟದೆ. ಈ ನಾಲ್ಕು ಉಪಾಯಗಳನ್ನು ವಿವರಿಸಿದ್ದರೂ ಪ್ರತಿಯೊಂದು ಕ್ಷಣದಲ್ಲಿಯೂ ತನ್ನನ್ನು ತಾನು ವಿಮರ್ಶಿಸಿಕೊಳ್ಳುವ ಕ್ರಮವು ಎಲ್ಲರಿಗೂ ಸಮಾನ ವಾಗಿಯೇ ಇರುತ್ತದೆ. ಆ ವಿಮರ್ಶಿಸಿಕೊಳ್ಳುವ ಕ್ರಮವು ಈ ರೀತಿ ಯಾಗಿರುತ್ತದೆ.

ನಾವು ಯಾವ ರೀತಿಯಾಗಿ ನಮ್ಮನ್ನು ತಿದ್ದಿಕೊಳ್ಳಬೇಕಾದರೂ ನಮ್ಮ ಭಾವನೆಯನ್ನು ನಾಲ್ಕು ಬಗೆಯಾಗಿ ವಿಂಗಡಿಸಿಕೊಳ್ಳಬೇಕು. ಇದನ್ನೇ ಸಾಂಪ್ರದಾಯಿಕರು ಅನುಶೀಲನ, ಪರಿಶೀಲನ, ಅನುಸಂಧಾನ, ಪರಾಮರ್ಶವೆಂದು ಕರೆದಿರುತ್ತಾರೆ. ಬೇರೆ ಬೇರೆಯಾಗಿರುವ ವಿಷಯ ಗಳನ್ನು ಮತ್ತು ವೃತ್ತಿಗಳನ್ನು ನಿಷ್ಕೃಷ್ಟವಾಗಿ ತಿಳಿಯುವಿಕೆಯೇ ಪರಿ ಶೀಲನ. ಈ ಭೇದಾವಸ್ಥೆಗಳಲ್ಲಿ ಅನುಸ್ಯೂತವಾಗಿರುವ ಆಧಾರವಾದ ಧರ್ಮವನ್ನು ಗುರುತಿಸುವಿಕೆಯೇ ಅನುಶೀಲನ. ಭೇದ ವ್ಯವಹಾರ ಗಳು ನಡೆಯುತ್ತಿರುವಾಗಲೂ ಅಭಿನ್ನವಾದ ಪ್ರಶಾಂತವಾದ ಸ್ವಸ್ವರೂಪ ದಲ್ಲಿ ಗಮನವಿರುವಿಕೆಯೇ ಅನುಸಂಧಾನ. ಭೇದಜ್ಞಾನಗಳಿಂದ ಆಕರ್ಷಿಸಲ್ಪಟ್ಟದ್ದರೂ ತನ್ನ ಮೂಲ ಸ್ವರೂಪವನ್ನು ಬಾರಿ ಬಾರಿಗೂ ನೆನಪಿಗೆ ತಂದುಕೊಳ್ಳುತ್ತಿರುವುದೇ ಪರಾಮರ್ಶ.

ಪಂಡಿತರಿಗೂ ಪಾಮರರಿಗೂ ಸಮಾನವಾಗಿ ಅನುಭವದಲ್ಲಿರುವ ಜಾಗ್ರತ್ ಸ್ವಪ್ನ ಸುಷುಪ್ತಿಗಳನ್ನು ಪರಿಶೀಲಿಸುತ್ತಾ ಈ ಮೂರು ಅವಸ್ಥೆಗಳಿಗೂ ಆಶ್ರಯವಾಗಿರುವ ತುರ್ಯಾವಸ್ಥೆಯನ್ನು ಗುರುತಿಸುವುದು ಮತ್ತು ತುರ್ಯಾತೀತಾವಸ್ಥೆಯನ್ನು ಊಹಿಸುವುದು ಮಿಂಚಿನಂತೆ ಅನುಭವಕ್ಕೆ ಬರುವ ಈ ತುರೀಯಾ ತುರೀಯಾತೀತಾವಸ್ಥೆಗಳನ್ನು ಭಾವಿಸುವುದು ಒಂದು ಬಗೆಯಾದ ತನ್ನನ್ನು ತಾನು ಪರಿಶೀಲಿಸಿಕೊಳ್ಳುವ ಕ್ರಮ.

ಶಾಸ್ತ್ರಾಭ್ಯಾಸದಿಂದ ಈ ವಿಶ್ವವು ೩೬ ತತ್ವರೂಪವಾಗಿರುವುದೆಂದು ತಿಳಿದು ತಾನು ಗ್ರಾಹಕನಾಗಿದ್ದು ಗ್ರಾಹ್ಯಗಳಾಗಿರುವ ತತ್ವಸಂಪುಟದಲ್ಲಿ ತಾನು ಸೇರಿರುವೆನೆಂದೂ ತತ್ವಗಳು ಅಸಂಕೀರ್ಣಗಳಾಗಿದ್ದರೂ ಬದುಕಿರುವಾಗ ಅವುಗಳು ಗ್ರಂಥಿರೂಪವಾಗಿ ತನ್ನ ಸ್ವಭಾವಸಿದ್ಧವಾದ ಶಕ್ತಿ ಪ್ರಸರಣಕ್ಕೆ ಪ್ರತಿಬಂಧಕಗಳಾಗಿರುವವುಗಳೆಂದು ತಿಳಿದು ಅನುಸಂಧಾನಮಾಡುವುದು ಇನ್ನೊಂದು ಬಗೆಯ ಪರಿಶೀಲನಾಕ್ರಮ.

ದೇಹ ಪ್ರಾಣ ಪುರ್ಯಷ್ಟಕಗಳಿಂದ ಕೂಡಿ ತಾನು 'ಸಕಲ' ಪ್ರಮಾತೃವಾಗಿರುವವನಾಗಿ ಕ್ರಮಕ್ರಮವಾಗಿ ಶಕ್ತಿ ವಿಕಾಸವೇರ್ಪಟ್ಟಲ್ಲಿ ಪ್ರಳಯಾಕಲಾ, ವಿಜ್ಞಾನಾಕಲಾ, ಮಂತ್ರ, ಮಂತ್ರೇಶ್ವರ, ಮಂತ್ರಮಹೇಶ್ವರರೆಂಬ ಪ್ರಮಾತೃ ಹಂತಗಳನ್ನು ದಾಟಿ ಶಿವನೇ ಆಗಬಹುದೆಂದೂ ಈ ದಶೆಯಲ್ಲಿ ಗ್ರಾಹ್ಯವಾಗಿರುವ ವಿಶ್ವವು ತನ್ನಿಂದ ಬೇರೆಯಲ್ಲವೆಂದು ಅನುಸಂಧಾನಮಾಡುವುದು ಮತ್ತೊಂದು ಬಗೆಯ ಪರಾಮರ್ಶ.

ಶಿವನು ವಿಶ್ವ ಸೃಷ್ಟಿ ವಿಶ್ವ ಸಂಹಾರ ಮೊದಲಾದ ಪಂಚ ಕೃತ್ಯಗಳನ್ನು ನಿರ್ವಹಿಸುತ್ತಿದ್ದಾನೆ. ಅದೇ ರೀತಿಯಾಗಿ ಸಂಕುಚಿತ ಶಕ್ತಿಯುಳ್ಳ ಈ ಮಿತಪ್ರಮಾತೃವು ಪಂಚ ಕೃತ್ಯಗಳನ್ನು ನಿರ್ವಹಿಸುತ್ತಿರು

ತ್ತಾನೆ. ಬಾಹ್ಯಾಭ್ಯಂತರ ವಿಷಯಗಳ ಸೃಷ್ಟಿ ಮತ್ತು ಸ್ಥಿತಿಗಳಿಂದಲೇ ಸುಖ ದುಃಖಗಳುಂಟಾಗುತ್ತವೆ. ಪ್ರಳಯ ಅನುಗ್ರಹ ತಿರೋಧಾನ ಇವುಗಳಲ್ಲಿ ಸುಖ ದುಃಖಾನುಭವಗಳಿಲ್ಲ. ತಾನು ತತ್ವತಃ ಶಿವ ರೂಪಿಯೇ ಆಗಿದ್ದರೂ ಬದ್ಧದಶೆಯಲ್ಲಿ ಪಂಚಕೃತ್ಯಗಳಲ್ಲಿ ಸೃಷ್ಟಿ ಸ್ಥಿತಿ ಗಳು ತನಗೆ ಸುಖ ದುಃಖಗಳಿಗೆ ಕಾರಣಗಳಾಗಿವೆಯೆಂದೂ ಶಕ್ತಿ ವಿಕಾಸವೇರ್ಪಟ್ಟಲ್ಲಿ ಈಗ ನಡೆಯುತ್ತಿರುವ ಭೇದರೂಪವಾದ ಸೃಷ್ಟಿಯು ಅಭೇದರೂಪವಾದ ಸಂಹಾರವೂ ಬದಲಾಗಿ ಅಭೇದವೇ ಸೃಷ್ಟಿಯಾಗಿಯೂ ಭೇದವೇ ಸಂಹಾರವಾಗಿಯೂ ಪರಿಣಮಿಸುತ್ತ ದೆಂದು ಭಾವಿಸುವುದು ಮತ್ತೊಂದು ವಿಧವಾದ ಅನುಸಂಧಾನ.

ಚಿತ್ ಆನಂದ ಇಚ್ಛಾ ಜ್ಞಾನ ಕ್ರಿಯಾ ಎಂಬ ೫ ಶಕ್ತಿಗಳಿಂದ ಪರಿಪೂರ್ಣನಾಗಿರುವವನು ಶಿವನು. ಇವು ಸರ್ವಜ್ಞತ್ವ ಸರ್ವ ಕರ್ತೃತ್ವ ಮೊದಲಾದ ಪ್ರಭಾವಗಳನ್ನುಳ್ಳವುಗಳಾಗಿವೆ. ಮಿತಪ್ರಮಾತೃ ವಾದ ಜೀವನು ಈ ಪಂಚಶಕ್ತಿಗಳಿಂದ ಕೂಡಿರುವನೆಂಬುದು ಭಾವನಾ ಬಲದಿಂದ ಅನುಭವಕ್ಕೆ ಬರುತ್ತದೆ. ಶಕ್ತಿ ಸಂಕೋಚದಿಂದ ಚಿದಾದಿ ಶಕ್ತಿಗಳು ಅಲ್ಪಜ್ಞತ್ವ ಅಲ್ಪ ಕರ್ತೃತ್ವಾದಿ ಸಂಕುಚಿತ ಶಕ್ತಿಗಳನ್ನು ಪಡೆದಿರುತ್ತವೆ. ಶಕ್ತಿ ವಿಕಾಸವೇರ್ಪಟ್ಟರೆ ಶಿವನೇ ಆಗುವೆನೆಂದು ಭಾವಿಸುವಿಕೆಯೊಂದು ಬಗೆಯ ಆತ್ಮ ಪರಿಶೀಲನೆ.

ಎಲ್ಲಾ ಪ್ರಾಣಿಗಳೂ ತಮ್ಮ ಅಭಿಪ್ರಾಯವನ್ನು ಇನ್ನೊಂದು ಪ್ರಾಣಿಗೆ ತಿಳಿಯಪಡಿಸುವುದಕ್ಕೆ ಶಬ್ದವನ್ನುಪಯೋಗಿಸುತ್ತವೆ. ಪಶು ಗಳೂ ಪಕ್ಷಿಗಳೂ ಕೂಡ ಧ್ವನಿಯನ್ನು ಮಾಡುವುದರ ಮೂಲಕ ತಮ್ಮಭಿಪ್ರಾಯವನ್ನು ಸೂಚಿಸುತ್ತವೆ. ಮನುಷ್ಯನು ತನ್ನ ಸಂಜ್ಞೆ ಗಳಿಂದ ತನ್ನ ಮನೋಗತವನ್ನು ತಿಳಿಯಪಡಿಸುವುದುಂಟು. ಆದರೂ ತಿಳಿಯುವವನು ಈ ಸಂಜ್ಞೆಗೆ ಈ ಅರ್ಥವೆಂದು ತಿಳಿದು ಅದರ ತಾತ್ಪರ್ಯವನ್ನು ಗ್ರಹಿಸುತ್ತಾನೆ. ಅಲ್ಲಿ ಶಬ್ದಾರ್ಥ ಪ್ರತ್ಯಯವಿದ್ದೇ

ಇದೆ. ಶಬ್ದಾರ್ಥಗಳ ತಿಳಿವಳಿಕೆಯಿಂದ ಸಂಜ್ಞೆಯು ಅರ್ಥವಾಗುತ್ತದೆ. ಈ ತಿಳಿವಳಿಕೆಯಿಲ್ಲದಿರುವವನಿಗೆ ಈ ಸಂಜ್ಞೆಯು ಅರ್ಥವಾಗಲಾರದು. ಮನುಷ್ಯರ ವ್ಯವಹಾರವು ಮಾತುಗಳಿಂದ ನಡೆಯುತ್ತದೆ. ಈ ಮಾತುಗಳು ವಾಕ್ಯಗಳಿಂದುಂಟಾಗುತ್ತವೆ. ವಾಕ್ಯಗಳಲ್ಲಿ ಪದಗಳಿವೆ. ಪದಗಳು ಅಕ್ಷರಗಳಿಂದ ಸಿದ್ಧವಾಗುತ್ತವೆ. ಈ ಅಕ್ಷರಗಳನ್ನು ನಾವು ಉಚ್ಚರಿಸುತ್ತೇವೆ. ಈ ಅಕ್ಷರಗಳು ಉಚ್ಚರಿಸಲ್ಪಡುವುದಕ್ಕಿಂತ ಮುಂಚೆ ಅವ್ಯಕ್ತವಾದ ಒಂದು ಸ್ಥಿತಿಯಲ್ಲಿ ಭೇದಾಭೇದ ರೂಪವಾಗಿ ಶಕ್ತಿರೂಪವಾಗಿರುತ್ತವೆ. ಇನ್ನೂ ಸೂಕ್ಷ್ಮವಾಗಿ ಪರ್ಯಾಲೋಚಿಸಿದರೆ ಅಭೇದರೂಪವಾಗಿರುವುದನ್ನು ಊಹಿಸಬಹುದು. ಅಭೇದ ರೂಪವಾಗಿರುವ ಶಕ್ತಿಗೆ ಪರಾ ಎಂದೂ ಭಿನ್ನಾಭಿನ್ನವಾಗಿರುವ ಸ್ಥಿತಿಗೆ ಪಶ್ಯಂತೀ ಮಧ್ಯಮಾ ಎಂದೂ ಭೇದಜ್ಞಾನವನ್ನೇ ಪ್ರಧಾನವಾಗಿ ಉಂಟುಮಾಡುವ ಸ್ಥಿತಿಗೆ ವೈಖರೀಯೆಂದೂ ಶಾಸ್ತ್ರ ಪರಿಭಾಷೆಯಿದೆ. ಈ ವೈಖರೀ ಸ್ಥಿತಿಯು ನಾಲ್ಕನೆಯ ಹಂತ.

ತನ್ನನ್ನು ತಾನು ಪರಿಶೀಲಿಸುವಾಗ ಸ್ವರ ಮತ್ತು ವ್ಯಂಜನ ಸಂಯೋಗರೂಪವಾದ ಅಕ್ಷರಗಳನ್ನು ಅಕ್ಷರೋಚ್ಚಾರಣೆಗೆ ಮೂಲವಾಗಿರುವ 'ಅನಚ್ಕ' ವರ್ಣ ಸ್ಥಿತಿಗತಿಗಳನ್ನೂ ಈ ವರ್ಣವೆಂಬ ವೃಕ್ಷಕ್ಕೆ ಬೇರಿನಂತಿರುವ ಮಧ್ಯಮಾ ಪಶ್ಯಂತೀ ಪರಾ ಈ ಅವಸ್ಥೆಗಳನ್ನು ಅನುಸಂಧಾನಮಾಡಿ ಯಾವ ರೀತಿಯಾಗಿ ಅಭಿನ್ನವಾಗಿರುವ ಪರಾ ಶಕ್ತಿಯು ಇಷ್ಟು ಚಮತ್ಕಾರಗಳನ್ನು ಉಂಟುಮಾಡುತ್ತಲಿದೆ ಎಂದು ಪರಿಶೀಲಿಸುವುದು ಒಂದು ಬಗೆಯ ಶಕ್ತ್ಯುಪಾಸನೆ ಅಥವಾ ಪರಾ ಮರ್ಶ.

ಮೂರು ಅಂಶಗಳು ಎಲ್ಲರ ಅನುಭವದಲ್ಲಿಯೂ ಅಚ್ಚಳಿಯದೆ ಇವೆ. ಅಭಿನ್ನವಾಗಿದ್ದ ತಿಳಿವಳಿಕೆಗಳು ವ್ಯವಹಾರ ಕಾಲದಲ್ಲಿ ಭೇದ ರೂಪವನ್ನು ಪಡೆಯುತ್ತವೆ. ವ್ಯವಹಾರ ಕಾಲದಲ್ಲಿ ಭೇದ ರೂಪ

ವಾಗಿದ್ದ ತಿಳಿವಳಿಕೆಗಳು ಕಾಲಾಂತರದಲ್ಲಿ ಅಭಿನ್ನ ರೂಪವನ್ನು ತಾಳು ತ್ತವೆ. ಭಿನ್ನವಾಗಿದ್ದ ತಿಳಿವಳಿಕೆಗಳು ಅಭಿನ್ನವಾಗಲಿಕ್ಕೂ ಅಭಿನ್ನ ವಾಗಿ ಸಂಸ್ಕಾರ ರೂಪದಿಂದಿದ್ದು ಸ್ಮರಣ ಮೊದಲಾದ ಕಾರಣಗಳಿಂದ ಭಿನ್ನ ರೂಪವನ್ನು ತಾಳುವುದಕ್ಕೂ ಚಿಚ್ಛಕ್ತಿಗೆ ಸ್ವಾತಂತ್ರ್ಯವಿದೆ. ಈ ಚಮತ್ಕಾರವು ಅಭಿನ್ನಾ, ಭಿನ್ನಾಭಿನ್ನಾ, ಭಿನ್ನಾ ಎಂಬ ಮೂರು ರೂಪ ಗಳಿಂದ ತಾಂಡವಾಡುತ್ತಲಿದೆ.

> ವಸ್ತುತೋಹಿ ತ್ರಿಧೈವೇಯಂ ಜ್ಞಾನಸತ್ತಾ ವಿಜೃಂಭತೇ ।
> ಭೇದೇನ ಭೇದಾಭೇದೇನ ತಥೈವಾಭೇದ ಭಾಗಿನಾ ॥

ತಂತ್ರಾಲೋಕ.

ಚಿತ್ಸಂಸ್ಪರ್ಶವೇರ್ಪಟ್ಟು ಅದರಿಂದುಂಟಾಗುವ ಭಾವನೆಗಳಿಂದ ಅಭಿನ್ನವಾಗಿರುವುದೇ 'ಚಿತ್ತ'. ತತ್ವಗಳ ಅವರೋಹಣ ಕ್ರಮ ದಲ್ಲಿ ಹದಿನಾರನೆಯ ತತ್ವವಾದ 'ಚಿತ್ತ' ರೂಪವನ್ನು ತಾಳುತ್ತದೆ. ಈ ಚಿತ್ತದ ಮೂಲಕ ಹೊರಹೊಮ್ಮುವ ಎಲ್ಲಾ ತಿಳಿವಳಿಕೆ ಗಳೂ ಭಿನ್ನಾಭಿನ್ನವಾಗಿರುತ್ತವೆ. ಚಿತ್ಸ್ವರೂಪಾನುಬಂಧವಾಗಿದ್ದಲ್ಲಿ ಅಭಿನ್ನವಾಗಿಯೂ ಚಿತ್ತಮೂಲಕವಾದಲ್ಲಿ ಭಿನ್ನವಾಗಿಯೂ ಇರುವ ಭಾವನಾ ಪ್ರಪಂಚವು ಎಲ್ಲರ ಅನುಭವದಲ್ಲಿದೆ. ಈ ಶಿವಾದ್ವೈತ ಸಂಪ್ರದಾಯದಲ್ಲಿ ತನ್ನನ್ನು ತಾನು ವಿಮರ್ಶೆಮಾಡಿಕೊಂಡು ಈಶಾ ವೇಶವನ್ನು ಸಂಪಾದಿಸುವುದೇ ಮುಖ್ಯ ಗುರಿ. 'ಶಾಸ್ತ್ರತಃ ಗುರುತಃ ಸ್ವತಃ' ಎಂಬಂತೆ ಶಾಸ್ತ್ರ, ಗುರು, ಸ್ವಪ್ರಯತ್ನ ಮೊದಲಾದ ಎಲ್ಲಾ ಉಪಾಯಗಳಿಂದಲೂ ಈ ಗುರಿಯನ್ನು ಸಾಧಿಸಬೇಕು. 'ಪರಿಪಾಕ ವೇರ್ಪಟ್ಟ ಸಾಧಕನು ಈಶಾವೇಶವನ್ನು ಪಡೆದು ಈ ಜನ್ಮದಲ್ಲಿಯೇ ತಾನೇ ಶಿವನೆಂಬ ಅನುಭವವನ್ನು ಪಡೆಯುತ್ತಾನೆ. 'ತಾನೇ ಶಿವನು' ಎಂಬ ಅನುಭವವೇ ಪ್ರತ್ಯಭಿಜ್ಞಾ. ಆ ಶಿವನೇ ನಾನು

ಎಂಬ ದೃಢಪ್ರತ್ಯಯವು ಶಾಸ್ತ್ರಗಳಿಂದ ತಿಳಿದು ಉಪದೇಶಗಳಿಂದ ಕೇಳಿ ಸ್ವಪ್ರಯತ್ನದಿಂದ ಪರಿಶೀಲಿಸಿ ಸಾಕ್ಷಾತ್ಕಾರದಿಂದ ಅನುಭವಕ್ಕೆ ತಂದುಕೊಳ್ಳುವುದೇ ಪ್ರತ್ಯಭಿಜ್ಞಾ ದರ್ಶನದ ಫಲ.

---

ಸರ್ವೋಮಮಾಯಂ ವಿಭವಃ ಇತ್ಯೇವಂ ಪರಿಜಾನತಃ ।
ವಿಶ್ವಾತ್ಮನೋವಿಕಲ್ಪಾನಾಂ ಪ್ರಸರೇಪಿ ಮಹೇಶತಾ ॥

ವಿಜ್ಞಾನಭೈರವ.

ಮೂವತ್ತಾರು ತತ್ವಮಯವಾದ ವಿಶ್ವವೆಲ್ಲಾ ನನ್ನ ಐಶ್ವರ್ಯವೇ ಎಂದು ಯಾರು ವಿಶ್ವಾತ್ಮ ಭಾವನೆಯಿಂದ ತಿಳಿಯುತ್ತಾರೆಯೋ ಅಂತಹವರಿಗೆ ಭೇದಜ್ಞಾನವನ್ನುಂಟುಮಾಡುವ ವಿಕಲ್ಪ ವೃತ್ತಿಗಳು ಇದ್ದರೂ ಮಹೇಶತ್ವವು ಸಿದ್ಧವಾಗಿಯೇ ಇರುತ್ತದೆ.

---

# ಪ್ರತ್ಯಭಿಜ್ಞಾಹೃದಯದ ಸೂತ್ರಗಳು

೧ ಚಿತಿಃ ಸ್ವತಂತ್ರಾ ವಿಶ್ವಸಿದ್ಧಿಹೇತುಃ।

೨ ಸ್ವೇಚ್ಛಯಾಸ್ವಭಿತ್ತೌ ವಿಶ್ವಮುನ್ಮೀಲಯತಿ।

೩ ತನ್ನಾನಾ ಅನುರೂಪ ಗ್ರಾಹ್ಯಗ್ರಾಹಕಭೇದಾತ್।

೪ ಚಿತಿಸಂಕೋಚಾತ್ಮಾ ಚೇತನೋಽಪಿ ಸಂಕುಚಿತ ವಿಶ್ವಮಯಃ।

೫ ಚಿತಿರೇವ ಚೇತನ ಪದಾದವರೂಢಾ ಚೈತ್ಯ ಸಂಕೋಚಿನೀ ಚಿತ್ತಂ।

೬ ತನ್ಮಯೋ ಮಾಯಾಪ್ರಮಾತಾ।

೭ ಸಚೈಕೋ ದ್ವಿರೂಪಸ್ತ್ರಿಮಯಃ ಚತುರಾತ್ಮಾ ಸಪ್ತಪಂಚಕಸ್ವಭಾವಃ।

೮ ತದ್ಭೂಮಿಕಾಃ ಸರ್ವದರ್ಶನಸ್ಥಿತಯಃ।

೯ ಚಿದ್ವತ್ತಚ್ಛಕ್ತಿಸಂಕೋಚಾತ್ ಮಲಾವೃತಃಸಂಸಾರೀ।

೧೦ ತಥಾಪಿ ತದ್ವತ್ ಪಂಚಕೃತ್ಯಾನಿ ಕರೋತಿ।

೧೧ ಆಭಾಸನ ರಕ್ತಿ ವಿಮರ್ಶನ ಬೀಜಾವಸ್ಥಾಪನ ವಿಲಾಪನತಸ್ತಾನಿ।

೧೨ ತದಪರಿಜ್ಞಾನೆ ಸ್ವಶಕ್ತಿಭಿರ್ವ್ಯಾಮೋಹಿತತಾ ಸಂಸಾರಿತ್ವಮ್।

೧೩ ತತ್ಪರಿಜ್ಞಾನೆ ಚಿತ್ತಮೇವ ಅಂತರ್ಮುಖೀಭಾವೇನ ಚೇತನ ಪದಾಧ್ಯಾರೋಹಾತ್ ಚಿತಿಃ।

೧೪ ಚಿತಿವಹ್ನಿರವರೋಹಪದೇ ಛನ್ನೋಽಪಿ ಮಾತ್ರಯಾ ಮೇಯೇಂಧನಂ ಪ್ಲುಷ್ಯತಿ।

೧೫ ಬಲ ಲಾಭೆ ವಿಶ್ವಮಾತ್ಮಸಾತ್ಕರೋತಿ।

೧೬ ಚಿದಾನಂದಲಾಭೆ ದೇಹಾದಿಷು ಚೈತ್ಯಮಾನೇಷ್ವಪಿ ಚಿದೈಕಾತ್ಮ್ಯ ಪ್ರತಿಪತ್ತಿದಾರ್ಢ್ಯಂ ಜೀವನ್ಮುಕ್ತಿಃ।

೧೭ ಮಧ್ಯವಿಕಾಸಾತ್ ಚಿದಾನಂದಲಾಭಃ।

೧೮ ವಿಕಲ್ಪಕ್ಷಯ-ಶಕ್ತಿ ಸಂಕೋಚವಿಕಾಸ-ವಾಹಚ್ಛೇದಾದ್ಯಂತಕೋಟಿ ನಿಭಾಲನಾದಯ ಇಹೋಪಾಯಾಃ।

೧೯ ಸಮಾಧಿ ಸಂಸ್ಕಾರವತಿ ವ್ಯುತ್ಥಾನೆ ಭೂಯೋಭೂಯಶ್ಚಿದೈಕ್ಯಾ ಮರ್ಶಾನ್ನಿತ್ಯೋದಿತ ಸಮಾಧಿಲಾಭಃ।

೨೦ ತದಾ ಪ್ರಕಾಶಾನಂದಸಾರ ಮಹಾಮಂತ್ರವೀರ್ಯಾತ್ಮಕ ಪೂರ್ಣಾಹಂತಾವೇಶಾತ್ ಸದಾ ಸರ್ವಸರ್ಗಸಂಹಾರಕಾರಿ ನಿಜ ಸಂವಿದ್ದೇವತಾಚಕ್ರೇಶ್ವರತಾ ಪ್ರಾಪ್ತಿರ್ಭವತೀತಿ ಶಿವಂ।

—೦೦—

# ಪ್ರತ್ಯಭಿಜ್ಞಾ
## ಸೂತ್ರಗಳ ಸರಳಾನುವಾದ

ಸ್ವಯಂಪ್ರಕಾಶವಾದ ಚಿತ್ತು ಸ್ವತಂತ್ರವಾದದ್ದು. ಸರ್ವಶಕ್ತಿಗಳನ್ನೂ ಒಳಗೊಂಡಿರುವಂಥಾದ್ದು. ಎಲ್ಲಕ್ಕೂ ಕಾರಣವಾದದ್ದು. ಸುಖೋಪಾಯವಾದದ್ದು. ಇದು ದೇಶ ಕಾಲ ಆಕಾರಗಳಿಗೆ ಒಳಪಟ್ಟಿರುವುದಿಲ್ಲ. ಈ ದಶೆಯಲ್ಲಿ ಇದು ಅನುತ್ತರ ವಿಮರ್ಶಮಯಿಯೂ, ಪರಾಸಂವಿತ್, ಪರಮಶಿವ ಎಂದು ಕರೆಯಲ್ಪಡುತ್ತದೆ.

ಈ ಚಿತ್ತು ಪ್ರಕಾಶ ವಿಮರ್ಶಮಯವಾಗಿದೆ. ಪ್ರಕಾಶವೆಂದರೆ ಶಕ್ತಿಪ್ರಸಾರ. ಭೇದವನ್ನಂಗೀಕರಿಸಿ ಪದಾರ್ಥರೂಪವಾಗಿ ವ್ಯಕ್ತವಾಗುವುದು. ವಿಮರ್ಶವೆಂದರೆ ಅಂತರನುಸಂಧಾನರೂಪವಾದ ಸ್ವಸ್ವರೂಪ ಪರಾಮರ್ಶ. ಇವೆರಡಂಶಗಳ ಮಯವಾಗಿರುವುದೇ ಪ್ರಕಾಶ ವಿಮರ್ಶ ಮಯ. ಪ್ರಕಾಶರೂಪದಿಂದ ವಿಶ್ವಾತ್ಮಕವಾಗಿಯೂ ವಿಮರ್ಶಕ್ರಮದಿಂದ ವಿಶ್ವೋತ್ತೀರ್ಣವಾಗಿಯೂ ಇದೆ. ತನ್ನ ಇಚ್ಛೆಯಿಂದಲೇ ತನ್ನಲ್ಲಿಯೇ ವಿಶ್ವವನ್ನು ತೋರ್ಪಡಿಸಿಕೊಳ್ಳುತ್ತದೆ. ಹೀಗೆ ತೋರ್ಪಡಿಸಿಕೊಳ್ಳುವುದು ಎರಡು ವಿಧವಾಗಿದೆ. ಒಂದು ಗ್ರಾಹ್ಯಭಾವ, ಇನ್ನೊಂದು ಗ್ರಾಹಕಭಾವ. ತಿಳಿಯಲ್ಪಡುವ ತತ್ವ ಪ್ರಪಂಚಕ್ಕೆಲ್ಲಾ ಗ್ರಾಹ್ಯವೆಂದು ಸಂಜ್ಞೆ. ತಿಳಿಯುವ ಶಕ್ತಿಯಿರುವವರಿಗೆ ಗ್ರಾಹಕರೆಂದು ಹೆಸರು. ವಿಶ್ವವೇ ಗ್ರಾಹ್ಯ, ಜೀವರುಗಳೇ ಗ್ರಾಹಕರು. ಗ್ರಾಹಕರಿಗನುರೂಪವಾದ ಗ್ರಾಹ್ಯ ಪ್ರಪಂಚವಿರುತ್ತದೆ. ಇಷ್ಟು ಚಮತ್ಕಾರ ಸಾಮರ್ಥ್ಯವುಳ್ಳ ಚಿತ್ತು ತಾನೇ ಸಂಕೋಚದಿಂದ ಗ್ರಾಹ್ಯ ಗ್ರಾಹಕಭಾವವನ್ನು ತಾಳಿರುವುದರಿಂದ ಬದ್ಧಾವಸ್ಥೆಯಲ್ಲಿ ಗ್ರಾಹಕನಾಗಿರುವ ಜೀವನು ಸಂಕುಚಿತನಾದ ವಿಶ್ವಮಯನಾಗಿರುವನು.

ಸ್ವಯಂಪ್ರಕಾಶವಾಗಿ ಎಲ್ಲವನ್ನೂ ತಿಳಿಯುವ ಸಾಮರ್ಥ್ಯವುಳ್ಳ ಚಿತ್ತು ಅವರೋಹಣಕ್ರಮದಿಂದ ತನ್ನ ಸ್ವರೂಪವನ್ನು ಮರೆಸಿಕೊಂಡು ಪರಿಮಿತವಾದ ಪದಾರ್ಥಗಳನ್ನು ತಿಳಿಯುವ ಚಿತ್ತವಾಯಿತು. ಈ ಚಿತ್ತಮಯನಾಗಿರುವವನೇ ಬದ್ಧ ಜೀವನು.

ವಿಶ್ವಕ್ಕೆಲ್ಲಾ-ಆಶ್ರಯವಾಗಿಯೂ ವಿಶ್ವ ವ್ಯಾಪಿಯಾಗಿಯೂ ವಿಶ್ವಾತ್ಮಕನಾಗಿಯೂ ಇರುವ ಚಿನ್ಮೂರ್ತಿಯಾದ ಶಿವನು ಒಬ್ಬನೇ. ಅಂತಹ ಶಿವನು ಸಂಕೋಚ ವಿಕಾಸ ರೂಪಗಳನ್ನಂಗೀಕರಿಸಿ ದ್ವಿರೂಪಿಯಾದನು. ಆಣವ ಮಾಯಿಾಯ ಕಾರ್ಮಮಲಗಳಿಂದ ಕೂಡಿದವನಾಗಿ ತ್ರಿಮಯನಾದನು. ಶೂನ್ಯ, ಪ್ರಾಣ, ಪುರ್ಯಷ್ಟಕ, ಶರೀರ ಎಂಬ ನಾಲ್ಕು ಸಂಕೋಚದ ಮಿತಿಗೆ ಒಳಪಟ್ಟು ಚತುರಾತ್ಮನಾದನು. ಏಳು ಗ್ರಾಹಕ ಭಾವಗಳನ್ನೂ ಚಿತ್, ಆನಂದ, ಇಚ್ಛಾ, ಜ್ಞಾನ, ಕ್ರಿಯಾ ಎಂಬ ಐದು ಶಕ್ತಿಗಳನ್ನೂ ಒಳಗೊಂಡು ಸಪ್ತ ಪಂಚಕ ಸ್ವಭಾವನೆನಿಸಿದನು. ಹಾಗೂ ೩೬ ತತ್ವರೂಪಿಯಾಗಿ ವಿಶ್ವಾತ್ಮಕನಾಗಿದ್ದಾನೆ. ಇದೆಲ್ಲಾ ಶಿವನ ಶಕ್ತಿ ವಿಲಾಸವಾಗಿರುತ್ತದೆ.

ಈ ಶಿವನು ವಿಶ್ವಾತ್ಮಕನಾಗಿರುವಾಗ ಆತನ ಶಕ್ತಿ ವಿಲಾಸದ ಒಂದೊಂದಂಶವನ್ನು ನಿರೂಪಣೆ ಮಾಡುವುವಗಳೇ ಚಾರ್ವಾಕ, ಸಾಂಖ್ಯಾದಿ ದರ್ಶನಗಳು- ಪಂಚ ಶಕ್ತಿಗಳಿಂದ ಕೂಡಿದ ಚಿನ್ಮೂರ್ತಿಯಾದ ಶಿವನು ಶಕ್ತಿ ಸಂಕೋಚದಿಂದ ಮಲಾವೃತನಾಗಿರುವಿಕೆಯೇ ಸಂಸಾರಿತ್ವ. ಈ ಸಂಸಾರಿಯಾದ ಜೀವನು ಶಕ್ತಿ ಸಂಕೋಚವುಳ್ಳವನಾಗಿದ್ದರೂ ಪರಿಮಿತ ಕ್ರಮದಲ್ಲಿ ಶಿವನ ಹಾಗೆ ಪಂಚಕೃತ್ಯಗಳನ್ನು ನಿರ್ವಹಿಸುತ್ತಾನೆ. ಆಭಾಸನ (ಸೃಷ್ಟಿ) ರಕ್ತಿ (ಸ್ಥಿತಿ) ವಿಮರ್ಶನ (ಸಂಹಾರ) ಬೀಜಾವಸ್ಥಾಪನ (ತಿರೋಧಾನ) ವಿಲಾಪನ (ಅನುಗ್ರಹ) ಎಂಬಿವುಗಳೇ ಆ ಪಂಚಕೃತ್ಯಗಳು. ಯಾವಾಗಲೂ ತಾನು ನಿರ್ವಹಿಸುತ್ತಿರುವ ಈ ಪಂಚಕೃತ್ಯಗಳನ್ನು ತಿಳಿಯದಿರುವಿಕೆಯೇ ವ್ಯಾಮೋಹ. ತನ್ನ ಶಕ್ತಿಗಳು ಸಂಕುಚಿತವಾಗಿರುವಿಕೆಯು ಮತ್ತು ಈ ಸ್ಥಿತಿಯಲ್ಲಿ ತಾನು ನಡೆಸುತ್ತಿರುವ ಪಂಚಕೃತ್ಯಗಳ ಸ್ವರೂಪ ಸ್ವಭಾವಗಳ ಅರಿವಿಲ್ಲದಿರುವಿಕೆಯೇ ಬದ್ಧದಶೆ. ಪಂಚಕೃತ್ಯಗಳ ತಿಳಿವಳಿಕೆಯುಂಟಾದರೆ ಪರಿಮಿತಜ್ಞಾನವನ್ನುಂಟುಮಾಡುತ್ತಿರುವ ಚಿತ್ತವೇ ಅಂತರ್ಮುಖೀಭಾವವನ್ನು ಪಡೆಯುತ್ತದೆ. ಅಂತರ್ಮುಖೀನವಾದ ಚಿತ್ತವು ತನ್ನ ಸಂಕೋಚವನ್ನು ಕಳೆದುಕೊಂಡು ಸ್ವಯಂಪ್ರಕಾಶವಾದ ಚಿತ್ಪದವನ್ನು ಪಡೆಯುತ್ತದೆ. ಚಿತ್ತೆನ್ನುವುದು ಬೆಂಕಿಗೆ ಸಮಾನವಾದದ್ದು. ಈ ಚಿತ್ತು ಅವರೋಹಣ ಕ್ರಮದಲ್ಲಿ ತನ್ನ ಸ್ವರೂಪವನ್ನು ಮರೆಸಿಕೊಂಡಿದ್ದರೂ ತಿಳಿಯಲ್ಪಡತಕ್ಕ

ವಿಷಯಗಳನ್ನು ಅಂಶತಃ ಸಾತ್ಮೀಕರಿಸಿಕೊಳ್ಳುತ್ತದೆ, ಅಂದರೆ ತನ್ನಲ್ಲಿಯೇ ಸೇರಿಸಿಕೊಳ್ಳುತ್ತದೆ. ಅಂತರ್ಮುಖವಾಗಿ ಸ್ವರೂಪ ಸಾಕ್ಷಾತ್ಕಾರವನ್ನು ಪಡೆದರೆ ಈ ವಿಶ್ವವನ್ನು ತನ್ನಲ್ಲಿಯೇ ಸಾತ್ಮೀಕರಿಸಿಕೊಳ್ಳುತ್ತದೆ. ಈ ವಿಶ್ವವು ತನ್ನಿಂದ ಬೇರೆಯಲ್ಲವೆಂಬ ದೃಢ ವಿಶ್ವಾಸವು ಬದ್ಧಾತ್ಮನಿಗೆ ಅನುಭವದಿಂದೇ ರ್ಪಟ್ಟರೆ ಶರೀರ ಪ್ರಾಣ, ಪುರ್ಯಷ್ಟಕ ಇವುಗಳನ್ನೊಳಗೊಂಡಿದ್ದರೂ ಚಿದಾನಂದಲಾಭವಾಗಿ ಜೀವನ್ಮುಕ್ತಿಯುಂಟಾಗುತ್ತದೆ.

ಚಿದಾನಂದಲಾಭವಾಗಬೇಕಾದರೆ ಬದ್ಧಾತ್ಮನಿಗೆ ಮಧ್ಯನಾಡಿ ವಿಕಾಸವಾಗಬೇಕು. ಮನಸ್ಸಿನಲ್ಲುಂಟಾಗುವ ವಿಕಲ್ಪಗಳನ್ನು ಪಂಚವಿಧ ಕೃತ್ಯಕಾರಿತ್ವವೇ ಮೊದಲಾದುವನ್ನು ಅನುಶೀಲನ, ಪರಿಶೀಲನ, ಅನುಸಂಧಾನ ಪರಾಮರ್ಶ ಕ್ರಮಗಳನ್ನನುಸರಿಸುವುದರ ಮೂಲಕ ತೊಡೆದುಹಾಕುವುದರಿಂದಲೂ ಹಾಗೆಯೇ ಇಂದ್ರಿಯಗಳಿಂದುಂಟಾಗುವ ವಿಕಲ್ಪಗಳನ್ನು ಪ್ರತ್ಯಾಹಾರಮಾಡುವುದರಿಂದಲೂ ಮನಶ್ಚಾಂಚಲ್ಯಕ್ಕೆ ಕಾರಣವಾಗಿರುವ ವಿಕಲ್ಪಗಳನ್ನು ಉಚ್ಛ್ವಾಸ ನಿಶ್ವಾಸಗಳನ್ನು ನಿಲ್ಲಿಸುವುದರಿಂದಲೂ, ಹೃದಯದಲ್ಲಿಯೂ ಮತ್ತು ಶಿರಸ್ಸಿನಲ್ಲಿಯೂ ಧಾರಣ ಧ್ಯಾನಾಭ್ಯಾಸಗಳನ್ನು ಮಾಡುವುದರಿಂದಲೂ ಮಧ್ಯನಾಡಿ ವಿಕಾಸವನ್ನು ಹೊಂದಬಹುದು.

ಚಿದಾನಂದಲಾಭವನ್ನು ಪಡೆದು ಆ ಸಮಾಧಿ ಸ್ಥಿತಿಯಿಂದ ಎಚ್ಚತ್ತವನು ಈ ಪ್ರಪಂಚ ವ್ಯವಹಾರಗಳಲ್ಲಿ ತೊಡಗಿದ್ದರೂ ಬಾರಿಬಾರಿಗೂ ತಾನು ಸಮಾಧಿಯಲ್ಲಿ ಅನುಭವಿಸಿದ್ದ ಚಿದೈಕ್ಯವನ್ನೇ ವಿಮರ್ಶೆಮಾಡುತ್ತಿರುತ್ತಾನೆ. ಈ ಸಮಾಧಿ ಸಂಸ್ಕಾರದಿಂದ ಅವನು ಸಮಾಧಿಸ್ಥಿತಿಯಲ್ಲಿಲ್ಲದಿದ್ದರೂ ಪುನಃ ಪುನಃ ಅದನ್ನೇ ವಿಮರ್ಶೆ ಮಾಡುವುದರಿಂದ ಸದಾ ಸಮಾಧಿ ಸುಖವನ್ನೇ ಅನುಭವಿಸುತ್ತಿರುತ್ತಾನೆ. ಆಗ ನಿರಂತರಾನುಭವದಿಂದ ಪ್ರಕಾಶಾನಂದ ವೇರ್ಪಡುತ್ತದೆ. ಇದನ್ನೇ ಮಹಾಮಂತ್ರವೀರ್ಯಾತ್ಮಕವಾದ ಪೂರ್ಣಾಹಂತಾವೇಶವೆನ್ನುತ್ತಾರೆ. ಯಾವಾಗಲೂ ಈ ಸ್ಥಿತಿಯು ಅನುಭವದಲ್ಲಿದ್ದರೆ ಎಲ್ಲಾ ಸೃಷ್ಟಿ ಸ್ಥಿತಿ ಸಂಹಾರಗಳನ್ನೂ ನಡೆಸುತ್ತಿರುವ ಸಹಜಸಂವಿತ್ತಿದೇವತಾ ಚಕ್ರೇಶ್ವರತಾ ಪ್ರಾಪ್ತಿಯಾಗುತ್ತದೆ.

---

ಓಂ

॥ ಓಂ ನಮೋ ಮಂಗಳ ಮೂರ್ತಯೇ ॥

# ಪ್ರತ್ಯಭಿಜ್ಞಾ ಹೃದಯ

ನಮಃ ಶಿವಾಯ ಸತತಂ ಪಂಚಕೃತ್ಯ ವಿಧಾಯಿನೆ ।
ಚಿದಾನಂದ ಘನ ಸ್ವಾತ್ಮ ಪರಮಾರ್ಥಾವಭಾಸಿನೆ ॥

ಚಿದಾನಂದ ಘನನಾಗಿರುವ ತನ್ನ ಸತ್ಯವಾದ ಸ್ವಭಾವವನ್ನು ಪ್ರಕಾಶಪಡಿಸುವ ಯಾವಾಗಲೂ ಪಂಚಕೃತ್ಯಗಳನ್ನು ನಿರ್ವಹಿಸುವ ಶಿವನಿಗೆ ನಮಸ್ಕಾರವು.

ಅಧ್ಯಾತ್ಮ ಶಾಸ್ತ್ರದ ತತ್ವಗಳು ಗಹನವಾಗಿರುವುದರಿಂದ ಸಾಮಾನ್ಯರಿಗೆ ಸುಲಭವಾಗಿ ತಿಳಿಯುವುದಿಲ್ಲ. ತಿಳಿಯಬೇಕಾದರೆ ತೀವ್ರವಾದ ಬುದ್ಧಿಶಕ್ತಿಯೂ ಪರಿಶುದ್ಧವಾದ ಜ್ಞಾನವೂ ಬೇಕು. ಹಾಗೆ ತೀವ್ರವಾದ ಬುದ್ಧಿಶಕ್ತಿಯಿಲ್ಲದಿದ್ದರೂ ಶಾಸ್ತ್ರಗಳಲ್ಲಿ ಹೆಚ್ಚು ಪರಿಶ್ರಮವಿಲ್ಲದಿದ್ದರೂ ಪರಮಾತ್ಮನ ಸಮಾವೇಶವನ್ನು ಕೇವಲ ಈಶ್ವರಾನುಗ್ರಹದಿಂದ ಪಡೆಯಬೇಕೆಂಬ ಇಚ್ಛೆಯುಳ್ಳವರಿಗೆ ಕ್ಷೇಮರಾಜ ನೆಂಬ ಪಂಡಿತನು ಪ್ರತ್ಯಭಿಜ್ಞಾ ಶಾಸ್ತ್ರದ ತಿರುಳನ್ನು ಸಂಗ್ರಹವಾಗಿ ಇಪ್ಪತ್ತು ಸೂತ್ರಗಳಲ್ಲಿ ಸುಲಭವಾಗಿ ತಿಳಿಯಪಡಿಸಿದ್ದಾನೆ.

# ಚಿತ್ಸ್ವರೂಪ

**ಚಿತಿಃ ಸ್ವತಂತ್ರಾ ವಿಶ್ವಸಿದ್ಧಿಹೇತುಃ ॥ ೧ ॥**

**ಸ್ವತಂತ್ರವಾದ ಚಿತ್ತೇ ವಿಶ್ವಸಿದ್ಧಿಗೆ ಕಾರಣವು.—**

ಸದಾಶಿವತತ್ವದಿಂದ ಭೂಮಿಯವರೆಗೂ ಇರುವ ತತ್ವಸಮೂಹದ ಸಿದ್ಧಿರೂಪವಾದ ಸೃಷ್ಟಿಗೂ ಪ್ರಕಾಶರೂಪವಾದ ಸ್ಥಿತಿಗೂ ಪರ ಪ್ರಮಾತೃವಿನಲ್ಲಿ ಲೀನವಾಗುವ ಸಂಹಾರಕ್ಕೂ ಸ್ವತಂತ್ರವಾದ ಪರಾ ಶಕ್ತಿರೂಪಿಯಾದ ಚಿತ್ತೇ (ಚಿಚ್ಛಕ್ತಿಯೇ) ಕಾರಣವಾಗಿದೆ. ಈ ಚಿತ್ತು ಅನುತ್ತರ ವಿಮರ್ಶಮಯನಾಗಿರುವ ಶಿವನಿಂದ ಬೇರೆಯಲ್ಲ. ಈ ಚಿತ್ತೇ ವಿಶ್ವ ವ್ಯಾಪಾರವನ್ನು ನಡೆಸತಕ್ಕದ್ದಾಗಿರುವುದು. ಪರಮ ಫಲವನ್ನು ಕೊಡುವುದಾಗಿಯೂ ಅಂತಹ ಪರಮಫಲಕ್ಕೆ ಸಾಧನ ವಾಗಿಯೂ ಇದೆ.

ಈ ಚಿತ್ತು (ಚಿಚ್ಛಕ್ತಿಯು) ಸ್ವತಂತ್ರವಾದದ್ದು. ಈ ಚಿತ್ತಿ ಗಿಂತ ಆಚೆ ಇದನ್ನು ಮೀರಿದ್ದು ಯಾವುದೂ ಇಲ್ಲ. ಇದು ಪರಮ ಶಿವನಿಂದ ಬೇರೆಯಲ್ಲ. ಇದರ ಪ್ರಸರದಿಂದಲೇ ಜಗತ್ತು ಬೆಳಗುತ್ತದೆ ನಡೆಯುತ್ತದೆ ಮತ್ತು ಹಾಗೆ ಬಹಿಃಪ್ರಸರವಿಲ್ಲದೆ ಅಂತರ್ಮುಖ ವಾದರೆ ಉಪಸಂಹರಿಸಲ್ಪಡುತ್ತದೆ.

ಕೆಲವರು ವಿಶ್ವಕ್ಕೆ ಮಾಯೆ ಕಾರಣವೆನ್ನುವರು. ಇನ್ನು ಕೆಲವರು ಪ್ರಕೃತಿ ಮೊದಲಾದವುಗಳು ಕಾರಣವೆನ್ನುವರು. ಮಾಯೆ ಯಾಗಲಿ ಪ್ರಕೃತಿಯಾಗಲಿ ಸ್ವಯಂಪ್ರಕಾಶಗಳಲ್ಲದೆ ಚಿತ್ತಿಗಿಂತ ಬೇರೆಯಾಗಿರುವುದರಿಂದ ಯಾವುದಕ್ಕೂ ಸ್ವತಂತ್ರವಾಗಿ ಕಾರಣವಾಗ

ಲಾರವು. ಪ್ರಕಾಶವೇ ಮುಖ್ಯ ಸ್ವಭಾವವಾಗಿರುವ ಚಿತ್ತೇ ಸಮಸ್ತ ವಿಷಯುಗಳಿಗೂ ಕಾರಣವಾಗಿರುತ್ತದೆ. ಲೋಕ ವ್ಯವಹಾರಕ್ಕೆ ಕಾರಣಗಳಾದ ದೇಶ ಕಾಲ ಆಕಾರಗಳು ಚಿತ್ತಿನಿಂದಲೇ ಹುಟ್ಟಿರುತ್ತವೆ. ಆದರೂ ಸರ್ವವ್ಯಾಪಕವೂ ಪರಿಪೂರ್ಣವೂ ಸದಾ ಪ್ರಕಾಶರೂಪವಾಗಿಯೂ ಇರುವ ಚಿತ್ತಿನ ಅಖಂಡತ್ವವನ್ನು ಬೇರ್ಪಡಿಸಲು ಸಮರ್ಥಗಳಲ್ಲ.

ಚಿತ್ತು (ಚಿಚ್ಛಕ್ತಿಯು) ಕಾರಣ. ವಿಶ್ವವು ಕಾರ್ಯ. ಯಾವ ದೋಷವೂ ಇಲ್ಲದೆ ಸ್ವತಂತ್ರವಾಗಿಯೂ ಸ್ವಚ್ಛವಾಗಿಯೂ ಅನೇಕ ಶಕ್ತಿಗಳನ್ನೊಳಗೊಂಡದ್ದಾಗಿಯೂ ಇರುವ ಚಿತ್ತೇ ವಿಶ್ವರೂಪವಾಗಿ ಸ್ಫುರಿಸುವುದರಿಂದ ಕಾರಣರೂಪವಾಗಿಯೂ ಕಾರ್ಯರೂಪವಾಗಿಯೂ ಇದೆ.

ಚಿತ್ಸ್ವರೂಪವು ಸ್ವಯಂಪ್ರಕಾಶವಾದದ್ದು. ಚಿತ್ತು ಗ್ರಾಹ್ಯವೂ ಹೌದು. ಗ್ರಾಹಕವೂ ಹೌದು. ಲೋಕ ವ್ಯವಹಾರಗಳನ್ನು ತಿಳಿಯುವುದಕ್ಕೆ ನಾವು ಉಪಯೋಗಿಸುವ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದವೇ ಮೊದಲಾದ ಪ್ರಮಾಣಗಳು ಚಿತ್ಸ್ವರೂಪವನ್ನು ತಿಳಿಯಪಡಿಸಲಾರವು. ಚಿತ್ತು ಅಪರಿಚ್ಛಿನ್ನವಾಗಿಯೂ ಸ್ವತಂತ್ರವಾಗಿಯೂ ಸ್ವಯಂಪ್ರಕಾಶರೂಪವಾದದ್ದಾಗಿಯೂ ಇರುವುದರಿಂದ ಚಿತ್ತಿನಿಂದ ಹುಟ್ಟಿದ ಪ್ರಮಾಣಗಳು ಚಿತ್ತಿನ ವಿಕಲ್ಪಗಳನ್ನು ತೋರ್ಪಡಿಸುವುದಕ್ಕೆ ಸಮರ್ಥವಾಗುವುವೇ ಹೊರತು ಚಿತ್ಸ್ವರೂಪವನ್ನು ತೋರ್ಪಡಿಸಲಾರವು. ಚಿತ್ಸ್ವರೂಪವು ಕೇವಲ ಅನುಭವದಿಂದಲೇ ಗೋಚರವಾಗತಕ್ಕದ್ದು.

ಈ ಚಿತ್ತು ವಿಶ್ವದ ಸೃಷ್ಟಿಗೂ ಸ್ಥಿತಿಗೂ ಪರಮಶಿವನಲ್ಲಿ ಏಕೀಭವಿಸುವಂತಹ ಸಂಹಾರಕ್ಕೂ ಕಾರಣವಾಗಿ ಸ್ವತಂತ್ರವಾಗಿದೆ. ಈ ಸ್ವಾತಂತ್ರ್ಯ ಸ್ವರೂಪವನ್ನು ವಿಶದವಾಗಿ ತಿಳಿದರೆ ಇದು ಭೋಗಕ್ಕೂ ಮೋಕ್ಷಕ್ಕೂ ಕಾರಣವಾಗುತ್ತದೆ - ಮತ್ತು ಸಾಧನವಾಗುತ್ತದೆ - ಇದನ್ನೇ ಇನ್ನೊಂದು ರೀತಿಯಲ್ಲಿ ವಿವರಿಸಬಹುದು.

ಈ ವಿಶ್ವವು ನೀಲ ಸುಖದೇಹ ಪ್ರಾಣಾದಿರೂಪಗಳಿಂದ ಕೂಡಿದ್ದಾಗಿದೆ. ನೀಲವು ಬಹಿರಿಂದ್ರಿಯಗಳಿಂದ ತಿಳಿಯತಕ್ಕದ್ದಾಗಿ ಅನೇಕ ಬಗೆಯಾಗಿದೆ. ಸುಖವು ಅಂತರಿಂದ್ರಿಯಗಳಿಂದ ಅನುಭವಿಸತಕ್ಕದ್ದಾಗಿದೆ. ದೇಹವು ಬಾಹ್ಯಾನುಭವಕ್ಕೂ ಅಂತರನುಭವಕ್ಕೂ ಆಶ್ರಯವಾಗಿದೆ. ದೇಹದ ಕ್ರಿಯೆಗಳನ್ನು ನಡೆಸುವ ಚೈತನ್ಯಶಕ್ತಿಯೇ ಪ್ರಾಣ. ಈ ರೀತಿಯಾದ ವಿಶ್ವದ ಸ್ವರೂಪವು ವಿಲಕ್ಷಣವಾದದ್ದು. ಮಿತ ಪ್ರಮಾತೃವಾದ ಜೀವನು ವಿಶ್ವದ ಸ್ವರೂಪ ಮತ್ತು ವ್ಯಾಪಾರಗಳನ್ನು ಪ್ರಮಾಣಗಳಿಂದ ತಿಳಿಯುತ್ತಾನೆ. ಹಾಗೆ ಪ್ರಮಾಣಗಳಿಂದ ತಿಳಿಯುವುದಕ್ಕೆ ಸಾಧ್ಯವಲ್ಲದ ವಿಷಯಗಳನ್ನು ಸ್ವಚ್ಛಜ್ಞಾನದಿಂದ ತಿಳಿಯುತ್ತಾನೆ ಮತ್ತು ಅನುಭವಿಸುತ್ತಾನೆ. ಹೀಗೆ ಪ್ರಮಾಣಗಳಿಂದ ಹೊರಗಿನ ಪದಾರ್ಥಗಳ ಸ್ವರೂಪವನ್ನು ತಿಳಿದು ಒಳಗಿನ ಅನುಭವಗಳನ್ನು ಮನನ ಮಾಡುವುದರ ಮೂಲಕ ಕ್ರಮಕ್ರಮವಾಗಿ ಜ್ಞಾನ ವಿಕಾಸವನ್ನು ಪಡೆಯುತ್ತಾನೆ. ಪರಮಸುಖವಾದ ಪರಪ್ರಮಾತ್ರಾವೇಶ ಅಥವಾ ಪರಶಿವಾನುಭವವನ್ನು ಹೊಂದುವುದಕ್ಕೆ ಸಾಧಕನು ಮೊದಲು ಪ್ರಮಾಣಗಳಿಂದ ಆರಂಭಿಸುತ್ತಾನೆ. ಅತೀಂದ್ರಿಯ ಸಾಧನಗಳ ಸಹಾಯದಿಂದ ಪೂರ್ಣವಿಕಾಸವನ್ನು ಹೊಂದುತ್ತಾನೆ. ಈ ಸಾಧನಕ್ರಮಕ್ಕೆ ಈ ಸಂಪ್ರದಾಯದಲ್ಲಿ

ಪ್ರಮಾಣೋಪಾರೋಹಕ್ರಮವೆಂದೂ ಪರಪ್ರಮಾತ್ರಾವೇಶ ವೆಂದೂ ಹೆಸರು. ಇವೆಲ್ಲಕ್ಕೂ ಚಿಚ್ಛಕ್ತಿಯೇ ಕಾರಣವಾಗಿದೆ.

ಇನ್ನೂ ಸಂಕ್ಷೇಪವಾಗಿ ಹೇಳುವುದಾದರೆ :

ಚಿತ್ತೇ ತಿಳಿಯಲ್ಪಡುವ ವಿಶ್ವವಾಗಿಯೂ ತಿಳಿಯುವ ಜೀವ ನಾಗಿಯೂ ಹೀಗೆ ಎರಡು ಭೇದಗಳುಳ್ಳದ್ದಾಗಿದೆ.

ಗ್ರಾಹ್ಯ ಗ್ರಾಹಕ ಸಂವಿತ್ತಿಃ ಸಾಮಾನ್ಯಾ ಸರ್ವದೇಹಿನಾಂ।
ಯೋಗಿನಾಂತು ವಿಶೇಷೋಯಂ ಸಂಬಂಧೆ ಸಾವಧಾನತಾ ॥

ಗ್ರಾಹ್ಯವೆಂದರೆ ತಿಳಿಯಲ್ಪಡತಕ್ಕ ವಿಷಯ. ಗ್ರಾಹಕವೆಂದರೆ ತಿಳಿಯುವ ಸ್ವಭಾವವುಳ್ಳ ಚಿದ್ರೂಪಿಯಾದ ಜೀವ. ಭೇದರೂಪವಾದ ಈ ಗಾಹ್ಯ ಗ್ರಾಹಕ ಭಾವವನ್ನು ನಾವು ಸರ್ವಸಾಮಾನ್ಯವಾಗಿ ಎಲ್ಲ ಪ್ರಾಣಿಗಳಲ್ಲಿಯೂ ನೋಡುತ್ತೇವೆ. ಯೋಗಿಯಾದವನು ಈ ಗ್ರಾಹ್ಯ ಗ್ರಾಹಕ ಭಾವಗಳು ಒಂದೇ ಚಿತ್ತಿನಿಂದ ಹೊರಹೊಮ್ಮಿರುವವು ಗಳೆಂದು ವಿಶಿಷ್ಟ ರೀತಿಯಿಂದ ಮನನಮಾಡಿ ಸಾಕ್ಷಾತ್ಕರಿಸಿರುತ್ತಾನೆ. ಸಾಮಾನ್ಯರಿಗೆ ಈ ಗ್ರಾಹ್ಯ ಗ್ರಾಹಕಗಳಿರುವ ಐಕ್ಯವು ತಿಳಿಯುವುದಿಲ್ಲ.

ವಿಶ್ವಕ್ಕೆ ಚಿತ್ತೇ ಕಾರಣವೆಂದರೆ ಅದಕ್ಕೆ ಉಪಾದಾನ ಕಾರಣ ವಾವುದು ನಿಮಿತ್ತ ಕಾರಣವಾವುದು ಎಂಬ ಭೇದವಾದಿಗಳ ಶಂಕೆಯ ನಿವೃತ್ತಿಗಾಗಿ ಈ ಎರಡನೆಯ ಸೂತ್ರವು ಹೊರಟಿದೆ.

ಸ್ವೇಚ್ಛಯಾ ಸ್ವಭಿತ್ತೌ ವಿಶ್ವಮುನ್ಮೀಲಯತಿ ॥ ೨ ॥

ಈಶ್ವರನು ತನ್ನ ಇಚ್ಛೆಯಿಂದಲೇ ಎಲ್ಲಕ್ಕೂ ಆಧಾರವಾಗಿರುವ ತನ್ನಲ್ಲಿಯೇ ವಿಶ್ವವನ್ನು ಪ್ರಕಾಶಪಡಿಸುತ್ತಾನೆ.

ಆಧೇಯವಾಗಿರುವ ವಿಶ್ವವೂ ಆಧಾರವಾಗಿರುವ ಚಿತ್ತೂ ಮೂಲ ರೂಪದಲ್ಲಿ ಒಂದೇ ಆಗಿರುತ್ತದೆ. ವಿಶ್ವಸೃಷ್ಟಿಗೆ ಉಪಾದಾನ ಕಾರಣವು ಬೇರೆಯಿಲ್ಲ. ಈಶ್ವರನು ತನ್ನ ಇಚ್ಛೆಯಿಂದಲೇ ತನ್ನಲ್ಲಿಯೇ ವಿಶ್ವವನ್ನು ಹೊರಹೊಮ್ಮಿಸಿರುತ್ತಾನೆ. ಈಶ್ವರನು ಸರ್ವಸ್ವತಂತ್ರ ವಾಗಿರೋಣದರಿಂದ ಸೃಷ್ಟಿ ಸಂಹಾರಾದಿಗಳಿಗೆ ಭೇದವಾದಿಗಳು ಹೇಳು ವಂತೆ ಇತರ ಕಾರಣಗಳ ಅಪೇಕ್ಷೆಯಿಲ್ಲ. ಈ ವಿಷಯವನ್ನು ದೃಷ್ಟಾಂತ ದಿಂದಲೂ ವಿವರಿಸಬಹುದು. ಸ್ವಚ್ಛವಾದ ಕನ್ನಡಿಯಲ್ಲಿ ಕನ್ನಡಿಗಿಂತ ಬೇರೆಯಾಗಿಯೂ ದೊಡ್ಡದಾಗಿಯೂ ಇರುವ ಪದಾರ್ಥಗಳು ಪ್ರತಿ ಫಲಿಸುತ್ತವೆ. ಎಷ್ಟು ಪದಾರ್ಥಗಳು ಪ್ರತಿಫಲಿಸಿದರೂ ಕನ್ನಡಿಯಲ್ಲಿ ಯಾವ ವ್ಯತ್ಯಾಸವೂ ಉಂಟಾಗುವುದಿಲ್ಲ. ಪ್ರತಿಫಲನದಲ್ಲಿ ಯಾವ ವಿಕಾರಗಳೂ ಬರುವುದಿಲ್ಲ. ಕನ್ನಡಿಯು ತನ್ನ ಸ್ವರೂಪದಿಂದಲೇ ಇರುತ್ತದೆ. ಇದೇ ರೀತಿಯಾಗಿ ಚಿದ್ರೂಪಿಯಾದ ಪರಶಿವನು ತನ್ನ ಸಂಕಲ್ಪದಿಂದ ಅನೇಕ ಭೇದಗಳನ್ನೊಳಗೊಂಡಿರುವ ವಿಶ್ವವನ್ನು ಹೊರ ಹೊಮ್ಮಿಸಿದ್ದರೂ ಆತನ ಪರಿಪೂರ್ಣತೆಗೂ ಸ್ವಾತಂತ್ರ್ಯತೆಗೂ ಚ್ಯುತಿ ಯಿಲ್ಲ. ತಾನು ನಿರ್ವಿಕಾರನಾಗಿಯೇ ಇದ್ದು ಸವಿಕಾರವಾದ ಈ ವಿಶ್ವ ವ್ಯಾಪಾರಗಳಿಗೆಲ್ಲಕ್ಕೂ ಆಶ್ರಯನಾಗಿರುತ್ತಾನೆ.

## ವಿಶ್ವದ ಸ್ವರೂಪ

**ತನ್ನಾನಾ ಅನುರೂಪ ಗ್ರಾಹ್ಯ ಗ್ರಾಹಕ ಭೇದಾತ್ ॥ ೩ ॥**

ಈ ವಿಶ್ವವು ಪರಸ್ಪರ ಉಚಿತವಾದ ಅಥವಾ ಅನುರೂಪವಾದ ಸ್ಥಿತಿಯನ್ನೊಳಗೊಂಡ ಗ್ರಾಹ್ಯ ಗ್ರಾಹಕರ ಭೇದದಿಂದ ಅನೇಕ ಪ್ರಕಾರವಾಗಿದೆ.

ಮಹಾಚಿತ್ತು ತನ್ನ ಸ್ವಾತಂತ್ರ್ಯ ಶಕ್ತಿಯಿಂದಲೇ ಮೂವತ್ತಾರು ತತ್ವಗಳ ರೂಪವಾಗಿಯೂ ಏಳು ಪ್ರಮಾತೃಗಳ ರೂಪವಾಗಿಯೂ ದ್ವಿಮುಖವಾಗಿ ಪ್ರಕಾಶಪಡಿಸಿಕೊಂಡಿದೆ. ಶಿವತತ್ವದಿಂದ ಪೃಥ್ವೀ ತತ್ವದವರೆಗೂ ಮೂವತ್ತಾರು ತತ್ವಗಳು ಪರಿಗಣಿತವಾಗಿವೆ. ಮೊದಲನೆಯ ಮತ್ತು ಎರಡನೆಯದಾದ ಶಿವ ಮತ್ತು ಶಕ್ತಿ ತತ್ವಗಳಲ್ಲಿ ಗ್ರಾಹ್ಯ ಗ್ರಾಹಕ ಭೇದಗಳು ರೂಪುಗೊಂಡಿರುವುದಿಲ್ಲ. ಉಳಿದ ಮೂವತ್ತುನಾಲ್ಕು ತತ್ವಗಳಲ್ಲಿ ಆಯಾ ಅಂತಸ್ತಿಗೆ ತಕ್ಕಹಾಗೆ ಗ್ರಾಹ್ಯ ಗ್ರಾಹಕ ಭೇದಗಳಿರುತ್ತವೆ.

**ಮೂವತ್ತಾರು ತತ್ವಗಳು ಗ್ರಾಹ್ಯಗಳು.** ತತ್ ಎಂದರೆ ಅದು. ತತ್ವ ಎಂದರೆ ಅದರ ಭಾವ. ಈ ವಿಶ್ವ ಸೃಷ್ಟಿಯಲ್ಲಿ ಮುಖ್ಯವಾದ ವಿಭಾಗವನ್ನು ಪಡೆದು ಒಂದು ನಿಶ್ಚಿತವಾದ ರೂಪದಲ್ಲಿ ಪ್ರಳಯಕಾಲದವರೆಗೂ ಇದ್ದು ಪ್ರಾಣಿಗಳ ಸುಖ ದುಃಖಗಳಿಗೆ ಕಾರಣವಾಗಿರುವ ಒಂದು ವಿಭಾಗದ ಸ್ಥಿತಿಗೆ ತತ್ವವೆಂದು ಹೆಸರು. ಪೃಥ್ವೀ ಮೊದಲಾದ ಇಂತಹ ತತ್ವಗಳು ವಿಶ್ವದ ವ್ಯವಹಾರಗಳಿಗೆ ಕಾರಣವಾಗಿದ್ದರೂ ಪ್ರಳಯಕಾಲದವರೆಗೂ ತಮ್ಮ ವ್ಯಕ್ತಿತ್ವವನ್ನು ಉಳಿಸಿಕೊಂಡಿರುತ್ತವೆ.

**ಸಪ್ತ ಪ್ರಮಾತೃಗಳು ಗ್ರಾಹಕಗಳು.** ಪ್ರಮಾತೃವೆಂದರೆ ಅಭೇದಾವಸ್ಥೆಯಲ್ಲಿ ಶುದ್ಧ ಚಿತ್ತಾಗಿದ್ದು ಚಿದ್ರೂಪದಲ್ಲಿದ್ದ ಶಿವನೇ ಮೂವತ್ತಾರು ತತ್ವಗಳ ರೂಪದಲ್ಲಿ ಮೆಟ್ಟಲು ಮೆಟ್ಟಲಾಗಿ ತಿಳಿಯಲ್ಪಡುವ ಸ್ಥಿತಿಯನ್ನು ಅಂದರೆ ಗ್ರಾಹ್ಯತ್ವವನ್ನು ಪಡೆದಿರುವಂತೆ ಆ ತತ್ವಗಳ ವಿಸ್ತಾರ ವೈಶಿಷ್ಟ್ಯ ಸ್ವರೂಪಗಳಿಗನುಸಾರವಾದ ಗ್ರಾಹಕತ್ವವನ್ನು ಪಡೆಯುವಿಕೆ.

ಪ್ರಕೃತದಲ್ಲಿ ಪ್ರಮಾ ಎಂದರೆ ಸ್ವಚ್ಛವಾದ ತಿಳಿವಳಿಕೆ. ಈ ತಿಳಿವಳಿಕೆಯಿಂದ ನಾವು ಒಂದು ಪದಾರ್ಥವನ್ನು ಇಷ್ಟು ಎಂದು ನಿರ್ಣಯಿಸುತ್ತೇವೆ. ಈ ತಿಳಿವಳಿಕೆಯು ಇತರ ಪದಾರ್ಥಗಳ ಪರಿಮಿತಿಯನ್ನು ತೋರಿಸುತ್ತದೆ. ಮತ್ತು ತನ್ನ ಸ್ವರೂಪವನ್ನು ತೋರ್ಪಡಿಸಿಕೊಳ್ಳುತ್ತದೆ. ತಿಳಿವಳಿಕೆಯನ್ನು ತಿಳಿಯುವುದಕ್ಕೆ ಬೇರೆ ತಿಳಿವಳಿಕೆ ಬೇಕಾಗಿಲ್ಲ. ಇಂತಹ ಸ್ವಯಂಪ್ರಕಾಶವಾದ ತಿಳಿವಳಿಕೆಶಕ್ತಿ ಇರುವವನಿಗೆ ಪ್ರಮಾತೃವೆಂದು ಹೆಸರು. ಇವನೇ ಗ್ರಾಹಕ.

ಪ್ರಮಾತೃಗಳು ಏಳು ಬಗೆಯಾಗಿರುವುವು. ಸದಾ ಪರಮಾನಂದಮಯನಾಗಿರುವ ತತ್ವಾತೀತನಾದ ಪರಮಶಿವನು ಬೇರೆಯಿದ್ದಾನೆ. ತತ್ವಗಳಿಗೆ ಕಾರಣವಾದ ಮೊದಲನೆ ತತ್ವವಾದ ಶಿವತತ್ವ ಸ್ಥಿತಿಯಲ್ಲಿರುವವನು ಗ್ರಾಹ್ಯಗ್ರಾಹಕ ಭೇದಗಳಿಲ್ಲದೆ ಅಲೆಗಳಿಲ್ಲದ ಸಮುದ್ರದಂತೆ ಪ್ರಶಾಂತವಾದ ಸ್ಥಿತಿಯಲ್ಲಿ ಚಿನ್ಮಯನಾಗಿರುತ್ತಾನೆ. ಇವನಿಗೆ **ಶಿವನೆಂದು** ಹೆಸರು. ಈ ಶಿವಸ್ಥಿತಿಯೇ ಮೊದಲನೆಯ ತತ್ವ. ಈ ಶಿವನಲ್ಲಿರುವ ಸ್ವಾತಂತ್ರ್ಯಶಕ್ತಿಯು ಸ್ಫುರಿಸಿದಾಗ ಶಕ್ತಿ ಎನ್ನಿಸಿಕೊಳ್ಳುತ್ತದೆ. ಈ ಶಕ್ತಿಯು ಚಿಚ್ಛಕ್ತಿ, ಆನಂದಶಕ್ತಿ, ಇಚ್ಛಾಜ್ಞಾನಕ್ರಿಯಾಶಕ್ತಿಗಳೆಂಬ ವಿಭಾಗವುಳ್ಳದ್ದಾಗಿದೆ. ಇವುಗಳಲ್ಲಿ ಚಿಚ್ಛಕ್ತಿ ಆನಂದಶಕ್ತಿಗಳು ಸ್ವರೂಪನಿರೂಪಕಗಳಾಗಿರುತ್ತವೆ; ಅಂದರೆ ಅವು ವ್ಯತ್ಯಾಸವನ್ನು ಪಡೆಯುವುದಿಲ್ಲ. ಇಚ್ಛಾಜ್ಞಾನ ಕ್ರಿಯಾಶಕ್ತಿಗಳು ಮಹಾಸಮುದ್ರದಲ್ಲಿ ಚಿಕ್ಕ ಅಲೆಗಳುಂಟಾಗುವಂತೆ ಈಷಚ್ಚಲನ ರೂಪವಾದ ಸ್ಥಿತಿಯನ್ನು ಪಡೆಯುತ್ತಿರುತ್ತವೆ. ಈ ಶಕ್ತಿಗಳ ವಿಸ್ತಾರವೇ ಮುಂದಿನ ತತ್ವಪ್ರಪಂಚ. ಎರಡನೆಯದಾದ ಈ ಶಕ್ತಿತತ್ವದ ಸ್ಥಿತಿಯಲ್ಲಿಯೂ ಗ್ರಾಹ್ಯಗ್ರಾಹಕ ಭೇದಗಳಿಗೆ ಅವಕಾಶವಿಲ್ಲ.

ಇದರ ಮುಂದಿನ ಮೆಟ್ಟಲಾದ **ಸದಾಶಿವತತ್ವ**ಸ್ಥಿತಿಯಲ್ಲಿ ತಿಳಿಯುವ ಮತ್ತು ತಿಳಿಯಲ್ಪಡುವ ವ್ಯತ್ಯಾಸಗಳು ತಲೆದೋರುತ್ತವೆ. ತಿಳಿಯು ವಂಥಾ ಅಂಶಕ್ಕೆ **ಅಹಂತಾ** ಎಂದು ಹೆಸರು. ತಿಳಿಯಲ್ಪಡುವ ಅಂಶಕ್ಕೆ **ಇದಂತಾ** ಎಂದು ಹೆಸರು. ಈ ರೀತಿಯಾದ ವ್ಯತ್ಯಾಸ ಗಳನ್ನು ಗ್ರಾಹಕ ಗ್ರಾಹ್ಯಭಾವವೆಂದು ವ್ಯವಹರಿಸುತ್ತೇವೆ. "ಅಹಂತಾ" ಎನ್ನುವುದೇ "ನಾನು" ಅಂತ ಎನ್ನಿಸಿಕೊಳ್ಳುವುದು. "ಇದಂತಾ" ಎನ್ನುವುದೇ "ಇದು" ಅಂತ ಕರೆಯಿಸಿಕೊಳ್ಳುವುದು. ಮೂರನೆಯದಾದ ಸದಾಶಿವ ತತ್ವದಲ್ಲಿ "ಅಹಂತಾ" "ಇದಂತಾ" ವ್ಯತ್ಯಾಸಗಳು ತಲೆದೋರಿದರೂ ಗ್ರಾಹಕಾಂಶವು ಪ್ರಧಾನವಾಗಿ ಗ್ರಾಹ್ಯಾಂಶವು ಬಹಳ ಕಡಿಮೆ ಪ್ರಮಾಣದಲ್ಲಿದ್ದು ಗೌಣವಾಗಿರುತ್ತದೆ. ಗ್ರಾಹ್ಯಾಂಶವು ಗೌಣವಾಗಿ ಗ್ರಾಹಕತ್ವವೇ ಪ್ರಧಾನವಾಗಿರುವುದರಿಂದ ಈ ಸದಾಶಿವ ತತ್ವದಲ್ಲಿ ತಿಳಿಯುವವರಿಗೆ **ಮಂತ್ರಮಹೇಶ್ವರ**ರೆಂದು ಹೆಸರು. ಪರಶಿವನು ತನ್ನ ಇಚ್ಛೆಯಿಂದಲೇ ಗ್ರಾಹಕ ವರ್ಗವನ್ನು ಆಯಾಯ ಸ್ಥಿತಿಗತಿಗಳಿಗನುಸಾರವಾಗಿ ಕಲ್ಪಿಸಿರುತ್ತಾನೆ.

ನಾಲ್ಕನೆಯದಾದ **ಈಶ್ವರ ತತ್ವ**ದಲ್ಲಿ ಗ್ರಾಹ್ಯಾಂಶವೂ ಗ್ರಾಹ ಕಾಂಶವೂ ಸಮಾನವಾಗಿ ಸ್ಫುಟವಾಗಿರುವುದರಿಂದ ಇಲ್ಲಿನ ಪ್ರಮಾತೃ ವರ್ಗಕ್ಕೆ **ಮಂತ್ರೇಶ್ವರ**ರೆಂದು ಹೆಸರು. ಐದನೆಯದಾದ **ವಿದ್ಯಾತತ್ವ** ದಲ್ಲಿ ಅನಂತರೂಪಿಯಾಗಿರುವ ಶಿವನ ಸಂಕಲ್ಪದಿಂದ ಹೊರ ಹೊಮ್ಮಿರುವ ಅನೇಕ ಭೇದಗಳು ಮತ್ತು ಅವಾಂತರ ಭೇದಗಳನ್ನೊಳ ಗೊಂಡ ಭೇದಪ್ರಧಾನವಾದ ವಿಶ್ವವೇ ಗ್ರಾಹ್ಯವಾಗಿರುತ್ತದೆ. ಇದ ಕ್ಕನುಸಾರವಾಗಿ ಉತ್ಪನ್ನರಾಗಿರುವ ಅಸಂಖ್ಯಾತರಾದ ಪ್ರಮಾತೃಗಳು **ಮಂತ್ರ**ರೆಂದೆನಿಸಿಕೊಳ್ಳುತ್ತಾರೆ. ಈ ಪ್ರಮಾತೃ ವರ್ಗಕ್ಕೆ ವಿಶ್ವವೆಲ್ಲಾ

ಗ್ರಾಹ್ಯ (ಪ್ರಮೇಯ)ವಾಗಿರುತ್ತದೆ. ಈ ಐದು ತತ್ವಗಳು ಶುದ್ಧ ವಿದ್ಯಾತತ್ವಗಳು. ಇವುಗಳನ್ನು ಶುದ್ಧಾಧ್ವವೆಂದೂ ಇವುಗಳಿಂದ ಮುಂದಕ್ಕಿರುವ ತತ್ವಗಳನ್ನು ಕೃಚ್ಛ್ರಾಧ್ವ, ಮಾಯಾಧ್ವ, ಅಶುದ್ಧಾಧ್ವವೆಂದೂ ಕರೆಯುತ್ತಾರೆ.

ಶುದ್ಧ ವಿದ್ಯಾತತ್ವಕ್ಕೆ ಕೆಳಗೆ ಮಾಯಾತತ್ವಕ್ಕೆ ಮೇಲೆ ಒಂದು ಅಂತರ ಪರಿಸ್ಥಿತಿಯಿದೆ. ಇಲ್ಲಿರುವ ಪ್ರಮಾತೃ ವರ್ಗಕ್ಕೆ ವಿಜ್ಞಾನಾಕಲರೆಂದು ಹೆಸರು. ಇವರಿಗೆ ಶುದ್ಧವಾದ ಜ್ಞಾನವಿರುತ್ತದೆ; ಕರ್ತೃತ್ವವಿಲ್ಲ. ಪೂರ್ವದಲ್ಲಿ ಇವರಿಗೆ ಪರಿಚಿತರಾಗಿದ್ದ "ಸಕಲಾ" ಪ್ರಮಾತ್ರಾವಸ್ಥೆಯಲ್ಲಿಯೂ ಪ್ರಳಯಾ ಕಲಾತ್ಮಕಾವಸ್ಥೆಯಲ್ಲಿಯೂ ಪ್ರಮೇಯವಾಗಿದ್ದ ವಿಶ್ವವು ಇವರಿಗೆ ಅಭಿನ್ನವಾಗಿ ಈಗಲೂ ಗ್ರಾಹ್ಯವಾಗಿರುತ್ತದೆ. ಅಂದರೆ ಈ ಸ್ಥಿತಿಯಲ್ಲಿ ಕರ್ತೃತ್ವವಿಲ್ಲದಿದ್ದರೂ ಶುದ್ಧವಾದ ಜ್ಞಾನವುಳ್ಳವರಾಗಿದ್ದರೂ ಬದ್ಧಾವಸ್ಥೆಯಿಂದ ಉನ್ನತಿಯನ್ನು ಪಡೆಯುತ್ತಾ ಬಂದಿರುವುದರಿಂದ ಹಿಂದಿನ ಅವಸ್ಥೆಯಲ್ಲಿ ಪರಿಚಿತವಾಗಿದ್ದ ವಿಶ್ವವು ಪ್ರಮೇಯವಾಗಿರುತ್ತದೆ.

ಮಾಯಾಧ್ವದಲ್ಲಿರುವ ಪ್ರಮಾತೃಗಳಿಗೆ ಪ್ರಳಯಾಕಲರೆಂದೂ ಶೂನ್ಯ ಪ್ರಮಾತೃಗಳೆಂದೂ ಹೆಸರು. ಇಲ್ಲಿ ಜ್ಞಾನವು ತಿಳಿಯಾಗಿರುವುದಿಲ್ಲ. ಹಾಲು ಮೊಸರಾಗುವುದಕ್ಕೆ ಮುಂಚೆ ಹಾಲಿನವಸ್ಥೆಯನ್ನು ಬಿಟ್ಟು ಮಧ್ಯ ಸ್ಥಿತಿಯಲ್ಲಿ ಪರಿಣಾಮವನ್ನು ಪಡೆಯುತ್ತಿರುವಂತೆ ತತ್ವಗಳೂ ಪರಿಣಾಮವನ್ನು ಹೊಂದುತ್ತಿರುತ್ತವೆ. ಆ ತತ್ವಗಳೇ ಇವನಿಗೆ ಗ್ರಾಹ್ಯಗಳಾಗಿರುತ್ತವೆ. ಈರೀತಿ ಗ್ರಾಹಕನಾಗಿರುವುದರಿಂದ ಇವನು ಶೂನ್ಯನಾಗಿದ್ದಾನೆ. ಈ ಸ್ಥಿತಿಯಲ್ಲಿ ಸುಖ ದುಃಖಗಳಿಲ್ಲ. ಜ್ಞಾನವು ಸ್ವಚ್ಛವಾಗಿಲ್ಲದಿರುವುದರಿಂದ ಇವನಿಗೆ ಗ್ರಾಹ್ಯವಾಗಿರುವ ವಿಶ್ವವು ಮಂಕಾಗಿರುತ್ತದೆ.

ಮಾಯಾ ತತ್ವದಿಂದ ಪೃಥ್ವೀ ತತ್ವದವರೆಗಿರುವ ಪ್ರಮಾತೃಗಳು ಬೇರೆ ಬೇರೆಯಾಗಿರುತ್ತಾರೆ ಮತ್ತು ಸಂಕುಚಿತ ಶಕ್ತಿಯುಳ್ಳವರಾಗಿರುತ್ತಾರೆ. ಬದ್ಧಾವಸ್ಥೆಯಲ್ಲಿ ಉಪಕರಣಗಳಾಗಿರುವ ಅಹಂಕಾರ, ಬುದ್ಧಿ, ಮನಸ್ಸು, ಇಂದ್ರಿಯಗಳು ಇವುಗಳಿಂದ ಕೂಡಿರುವುದರಿಂದಲೂ ಶಕ್ತಿ ಸಂಕುಚಿತವಾಗಿರುವುದರಿಂದಲೂ ಈ ವಿಶ್ವವನ್ನು ಭೇದ ದೃಷ್ಟಿಯಿಂದಲೇ ತಿಳಿಯುವವರಾಗಿರುತ್ತಾರೆ. ಇವರಿಗೆ ಸಕಲರೆಂದು ಹೆಸರು. ಹೀಗೆ ಮೂವತ್ತಾರು ತತ್ವಗಳಲ್ಲಿ ಶುದ್ಧ ವಿದ್ಯೆಯ ಐದು ತತ್ವಗಳಲ್ಲಿ ಮೂರು ಪ್ರಮಾತೃಗಳೂ (ಮಂತ್ರಮಹೇಶ್ವರ, ಮಂತ್ರೇಶ್ವರ, ಮಂತ್ರ) ಶುದ್ಧ ವಿದ್ಯೆಯ ಕೆಳಗೆ ಮಾಯೆಯಮೇಲೆ ಒಂದು ಪ್ರಮಾತೃವರ್ಗವೂ (ವಿಜ್ಞಾನಾ ಕಲಾ) ಮಾಯಾಪದದಲ್ಲಿ ಒಂದು ಪ್ರಮಾತೃವರ್ಗವೂ (ಪ್ರಳಯಾ ಕಲಾ) ಮಾಯೆಯಿಂದ ಪೃಥ್ವೀವರೆಗೂ ಇರುವ ತತ್ವ ರಾಶಿಗಳಲ್ಲಿ ಒಂದು ಪ್ರಮಾತೃ ವರ್ಗವೂ (ಸಕಲಾ) ಇವುಗಳ ಜೊತೆಗೆ ಶಿವನೂ ಸೇರಿದರೆ ಸಪ್ತ ಪ್ರಮಾತೃಗಳಾಗುತ್ತಾರೆ. ತಾತ್ವಿಕವಾಗಿ ಚಿದ್ರೂಪಿಯಾಗಿರುವ ಏಳು ಪ್ರಮಾತೃಗಳಾಗುತ್ತಾರೆ. ತಾತ್ವಿಕವಾಗಿ ಚಿದ್ರೂಪಿಯಾಗಿರುವ ಏಳು ಪ್ರಮಾತೃವರ್ಗವನ್ನು ಇಲ್ಲಿ ವಿಶದಪಡಿಸಿರುವುದು ಸಾಧನಾಭ್ಯಾಸಿಗಳಿಗೆ ಜ್ಞಾಪಕಾರ್ಥವಾಗಿರುತ್ತದೆ. ಬದ್ಧಾವಸ್ಥೆಯಲ್ಲಿರುವವನು ತನ್ನ ಸ್ವಸ್ವರೂಪವನ್ನು ಅನುಸಂಧಾನಮಾಡುತ್ತಾ "ಸಕಲಾ" "ಪ್ರಳಯಾ ಕಲಾ" ವಿಜ್ಞಾನಾ ಕಲಾ" ಈ ಮೂರು ಅಂತಸ್ತುಗಳನ್ನು ದಾಟಿ ಮಂತ್ರ, ಮಂತ್ರೇಶ್ವರ, ಮಂತ್ರಮಹೇಶ್ವರ, ಶಿವ ಎಂಬ ಈ ಅಂತಸ್ತುಗಳನ್ನು ಮೆಟ್ಟಲು ಮೆಟ್ಟಲಾಗಿ ನಡೆಯುತ್ತಾ ಸ್ವರೂಪ ವಿಕಾಸವನ್ನು ಹೊಂದುವುದಕ್ಕೆ ಪೂರ್ಣಾಹಂ ವಿಮರ್ಶೆ ಎನ್ನುವುದು. ಆ ಪರಮಶಿವನಿಗೆ ೩೬ ತತ್ವಗಳಿಗೆ ಆಚೆ ಇರುವ ವಿಶ್ವೋತ್ತೀರ್ಣ ಸ್ಥಿತಿಯೂ ೩೬ ತತ್ವಗಳ ರೂಪವಾದ ವಿಶ್ವಾತ್ಮಕ

ಸ್ಥಿತಿಯೂ ಇದೆ. ಆ ಪರಮಾನಂದಮಯ ಪ್ರಕಾಶೈಕ ಘನರೂಪವಾಗಿರುವ ಆ ಪರಮಶಿವನಿಗೆ ಶಿವತತ್ವದಿಂದ ಭೂಮಿಯವರೆಗೂ ಇರುವ ವಿಶ್ವವೆಲ್ಲಾ ಅಭಿನ್ನವಾಗಿಯೇ ಸ್ಫುರಿಸುತ್ತದೆ. ಆ ಪರಮಶಿವ ಭಟ್ಟಾರಕನೇ ವಿಶ್ವಾತ್ಮಕನಾಗಿ ಅನೇಕ ರೂಪಗಳಿಂದಲೂ ವಿಶ್ವಾತೀತನಾಗಿ ಪರಮಾನಂದಮಯನಾಗಿಯೂ ಅನೇಕ ಬಗೆಯಾದ ವಿಚಿತ್ರ ರೂಪಗಳಿಂದ ಸ್ಫುರಿಸುತ್ತಾ ವಸ್ತುತಃ ಗ್ರಾಹ್ಯ ಗ್ರಾಹಕ ಭೇದಗಳಿಲ್ಲದವನಾಗಿರುತ್ತಾನೆ.

ಚಿತಿ ಸಂಕೋಚಾತ್ಮಾ ಚೇತನೋಽಪಿ ಸಂಕುಚಿತ
ವಿಶ್ವಮಯಃ ॥ ೪ ॥

ಯಾವ ರೀತಿಯಾಗಿ ಪರಮೇಶ್ವರನು ವಿಶ್ವಶರೀರಿಯಾಗಿದ್ದಾನೆಯೋ ಅದೇ ರೀತಿಯಾಗಿ ಸಂಕುಚಿತವಾದ ಚಿತ್ಸ್ವರೂಪವುಳ್ಳವನಾಗಿರುವ ಜೀವನೂ ಸಂಕುಚಿತ ವಿಶ್ವಮಯನಾಗಿದ್ದಾನೆ.

ಪರಮಶಿವನು ತನ್ನಲ್ಲಿಯೇ ಅಭಿನ್ನವಾಗಿದ್ದ ವಿಶ್ವವನ್ನು ಸದಾಶಿವಾದಿ ಉಚಿತವಾದ ರೂಪದಿಂದ ಪ್ರಕಾಶಪಡಿಸುವುದಕ್ಕೆ ಸಂಕಲ್ಪಿಸಿ ಮೊದಲು ಚಿದೈಕ್ಯ ಅಖ್ಯಾತಿಮಯವಾದ ಅನಾಶ್ರಿತ ಶಿವರೂಪಿಯಾಗಿ ಶೂನ್ಯಾತಿ ಶೂನ್ಯಾತ್ಮಕನಾಗಿ ಪ್ರಕಾಶರೂಪಿಯಾಗಿಯೇ ಸ್ಫುರಿಸುತ್ತಾನೆ. ಅಂದರೆ ಶಿವನು ಮೊದಲು ಶುದ್ಧ ಚಿನ್ಮಯನಾಗಿ ಸ್ವಯಂಪ್ರಕಾಶನಾಗಿರುತ್ತಾನೆ. ಅನಂತರ ತನ್ನ ಸಂಕಲ್ಪದಿಂದ ಸಪ್ತಪ್ರಮಾತೃಗಳನ್ನೂ ಮೂವತ್ತಾರು ತತ್ವಗಳನ್ನೂ ಸೃಷ್ಟಿಸುವುದಕ್ಕೆ ಪೂರ್ವದಲ್ಲಿ ಈ ಸೃಷ್ಟಿಗೆ ಕಾರಣವಾಗಿರುವ ಅಖ್ಯಾತಿ

ಯನ್ನು ತೋರ್ಪಡಿಸಿಕೊಳ್ಳುತ್ತಾನೆ. ಅಖ್ಯಾತಿ ಎಂದರೆ ಎರಡು ಪದಾರ್ಥಗಳನ್ನು ಒಂದು ಎಂದು ತಿಳಿಯುವುದು ಒಂದು ಬಗೆ, ಒಂದು ಪದಾರ್ಥ ಅಥವಾ ತತ್ವವನ್ನು ಬೇರೆ ಬೇರೆಯೆಂದು ತಿಳಿಯುವುದು ಇನ್ನೊಂದು ಬಗೆ. ಇಲ್ಲಿ ಅಭಿನ್ನವಾದ ಚಿನ್ಮಯನು ಅನಂತವಾದ ವಿಶ್ವ ಭೇದ ಜ್ಞಾನಗಳನ್ನು ಅಂಗೀಕರಿಸುವಿಕೆಯೇ ಅಖ್ಯಾತಿ. ವಿಶ್ವಸೃಷ್ಟಿಗೆ ಅಖ್ಯಾತಿಯೂ ಒಂದು ಕಾರಣ. ಶಿವನು ವಿಶ್ವಾತ್ಮಕನಾಗುವುದಕ್ಕೆ ಮೊದಲು ವಿಶ್ವಾತೀತ ಸ್ಥಿತಿಯಲ್ಲಿದ್ದು ವಿಶ್ವಸೃಷ್ಟಿಗೆ ಸಂಕಲ್ಪಿಸಿ ಅಖ್ಯಾತಿ ಮಯನಾಗುತ್ತಾನೆ. ಇಲ್ಲಿನ ಅಖ್ಯಾತಿ ಜ್ಞಾನಪ್ರಕಾರವಾಗಿರುವುದು ಅಂದರೆ ಚಿದೈಕ್ಯರೂಪವಾಗಿಯೇ ಇರುವುದು. ಅಭಿನ್ನವಾದ ಚಿತ್ತು ಭಿನ್ನವಾದ ಪ್ರಪಂಚವನ್ನು ಸೃಷ್ಟಿಮಾಡುವುದಕ್ಕೆ ಸಂಕಲ್ಪಮಾಡು ವಿಕೆಯೇ ಇಲ್ಲಿನ ಅಖ್ಯಾತಿ. ಈ ಸ್ಥಿತಿಯಲ್ಲಿ ಶಿವನಿಗೆ ಅನಾಶ್ರಿತ ಶಿವ ನೆಂದೂ ಶೂನ್ಯಾದಿ ಶೂನ್ಯಾತ್ಮಕನೆಂದೂ ಹೆಸರು. ಇಲ್ಲಿ ಶೂನ್ಯ ವೆಂದರೆ ಏನೂ ಇಲ್ಲದಿರುವಿಕೆಯಲ್ಲ. ನಾಮರೂಪಾದಿ ವಿಶೇಷಗಳು ಏರ್ಪಡದಿರುವ ಸ್ಥಿತಿ. 'ಇದು ಈಶ್ವರನ ವಿಷಯವಾಯಿತು.

ಖ್ಯಾತಿ ಎಂದರೆ ಜ್ಞಾನ, ತಿಳಿವಳಿಕೆ. ಅಖ್ಯಾತಿ ಎಂದರೆ ತಿಳಿ ವಳಿಕೆಯಿಲ್ಲದಿರುವಿಕೆ. ನನಗೆ ಈ ವಿಷಯದಲ್ಲಿ ತಿಳಿವಳಿಕೆಯಿಲ್ಲವೆಂಬ ತಿಳಿವಳಿಕೆಯೂ ತಿಳಿವಳಿಕೆಯಾಗಿರುತ್ತದೆ. ಜ್ಞಾನಾಭಾವರೂಪವಲ್ಲ.[1] ಮೊದಲು ಶುದ್ಧ ಚಿತ್ತಾಗಿದ್ದು ಅನಂತರ ಅಭಿನ್ನವಾಗಿರುವ ತತ್ವ ದಲ್ಲಿಯೇ ಅನಂತ ಭೇದಗಳುಳ್ಳ ವಿಶ್ವವನ್ನು ಸೃಷ್ಟಿಮಾಡಬೇಕೆಂದು ಸಂಕಲ್ಪಿಸಿರುವುದೇ ಅಖ್ಯಾತಿಯೆಂದು ಹೇಳಿದ್ದಾಯಿತು.

---

[1] ಅಖ್ಯಾತಿರ್ಯದಿನಖ್ಯಾತಿಃ ಖ್ಯಾತಿರೇವಾವ ಶಿಷ್ಯತೆ।
ಖ್ಯಾತಿಚೇತ್ ಖ್ಯಾತಿರೂಪತ್ವಾತ್ ಖ್ಯಾತಿರೇವಾವ ಶಿಷ್ಯತೆ॥

ಈ ಸೃಷ್ಟಿಕ್ರಮವು ಮೊದಲು ತತ್ವಗಳ ರೂಪವಾಗಿಯೂ ಪ್ರಮಾತೃಗಳ ರೂಪವಾಗಿಯೂ ನಡೆಯುತ್ತದೆ. ತತ್ವಗಳು ವಿಶದವಾಗಿ ರೂಪುಗೊಂಡು ಅನಂತರ ಪೃಥ್ವೀ ತೇಜಸ್ಸು ಮೊದಲಾದ ತತ್ವಗಳ ಸಮ್ಮೇಳನದಿಂದ ಅನೇಕ ಲೋಕಗಳು ನಿರ್ಮಾಣವಾಗುತ್ತವೆ. ಹಾಗೆಯೇ ಬಗೆಬಗೆಯಾದ ಪದಾರ್ಥಗಳು ಆಯಾ ಲೋಕಗಳಲ್ಲಿ ವಿಸ್ತಾರವಾಗಿ ನಿಷ್ಪನ್ನವಾಗುತ್ತವೆ. ಇವೆಲ್ಲಾ ಪ್ರಮೇಯಗಳೆನ್ನಿಸಿಕೊಳ್ಳುತ್ತವೆ. ಪ್ರಮೇಯಗಳು ಅಂದರೆ ತಿಳಿವಳಿಕೆಯಿಂದ ತಿಳಿಯಲ್ಪಡತಕ್ಕವುಗಳು. ಇವುಗಳನ್ನು ಗ್ರಾಹ್ಯಗಳೆಂದು ಕರೆಯುವುದುಂಟು. ಚಿದ್ರಸಪ್ರವಾಹರೂಪವಾಗಿ ಗೋಚರಿಸಿಕೊಂಡ ಪ್ರಮಾತೃಗಳು ಏಳು ಪ್ರಕಾರವಾಗಿ ಅನಂತ ಸಂಖ್ಯೆಯಲ್ಲಿ ಹೊರಹೊಮ್ಮುತ್ತಾರೆ.

"ವಿಗ್ರಹೋ ವಿಗ್ರಹೀ ಚೈವ ಸರ್ವ ವಿಗ್ರಹ ವಿಗ್ರಹೀ"

ಪರಮೇಶ್ವರನಿಗೂ ವಿಶ್ವಕ್ಕೂ ಶರೀರ ಶರೀರಿ ಭಾವವಿದೆ. ತ್ರಿಶಿರೋಮತದಲ್ಲಿ "ಭೂಮಿ, ನೀರು, ಬೆಂಕಿ ಮೊದಲಾದವುಗಳೆಲ್ಲ ದೇವತಾಸ್ವರೂಪಗಳು. ಅವು ನನ್ನ ಶರೀರವಾಗಿವೆ"[1] ಎಂದು ಶಿವನು ಪಾರ್ವತಿಗೆ ಹೇಳಿದ್ದಾನೆ. ಆಗಮುಗಳಲ್ಲಿ ಹೇಳಿರುವ ಯುಕ್ತಿಗಳಿಗನುಸಾರವಾಗಿ ಶಿವನು ಪ್ರಕಾಶರೂಪಿಯಾಗಿಯೂ ವಿಶ್ವಶರೀರಿಯಾಗಿಯೂ ಆಗಿದ್ದಾನೆ; ಕೇವಲ ಆ ಮಾಯಾಶಕ್ತಿಯಿಂದ ಸ್ವಸ್ವರೂಪವು ಅಭಿವ್ಯಕ್ತವಾಗದೆ ಇರುವುದರಿಂದ ಸಂಕುಚಿತವಾಗಿರುವ ಹಾಗೆ ತೋರುತ್ತಾನೆ. ವಿಚಾರ ಮಾಡಿದರೆ ಈ ಸಂಕೋಚವೂ ಕೂಡ ಚಿದೈಕಾತ್ಮಕವಾಗಿಯೇ

[1] ಸರ್ವದೇವಮಯಃಕಾಯಃ ತಂಚೇದಾನೀಂ ಶೃಣುಪ್ರಿಯೆ।
ಪೃಥವೀ ಕಠಿಣತ್ವೇನದ್ರವತ್ವೇಂಭಪ್ರಕೀರ್ತಿತಂ॥

ತೋರುತ್ತಿರುವುದರಿಂದ ಚಿನ್ಮಯನಾಗಿಯೇ ಇದ್ದಾನೆ. ಈ ದೃಷ್ಟಿಯಿಂದ ಎಲ್ಲಾ ಗ್ರಾಹಕರು ವಿಶ್ವ ಶರೀರಿಯಾದ ಶಿವರೂಪಿಗಳೇ ಆಗಿರುತ್ತಾರೆ.

ಜೀವನು ಸರ್ವಮಯನೆಂದೂ ಯಾವ ಶಬ್ದಾರ್ಥಗಳ ಮೂಲಕ ನಾವು ಯೋಚಿಸಿದರೂ ಶಿವನಿಲ್ಲದ ಅವಸ್ಥೆಯೇ ಇಲ್ಲವೆಂದೂ ಸ್ಪಂದ ಶಾಸ್ತ್ರಗಳಲ್ಲಿ ವಿವರಿಸಿ ಶಿವಜೀವರುಗಳಲ್ಲಿ ಭೇದವಿಲ್ಲವೆಂದು ಹೇಳಿರುತ್ತಾರೆ. ಈ ತತ್ವವನ್ನು ವಿಶದವಾಗಿ ತಿಳಿಯುವುದೇ ಮುಕ್ತಿ. ಹಾಗೆ ತಿಳಿಯದಿರುವಿಕೆಯೇ ಬಂಧ.

ವಿಕಲ್ಪಮಯನಾದ ಜೀವನು ಗ್ರಾಹಕನು. ಭೇದರೂಪವಾದ ವಿಕಲ್ಪಗಳು ಮನಸ್ಸಿನಿಂದುಂಟಾಗುವವುಗಳು. ಜೀವನಿಗೆ ವಿಕಲ್ಪಗಳನ್ನುಂಟುಮಾಡುವ ಮನಸ್ಸಿನ ಸಂಬಂಧವಿದ್ದರೆ ವಿಕಲ್ಪಗಳಿಲ್ಲದ ಚಿದ್ಘನನಾದ ಶಿವನಾಗುವುದು ಹೇಗೆ ಎಂಬ ಪ್ರಶ್ನೆಯು ಏಳುತ್ತದೆ. ಇದಕ್ಕೆ ಉತ್ತರವಾಗಿ

ಚಿತಿರೇವ ಚೇತನ ಪದಾದವರೂಢಾ
ಚೈತ್ಯ ಸಂಕೋಚಿನೀ ಚಿತ್ತಂ ॥ ೫ ॥

ಚಿತ್ತೇ ಅವರೋಹಣಕ್ರಮದಲ್ಲಿ ತನ್ನ ಚೇತನ ಸ್ಥಿತಿಯಿಂದಿಳಿದು ಬೇರೆ ಬೇರೆಯಾಗಿರುವ ಪದಾರ್ಥಗಳನ್ನು ತಿಳಿಯಪಡಿಸುವ ಸಂಕೋಚಾವಸ್ಥೆಯಿಂದ ಚಿತ್ತವಾಗುತ್ತದೆ.

ಚಿತ್ತು ಚಿತ್ತೇ. ಸ್ವಯಂ ಪ್ರಕಾಶಸ್ಥಿತಿಯಿಂದ ಪದಾರ್ಥಗಳನ್ನು ಸಂಗ್ರಹಿಸುವುದಕ್ಕೋಸ್ಕರ ಇಳಿದು ನೀಲ ಸುಖಾದಿ ರೂಪಗಳಾದ ಚೈತ್ಯ (ಪದಾರ್ಥ) ಸಂಕೋಚದಿಂದ ಅಂದರೆ ವಿಕಲ್ಪದಿಂದ ಚಿತ್ತ

ವಾಗಿದೆ. ಚಿತ್ತವೆಂಬುದು ಬೇರೆಯಲ್ಲ. ಆ ಭಗವತಿಯಾದ ಚಿತ್ತೀ ಸ್ವಸ್ವರೂಪವನ್ನು ಮರೆಸಿಕೊಂಡು ಸಂಕುಚಿತವಾದ ವಸ್ತುಗಳನ್ನು ಗ್ರಹಿಸಿದಾಗ ಎರಡು ಸ್ಥಿತಿಗಳನ್ನು ಪಡೆಯುತ್ತದೆ. ಚಿತ್ತು ಯಾವಾಗಲಾದರೂ ಒಂದು ಸಲ ಹೊರಹೊಮ್ಮಿರುವ ಸಂಕೋಚವನ್ನು ತಿರಸ್ಕರಿಸಿ ಚಿತ್ಪ್ರಾಧಾನ್ಯದಿಂದಲೇ ಸ್ಫುರಿಸುತ್ತದೆ. ಒಂದೊಂದು ಸಮಯದಲ್ಲಿ ಸಂಕುಚಿತವಾದ ಪದಾರ್ಥ ಜ್ಞಾನದಿಂದಲೇ ಪ್ರಕಾಶಿಸುತ್ತದೆ. ಚಿತ್ಪ್ರಾಧಾನ್ಯವಾಗಿರುವ ಸ್ಥಿತಿಯಲ್ಲಿ ಸಹಜವಾದ ಪ್ರಕಾಶಮಾತ್ರ ಪ್ರಧಾನವಾಗಿರುತ್ತಧೆ. ಹಾಗಿದ್ದರೆ ವಿಜ್ಞಾನಾಕಲತ್ವವೆಂಬ ಪ್ರಮಾತೃವಾಗುತ್ತಾನೆಂದು ತಿಳಿಯಬೇಕು. ಪ್ರಕಾಶ ಪರಾಮರ್ಶಮಾತ್ರ ಪ್ರಧಾನವಾಗಿದ್ದರೆ ವಿದ್ಯಾ ಪ್ರಮಾತೃತ್ವವೆಂದು ತಿಳಿಯಬೇಕು. ಅದರಲ್ಲಿಯೂ ಕ್ರಮವಾಗಿ ಸಂಕೋಚವು ಕ್ಷೀಣವಾದರೆ ಈಶ್ವರ, ಸದಾಶಿವ, ಅನಾಶ್ರಿತ ಶಿವಸ್ಥಿತಿಗಳೆಂದು ತಿಳಿಯಬೇಕು. ಸಮಾಧಿ ಪ್ರಯತ್ನದಿಂದ ಸಾಧಿಸಲ್ಪಟ್ಟ ಚಿದ್ಪ್ರಧಾನತ್ವವು ಶುದ್ಧಾಧ್ವ ಪ್ರಮಾತೃತ್ವವನ್ನು ಪಡೆದು ಕ್ರಮಕ್ರಮವಾಗಿ ತಿಳಿಯಾಗಿ ಮೇಲಕ್ಕೆ ಹೋಗುತ್ತದೆ. ಸಂಕೋಚವು ಪ್ರಧಾನವಾದರೆ ಶೂನ್ಯಾದಿ ಪ್ರಮಾತೃತ್ವವನ್ನು ಪಡೆಯುತ್ತದೆ. ಹೀಗಿರಲಾಗಿ **ಚಿತ್ತೀ ಸ್ವಸಂಕೋಚದಿಂದಲೂ ಗ್ರಾಹ್ಯ ವಿಷಯಗ್ರಹಣ ಸಂಕೋಚದಿಂದಲೂ ಚಿತ್ತಾವಸ್ಥೆಯನ್ನು ಪಡೆಯುತ್ತದೆ.** ಸ್ವತಂತ್ರವಾದ ಚಿಚ್ಛಕ್ತಿಯೇ ಜ್ಞಾನಕ್ರಿಯಾ ಮಾಯಾಶಕ್ತಿ ರೂಪವಾಗಿ ಪಶುದಶೆಯಲ್ಲಿ ಸಂಕೋಚದ ಏರಿಳಿತಗಳಿಂದ ಸತ್ವ ರಜಸ್ತಮ ಸ್ವಭಾವವಾದ ಚಿತ್ತರೂಪವಾಗಿ ಸ್ಫುರಿಸುತ್ತದೆ. ಇದರಿಂದ ವಿಕಲ್ಪ ದಶೆಯಲ್ಲಿಯೂ ಸ್ವಸ್ವರೂಪ ಅವಭಾಸವಿದೆ. ಪರಮಾರ್ಥಾನುಸಾರಿಗಳಿಗೆ ಇದು ತೋರುತ್ತಲೇ ಇರುತ್ತದೆ.

ಚಿತ್ತೇ ಸಂಕೋಚವನ್ನು ಪಡೆದು ಸಂಕುಚಿತವಾದ ಪದಾರ್ಥ ಜ್ಞಾನವನ್ನುಂಟುಮಾಡುತ್ತಿರುತ್ತದೆ. ನಮ್ಮ ಅನುಭವದಲ್ಲಿ ಆಲೋಚನೆಗಳು ಬಗೆಬಗೆಯಾಗಿ ಉಂಟಾಗುತ್ತಿರುತ್ತವೆ. ಮನಸ್ಸಿನ ಯೋಗ್ಯತೆಯು ಒಂದು ವಿಷಯವಾದ ನಂತರ ಇನ್ನೊಂದು ವಿಷಯವನ್ನು ಅನುಭವಿಸುವುದೇ ಆಗಿದೆ. ಹೀಗಿದ್ದರೂ ಒಂದೊಂದು ಸಮಯದಲ್ಲಿ ಮನಸ್ಸಿನಲ್ಲಿ ಯಾವ ವಿಧವಾದ ಭಾವನೆಗಳು ಇಲ್ಲದಿರುವಿಕೆಯೂ ಉಂಟು. ಸಾಮಾನ್ಯ ಜನಗಳಿಗೆ ಈ ಸ್ಥಿತಿಯು ಬಹಳ ಹೊತ್ತು ಇರಲಾರದು. ಆದರೂ ಮಿಂಚಿನಂತೆ ದೇಶ ಕಾಲ ಆಕಾರಗಳ ಸಂಬಂಧವಿಲ್ಲದೆ ತೋರುವ ಒಂದು ಸ್ಥಿತಿಯು ಎಲ್ಲರ ಅನುಭವದಲ್ಲಿದೆ. ಈ ನಿರ್ವಿಕಾರ ಸ್ಥಿತಿಯು ಸಾಮಾನ್ಯರಿಗೆ ಹೆಚ್ಚು ಅನುಭವಕ್ಕೆ ಬಾರದಿದ್ದರೂ ಅವರು ಅನುಭವಿಸುತ್ತಲೇ ಇರುತ್ತಾರೆ. ಸಾಧಕನು ಮನೋಭಾವಗಳಿಲ್ಲದ ನಿರ್ವಿಕಾರ ಸ್ಥಿತಿಯನ್ನು ಅನುಸಂಧಾನ ಮಾಡಿದರೆ ಸಹಜವಾದ ಚಿತ್ಪ್ರಧಾನವಾದ ಅವಸ್ಥೆಯೇ ಆಗುತ್ತದೆ. ಅನುಸಂಧಾನ ಕ್ರಮದಿಂದ ಚಿರಕಾಲ ಅಭ್ಯಾಸ ಮಾಡಿದರೆ ಈತನ ಏಕಾಗ್ರತೆಯು ದೃಢವಾಗಿ ಪ್ರಕಾಶ ಮಾತ್ರವೇ ಪ್ರಧಾನವಾದ ವಿಜ್ಞಾನಾಕಲತ್ವ ಪ್ರಾಪ್ತಿಯಾಗುತ್ತದೆ. ವಿಜ್ಞಾನಾಕಲತ್ವವೆಂದರೆ ಎಲ್ಲಾ ಮನೋಭಾವನೆಗಳೂ ಚಿತ್ತಿನಲ್ಲಿಯೇ ಅಡಗಿದ್ದರೂ ತನ್ನ ಭಾವನಾಬಲದಿಂದ ಚಿನ್ಮಾತ್ರವನ್ನೇ ಅನುಭವಿಸುತ್ತಿರುವ ಸ್ಥಿತಿ. ಕರ್ತೃತ್ವ ಭೋಕ್ತೃತ್ವಗಳು ರಾಗ ದ್ವೇಷಗಳು ಜೀವನನ್ನು ಕಾಡುತ್ತಿರುವಂತಹ ಗಡಿಬಿಡಿಯಲ್ಲಿಯೂ ತನ್ನ ಸ್ವಪ್ರಯತ್ನದಿಂದ ಅಂದರೆ ಭಾವನಾಬಲದಿಂದ ಎಷ್ಟುಹೊತ್ತು ಸಹಜಾವಸ್ಥೆಯನ್ನು ಹೊಂದುವನೋ ಅಷ್ಟುಹೊತ್ತು ವಿಜ್ಞಾನಾಕಲತ್ವವನ್ನು

ಅನುಭವಿಸುವನು. ಇದನ್ನು ಸಹಜಾವಸ್ಥೆಯೆಂದು ಕರೆಯುವುದೂ ಉಂಟು.

ಸಮಾಧಿ ಪ್ರಯತ್ನಗಳಿಂದ ಸಾಧಕನು ಮನಸ್ಸಿನ ಉಬ್ಬರವಿಳಿತಗಳನ್ನು ತಡೆದು ಚಿತ್ಪ್ರಧಾನವಾದ ಅನುಭವವನ್ನು ಅಭಿವೃದ್ಧಿಪಡಿಸಿಕೊಳ್ಳುತ್ತಾನೆ. ಇಂತಹ ಪ್ರಕಾಶಮಯವಾದ ಸ್ವಭಾವಸಿದ್ಧವಾದ ಸ್ವರೂಪಾನುಸಂಧಾನವೇ ಎಲ್ಲಾ ಸ್ಥಿತಿಯಲ್ಲಿಯೂ ಮುಂದುವರಿದರೆ ವಿದ್ಯಾಪ್ರಮಾತೃತ್ವ ಪ್ರಾಪ್ತಿಯಾಗುತ್ತದೆ. ಇದನ್ನೇ ಶುದ್ಧಾಧ್ವ ಪ್ರಮಾತೃತ್ವವೆಂತಲೂ ಪೂರ್ಣ ಪ್ರಮಾತೃತ್ವವೆಂತಲೂ ವ್ಯವಹರಿಸುತ್ತಾರೆ. ಇದರಿಂದ ಬದ್ಧಾವಸ್ಥೆಯಲ್ಲಿದ್ದರೂ ಜೀವನಿಗೆ ಒಳಗೆ ಜ್ಞಾನವಿಕಾಸವುಂಟಾಗುತ್ತದೆ. ಇವನ ಸಂಕೋಚವು ಇಂದ್ರಿಯಗಳು ಮನಸ್ಸು ಶರೀರ ಇವುಗಳ ಸಂಬಂಧದಿಂದ ಮಾತ್ರ ಅನುಭವಿಸತಕ್ಕದ್ದಾಗಿದ್ದರೂ ಸ್ವತಃ ವಿಕಾಸವನ್ನು ಪಡೆಯುವವನಾಗಿರುತ್ತಾನೆ. ಹೀಗೆಯೇ ಈ ಸಂಕೋಚವು ಕಡಿಮೆಯಾದರೆ ಈಶ, ಸದಾಶಿವ, ಅನಾಶ್ರಿತ ಶಿವ ಮುಂತಾದ ಶುದ್ಧ ವಿದ್ಯೆಯ ಕೊನೆಯ ಮೆಟ್ಟಲನ್ನು ಮುಟ್ಟುತ್ತಾನೆ. ಸಂಕೋಚವೇ ಪ್ರಧಾನವಾದರೆ ಅಧೋಮುಖವಾಗಿ ಶೂನ್ಯಾದಿ ಪ್ರಮಾತೃಭಾವಗಳನ್ನು ಪಡೆಯುತ್ತಾ ಕೆಳಕ್ಕಿಳಿಯುತ್ತಾನೆ. ಇಂತಹ ಬದ್ಧಜೀವನು ವಿಚಿತ್ರವಾದ ಅನೇಕ ಜನ್ಮಗಳನ್ನು ಪಡೆಯುತ್ತಾನೆ.

ಚಿಚ್ಛಕ್ತಿಯೇ (ಚಿತ್ತೇ) ಬಾಹ್ಯ ವಿಷಯಗಳನ್ನು ತಿಳಿಯುವುದಕ್ಕೋಸ್ಕರ ನೀಲ ಸುಖ ಮುಂತಾದ ರೂಪಗಳಿಂದ ಸಂಕುಚಿತವಾಗುತ್ತದೆ. ಹೊರಗಿನ ಪದಾರ್ಥಗಳ ಪರಿಮಿತಿಯನ್ನನುಸರಿಸಿ ತಿಳಿಯು

ವಂತಹ ಸಂಕೋಚ ಗ್ರಾಹಕತ್ವವು ಒಂದು ಬಗೆ. ಅಂತಃಪ್ರಪಂಚ ವನ್ನು ತಿಳಿಯುವುದಿನ್ನೊಂದು ಬಗೆ. ಅಂದರೆ ಚಿತ್ತು ಸಂಕೋಚ ವಾಗಿರುವುದೊಂದು, ಚೈತ್ಯ ಸಂಕೋಚವಾಗಿರುವುದೊಂದು ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಸ್ವತಂತ್ರವಾದ ಚಿತ್ತಿನ ಜ್ಞಾನಶಕ್ತಿಯು ಸಂಕೋಚಾವಸ್ಥೆಯಲ್ಲಿ ಸತ್ವಗುಣವಾಗಿಯೂ ಕ್ರಿಯಾ ಶಕ್ತಿಯು ರಜೋಗುಣವಾಗಿಯೂ ಮಾಯಾಶಕ್ತಿಯು ತಮೋಗುಣ ವಾಗಿಯೂ ಪರಿಣಮಿಸುತ್ತದೆ. ಈ ಮೂರು ಗುಣಗಳ ವ್ಯಾಪಾರ ವುಳ್ಳದ್ದೇ ಚಿತ್ತ. ಇದನ್ನೇ ಸತ್ವ ರಜಸ್ತಮೋಗುಣ ಸ್ವಭಾವವುಳ್ಳ ಮನಸ್ಸೆಂದು ಹೇಳುತ್ತೇವೆ. ಒಂದೇ ಮಾತಿನಲ್ಲಿ ಹೇಳವುದಾದರೆ **ತ್ರಿಗುಣಮಯವಾದರೆ ಮನಸ್ಸು, ಗುಣರಹಿತವಾಗಿದ್ದರೆ ಚಿತ್ತು.**

ಚಿತ್ತವೇ ಬದ್ಧಾತ್ಮಸ್ವರೂಪವೆಂದು ಮುಂದಿನ ಸೂತ್ರವು ತಿಳಿಯಪಡಿಸುತ್ತದೆ.

**ತನ್ಮಯೋ ಮಾಯಾ ಪ್ರಮಾತಾ ॥ ೬ ॥**

ವಿಕಲ್ಪಗಳಿಗೆ ಆಶ್ರಯವಾಗಿರುವ ಚಿತ್ತದಿಂದ ಕೂಡಿರುವಿಕೆಯೇ ಮಾಯಾ ಪ್ರಮಾತೃತ್ವ.

ಬದ್ಧಾತ್ಮನು ಚಿತ್ತಮಯನಾಗಿರುವನು. ಶರೀರ ಪ್ರಾಣ ಇಂದ್ರಿಯಗಳು ಚಿತ್ತಿನ ಸಂಬಂಧವುಳ್ಳವುಗಳಾಗಿವೆ. ಆದರೂ ಚಿತ್ತವೇ ಪ್ರಧಾನವಾಗಿರುತ್ತದೆ. ಶೂನ್ಯ ಭೂಮಿಯೂ ಕೂಡ ಚಿತ್ತವ ನ್ನಾಶ್ರಯಿಸಿಕೊಂಡು ಚಿತ್ತ ಸಂಸ್ಕಾರದಿಂದಲೇ ಕೂಡಿರುತ್ತದೆ. ನಿದ್ದೆ ಯಲ್ಲಿ ಹೇಗೆ ಎಲ್ಲಾ ವೃತ್ತಿಗಳೂ ಶೂನ್ಯವಾಗಿರುವುವೋ ಹಾಗೆ ಬಳಕೆ

ಯಲ್ಲಿಲ್ಲದಿರುವ ಎಲ್ಲಾ ವೃತ್ತಿಗಳೂ ಶೂನ್ಯ ಭೂಮಿಯಲ್ಲಿ ಸಂಸ್ಕಾರ ರೂಪದಲ್ಲಿರುತ್ತವೆ. ಶೂನ್ಯ ಭೂಮಿಯೂ ಕೂಡ ಚಿತ್ತವನ್ನಾಶ್ರಯಿಸಿ ಕೊಂಡಿರುವುದರಿಂದಲೇ ಶೂನ್ಯ ಭೂಮಿಯಿಂದ ಎಚ್ಚತ್ತ ಮನುಷ್ಯನು ತನ್ನ ಕೆಲಸಗಳನ್ನು ಮೊದಲಿನಂತೆಯೇ ನಡೆಸಿಕೊಂಡು ಹೋಗುತ್ತಾನೆ. ಹೀಗಿರುವುದರಿಂದಲೇ ಮಾಯಾ ಪ್ರಮಾತೃವು ಚಿತ್ತಮಯನಾಗಿದ್ದಾನೆ. ಈ ಅಭಿಪ್ರಾಯದಿಂದಲೇ ಶಿವ ಸೂತ್ರಗಳಲ್ಲಿ ಮೊದಲು ಚೈತನ್ಯ ಮಾತ್ಮಾ (ಶುದ್ಧಾತ್ಮಾ) ಎಂದು ಹೇಳಿ ಮಾಯಾ ಪ್ರಮಾತೃ ಲಕ್ಷಣ ಗಳನ್ನು ಹೇಳುವಾಗ ಚಿತ್ತಮಾತ್ಮಾ (ವಿಕಲ್ಪಗಳಿಗಾಶ್ರಯವಾದ ಚಿತ್ತದಿಂದ ಕೂಡಿರುವವನು) ಎಂದು ಹೇಳಲ್ಪಟ್ಟಿದೆ. ಈ ವಿಷಯ ವನ್ನು ತಾತ್ವಿಕವಾಗಿ ತಿಳಿದರೆ ಮುಕ್ತಿ. ತಪ್ಪಾಗಿ ತಿಳಿದುಕೊಂಡರೆ ಬಂಧ.

ಮನಸ್ಸು ಸತ್ವ-ರಜಸ್ತಮೋಗುಣಗಳಿಂದ ಕೂಡಿದ್ದಾಗಿರುತ್ತದೆ. ಸತ್ವವೆಂದರೆ ಪ್ರಕಾಶ, ಸ್ವಚ್ಛವಾದ ತಿಳಿವಳಿಕೆ, ಇದ್ದದ್ದನ್ನು ಇದ್ದಹಾಗೆ ತೋರಿಸುವುದು. ರಜಸ್ಸೆಂದರೆ ಚಲನ ಶಕ್ತಿಯಿಂದ ಕೂಡಿ ಚಾಂಚಲ್ಯಕ್ಕೆ ಕಾರಣವಾದದ್ದು. ತಮಸ್ಸೆಂದರೆ ಇದ್ದದ್ದನ್ನು ಇದ್ದ ಹಾಗೆ ಕಾಣಿಸದೆ ಪ್ರಮಾದ ಮೋಹ ಮೊದಲಾದವುಗಳಿಗೆ ಆಶ್ರಯ ವಾದದ್ದು. ಈ ಮೂರು ಗುಣಗಳಲ್ಲಿ ಯಾವುದು ಉದ್ರಿಕ್ತವಾಗಿರು ವುದೋ ಅದು ಮಿಕ್ಕ ಎರಡು ಗುಣಗಳನ್ನು ಆವರಿಸಿಕೊಂಡಿರುತ್ತದೆ. ಈ ಗುಣಗಳಿಂದ ಕೂಡಿದ ಮನೋಭಾವನೆ ಹೇಗಿದ್ದರೆ ವ್ಯಕ್ತಿಯೂ ಅಂತಹವನೆಂದೇ ತಿಳಿಯಬಹುದು. ಬುದ್ಧಿ, ಅಹಂಕಾರ, ಅಧ್ಯವ ಸಾಯ ಇವು ಮೂರು ಮನಸ್ಸಿನ ವ್ಯಾಪಾರಗಳು. ಸಾಮಾನ್ಯವಾದ ತಿಳಿವಳಿಕೆಯೇ ಬುದ್ಧಿ. ನಾನು ಎಂಬ ಭೇದ ಭಾವವೇ ಅಹಂಕಾರ.

ಇದು ಹೀಗೇ ಎಂದು ನಿರ್ಣಯಿಸುವುದೇ ಅಧ್ಯವಸಾಯ. ಇವು ಮೂರೂ ಮನೋಧರ್ಮಗಳು.

ಐದು ಜ್ಞಾನೇಂದ್ರಿಯಗಳು ಐದು ಕರ್ಮೇಂದ್ರಿಯಗಳು ಮತ್ತು ಮನಸ್ಸು ಈ ಹನ್ನೊಂದೂ ಜೀವನನ್ನು ಜನ್ಮಾಂತರಗಳಲ್ಲಿಯೂ ಅನುಸರಿಸಿಕೊಂಡು ಬರುತ್ತವೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಇದರಿಂದಲೇ ಪ್ರತಿಯೊಂದು ವ್ಯಕ್ತಿಯ ಸಂಸ್ಕಾರಗಳು ಬೇರೆ ಬೇರೆಯಾಗಿರುತ್ತವೆ. ಮನಸ್ಸಿಲ್ಲದೆ (ಚಿತ್ತವಿಲ್ಲದೆ) ಜೀವನು ಶರೀರದಲ್ಲಿ ಬದುಕಿರಲು ಸಾಧ್ಯವಿಲ್ಲ. ಶರೀರವಿಲ್ಲದಿದ್ದರೆ ಪ್ರಾಣ ಶಕ್ತಿಯು ಕೆಲಸ ಮಾಡಲಾರದು. ಅಂದರೆ ಪ್ರಾಣ ಶಕ್ತಿಗೆ ಶರೀರ ಆಶ್ರಯ. ಶರೀರ ಮತ್ತು ಪ್ರಾಣ ಮೊದಲಾದವುಗಳ ಸಂಬಂಧವನ್ನು ಚಿತ್ತ ಅಥವಾ ಮನಸ್ಸು ಕಲ್ಪಿಸುವಂಥಾದ್ದು. ನಿದ್ದೆ, ಮೂರ್ಛೆ ಮೊದಲಾದ ಶೂನ್ಯ ಸ್ಥಿತಿಗಳಲ್ಲಿಯೂ ಮನಸ್ಸಿನ ಸಂಸ್ಕಾರಗಳು ಅಚ್ಚಳಿಯದೆ ಇರುತ್ತವೆ. ಆದುದರಿಂದಲೇ ಎಚ್ಚತ್ತನಂತರ ಹಿಂದಿನ ನೆನಪುಗಳುಂಟಾಗುತ್ತವೆ. ಹೀಗಿರುವುದರಿಂದಲೇ ನಿರ್ಮಲನಾದ ಚಿನ್ಮಯನು ಕಶ್ಮಲವಾದ ಚಿತ್ತಮಯನಾದ ಮಾಯಾ ಪ್ರಮಾತೃವಾಗಿರುವನೆಂದು ಶಿವಸೂತ್ರಗಳಲ್ಲಿ ಹೇಳಲ್ಪಟ್ಟಿದೆ. ನಿರ್ಮಲನಾದ ಚಿನ್ಮಯನಿಗೆ ಚಾಂಚಲ್ಯ, ಸಂಚಾರ ಮೊದಲಾದ ಗುಣತ್ರಯಗಳಿಲ್ಲ. ಆದರೂ ಆ ಚಿನ್ಮಯನು ತನ್ನ ಸ್ವರೂಪವನ್ನು ತಿಳಿಯದೆ ಹೋಗುವ ಅಖ್ಯಾತಿಯಿಂದ ಸತ್ವ ರಜಸ್ತಮೋ ವೃತ್ತಿಗಳನ್ನನುಭವಿಸುತ್ತಾನೆ. ಇದರ ಪರಿಣಾಮವೇ ಕರ್ಮ ಮತ್ತು ಕರ್ಮ ಪ್ರವಾಹ.

ಆ ಮನೋಮಯನೇ ಮಾಯಾ ಪ್ರಮಾತಾ.

ಸಚ್ಚೈಕೋ ದ್ವಿರೂಪಃ ತ್ರಿಮಯಃ ಚತುರಾತ್ಮಾ
ಸಪ್ತ ಪಂಚಕ ಸ್ವಭಾವಃ ॥ ೭ ॥

ಶಿವಭಟ್ಟಾರಕನೊಬ್ಬನೇ ಎರಡು ರೂಪಗಳಿಂದಲೂ ಮೂರು ಮಲಗಳಿಂದಲೂ ಶೂನ್ಯ ಪ್ರಾಣ ಪುರ್ಯಷ್ಟಕ ಶರೀರ ಎಂಬ ನಾಲ್ಕು ವಿಭಾಗಗಳುಳ್ಳವನಾಗಿಯೂ ಏಳು ಪ್ರಮಾತೃಗಳ ರೂಪವಾಗಿಯೂ ಐದು ಶಕ್ತಿಗಳುಳ್ಳವನಾಗಿಯೂ ಮೂವತ್ತೈದು ತತ್ವರೂಪಿಯಾಗಿಯೂ ಇದ್ದಾನೆ.

ಹಿಂದೆ ನಿರ್ಣಯಿಸಿದಂತೆ ಶಿವ ಭಟ್ಟಾರಕನೊಬ್ಬನೇ ದೇಶ ಕಾಲ ಆಕಾರಾದಿ ಭೇದಗಳಿಲ್ಲದೆ ಪ್ರಕಾಶರೂಪಿಯಾಗಿದ್ದಾನೆ. ಆ ಮಹಾ ಪ್ರಕಾಶವೇ ತನ್ನ ಸ್ವಾತಂತ್ರ್ಯದಿಂದ ಪ್ರಾಣ ದೇಹಾದಿ ಸಂಕೋಚ ಸ್ಥಿತಿಯನ್ನು ಅಂಗೀಕರಿಸಿ ಸಂಕುಚಿತ ಗ್ರಾಹಕತ್ವವನ್ನು ಅನುಭವಿಸುತ್ತದೆ. ಜಡ ಪದಾರ್ಥಕ್ಕೆ ಗ್ರಾಹಕತ್ವವಿಲ್ಲ. ಶಿವ ಭಟ್ಟಾರಕನೇ ಸಂಕೋಚ ಸ್ಥಿತಿ ವಿಕಾಸಸ್ಥಿತಿ ಎಂಬ ಎರಡು ಅವಸ್ಥೆಗಳುಳ್ಳವನಾಗಿರವುದರಿಂದ ದ್ವಿರೂಪಿಯಾಗಿದ್ದಾನೆ. ಆಣವ ಮಾಯಿಾಯ ಕಾರ್ಮ ಮಲಗಳಿಂದ ಕೂಡಿರುವುದರಿಂದ ತ್ರಿಮಯನಾಗಿದ್ದಾನೆ. ಶೂನ್ಯ, ಪ್ರಾಣ, ಪುರ್ಯಷ್ಟಕ, ಶರೀರ ಈ ನಾಲ್ಕು ವಿಭಾಗಗಳನ್ನೊಳಗೊಂಡಿರುವುದರಿಂದ ಚತುರಾತ್ಮನಾಗಿದ್ದಾನೆ. ಶಿವನ ಮೊದಲ್ಗೊಂಡು ಪೃಥ್ವೀವರೆಗೂ ಇರುವ ಮೂವತ್ತೈದು ತತ್ವರೂಪಿಯಾಗಿಯೂ ಹಾಗೆಯೇ 'ಶಿವನ' ಮೊದಲು 'ಸಕಲ'ರ ವರೆಗೂ ಇರುವ ಸಪ್ತ ಪ್ರಮಾತೃರೂಪಿಯಾಗಿಯೂ ಇದ್ದಾನೆ. ಚಿತ್ತಿನ ಚಿಚ್ಛಕ್ತಿ ಆನಂದಶಕ್ತಿ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳು

ಅಖ್ಯಾತಿಯಿಂದ ಪಂಚ ಕಂಚುಕಗಳಾಗಿರುವುದರಿಂದ **ಪಂಚಕ** ಸ್ವರೂಪವುಳ್ಳವನಾಗಿರುತ್ತಾನೆ. ಒಬ್ಬನಾದ ಶಿವನೇ ಮೂವತ್ತೈದು ತತ್ವಮಯನಾಗಿಯೂ ಏಳು ಪ್ರಮಾತೃಗಳ ಭಾವದಿಂದಿರುವವನಾಗಿಯೂ ಚಿದಾದಿ ಪಂಚಶಕ್ತಿಗಳಿಂದ ಕೂಡಿರುವನಾಗಿಯೂ ಇರುವನೆಂದು ಸಾಧಕನು ಗುರುತಿಸಿದರೆ ಅಥವಾ ಸಾಕ್ಷಾತ್ಕರಿಸಿದರೆ ಆಗ ಶಿವನು ಮೋಕ್ಷಪ್ರದನಾಗುತ್ತಾನೆ. ಇಲ್ಲದಿದ್ದರೆ ಬಂಧದಿಂದ ಸಂಸಾರಕ್ಕೆ ಕಾರಣನಾಗುತ್ತಾನೆ.

ಇದುವರೆಗೂ ಚಿದ್ರೂಪಿಯಾದ ಶಿವಭಟ್ಟಾರಕನೊಬ್ಬನೇ ವಿಶ್ವಾತ್ಮಕನಾಗಿಯೂ ವಿಶ್ವಾತೀತನಾಗಿಯೂ ಇದ್ದಾನೆಂದು ವಿವರಿಸಿದ್ದಾಯಿತು. ಜಡ ಚೇತನ ಎಂಬ ವಿಭಾಗವು ಎಲ್ಲರ ಅನುಭವದಲ್ಲಿಯೂ ಇದೆ. ಇನ್ನೊಂದರ ಸಹಾಯವಿಲ್ಲದೆ ತನ್ನಷ್ಟಕ್ಕೆ ತಾನೇ ಬೆಳಗುವುದು "ಚೇತನ". ಇದನ್ನೇ ಸ್ವಯಂಪ್ರಕಾಶವೆನ್ನುತ್ತಾರೆ. ಇಲ್ಲಿ ದೇಶಪರಿಮಿತಿಯಿಲ್ಲ. ಭೂತ ಭವಿಷ್ಯದ್ವರ್ತಮಾನ ಕಾಲಗಳಿಂದ ವ್ಯತ್ಯಾಸವಾಗಲಿ ಸಂಕೋಚ ವಿಸ್ತಾರ ರೂಪವಾದ ವ್ಯವಸ್ಥೆಯಾಗಲಿ ಇಲ್ಲ. ಇದು ಯಾವಾಗಲೂ ಗ್ರಾಹಕವಾಗಿರುತ್ತದೆ. ಸ್ವಸ್ವರೂಪ ವಿಮರ್ಶನ ದಶೆಯಲ್ಲಿ ತಾನೇ ಗ್ರಾಹ್ಯವಾಗಿಯೂ ಗ್ರಾಹಕವಾಗಿಯೂ ಇರುತ್ತದೆ. ಹೇಗೆಂದರೆ ದೀಪವು ಇತರ ಪದಾರ್ಥಗಳನ್ನು ತೋರಿಸುತ್ತದೆ. ಆದರೆ ಆ ದೀಪವನ್ನು ತೋರಿಸುವುದಕ್ಕೆ ಇನ್ನೊಂದು ದೀಪದ ಅವಶ್ಯಕತೆಯಿಲ್ಲ. ಇದೇ ರೀತಿಯಾಗಿ ಚಿತ್ತು ತನ್ನನ್ನೇ ತಾನು ಪರಾಮರ್ಶಿಸುವ ಸ್ಥಿತಿಯಲ್ಲಿ ಗ್ರಾಹ್ಯವೂ ಗ್ರಾಹಕವೂ ಆಗಿರುತ್ತದೆ. ಜಡ ಪದಾರ್ಥವು ದೇಶ ಕಾಲ ಆಕಾರಾದಿಗಳಿಂದ ನಿಯಮಿತವಾಗಿ ಯಾವಾಗಲೂ ಗ್ರಾಹ್ಯವಾಗಿಯೇ ಇರುತ್ತದೆ.

ಪೂರ್ಣ ಪ್ರಕಾಶರೂಪವಾದ ಚಿತ್ತೀ ಸ್ವಾತಂತ್ರ್ಯ ಶಕ್ತಿಯಿಂದ ಸಂಕುಚಿತವಾದ ಪ್ರಮಾಣ ಪ್ರಮೇಯ ವ್ಯವಹಾರವನ್ನು ನಡೆಸುತ್ತದೆ. ಈ ರೀತಿಯಾಗಿ ಪಶುತ್ವವನ್ನು ಪಡೆಯುವ ಸ್ಥಿತಿಯೇ ಅಲ್ಪಾಹಂತಾ ಎಂತಲೂ ಮಿತ ಪ್ರಮಾತೃತ್ವ ಎಂತಲೂ ಕರೆಯಲ್ಪಡುತ್ತದೆ. ಪೂರ್ಣ ಪ್ರಕಾಶಸ್ಥಿತಿಯನ್ನು **ಪೂರ್ಣಾಹಂತಾ** ಎಂತಲೂ ಪರ ಪ್ರಮಾತೃತ್ವ ಎಂತಲೂ ಕರೆಯುತ್ತಾರೆ. ಇವೆರಡೇ ಮೇಲೆ ಹೇಳಿದ ದ್ವಿರೂಪಗಳು.

ಪರಪ್ರಮಾತೃವು ಆಣವಾದಿ ಮೂರು ಮಲಗಳಿಂದಲೂ ಶೂನ್ಯ ಪ್ರಾಣಾದಿ ನಾಲ್ಕು ತತ್ವಗಳಿಂದಲೂ ಕೂಡಿದಾಗ ಮಿತಪ್ರಮಾತೃ ವಾಗುತ್ತಾನೆ. ವಿಶ್ವವನ್ನು ಸೃಷ್ಟಿ ಮಾಡಬೇಕೆನ್ನುವ ಸಂಕಲ್ಪದಿಂದ ಸ್ವಸ್ವರೂಪವನ್ನು ಮರೆಯಿಸಿಕೊಳ್ಳುವಿಕೆಯೇ **ಆಣವಮಲ**[1] ಅಶುದ್ಧಾಧ್ವದಲ್ಲಿ ಷಟ್ಕಂಚುಕಗಳಿಂದ ತನ್ನ ನಿಜಸ್ಥಿತಿಯನ್ನು ಲುಪ್ತ ಮಾಡಿಕೊಂಡು ಭೌತಿಕ ದೇಹದಲ್ಲಿರುವಿಕೆಯೇ **ಮಾಯೀಯಮಲ**[2] ಕ್ರಿಯಾಶಕ್ತಿ ಸಂಕೋಚದಿಂದ ಅಂತಃಕರಣ ಬುದ್ಧಿ ಕರ್ಮೇಂದ್ರಿಯ ಗಳಿಂದ ಇಂದ್ರಿಯಗಳಿಗಧೀನನಾಗಿ ಕರ್ಮಗಳಲ್ಲಿ ತೊಡಗಿರುವಿಕೆಯೇ **ಕಾರ್ಮಿಕಮಲ.**[3] ಮಿತ ಪ್ರಮಾತೃವು ಇವು ಮೂರು ಮಲ ಗಳಿಂದಲೂ ಕೂಡಿರುತ್ತಾನೆ.

---

1 ಗೋಪಿತ ಸ್ವಮಹಿಮ್ನೋऽಸ್ಯ ಸಂಮೋಹಾದ್ವಿ ಸ್ಮೃತಾತ್ಮನಃ ।
ಯಃ ಸಂಕೋಚಃ ಸ ಏವಾಸ್ಮಿನ್ನಾಣವೋಮಲ ಉಚ್ಯತೆ ॥

2 ಷಟ್ಕಂಚುಕ ವ್ಯಾಪ್ತಿ ವಶಾದ್ವಿಲೋಪಿತ ನಿಜಸ್ಥಿತೇಃ ।
ಭೂತ ದೇಹಸ್ಥಿತಿರ್ಯಾಸೌ ಮಾಯೀಯೋಮಲ ಉಚ್ಯತೆ ॥

3 ಯದಂತಃಕರಣಾಧೀನ ಬುದ್ಧಿ ಕರ್ಮೇಂದ್ರಿಯಾದಿಭಿಃ ।
ಬಹಿರ್ವ್ಯಾಪ್ರಿಯತೆ ಕಾರ್ಮಂ ಮಲಮೇತಸ್ಯ ತನ್ಮತಂ ॥

ಇನ್ನು ನಾಲ್ಕು ತತ್ವಗಳ ವಿಚಾರ. ಶೂನ್ಯ ಪ್ರಾಣ ಪುರ್ಯಷ್ಟಕ ಶರೀರ ಇವುಗಳು **ಚತುರಾತ್ಮಗಳೆನ್ನಿಸಿಕೊಂಡಿವೆ.** **ಶೂನ್ಯವೆಂದರೆ** ಮನೋಭಾವಗಳಿಲ್ಲದ ಚಿತ್ತು. ಪ್ರಾಣಶಕ್ತಿಯೆಂದರೆ ಶರೀರಧಾರಣ ಪ್ರೇರಣ ಚಲನಗಳಿಗೆ ಕಾರಣವಾಗಿರುವ ಶಕ್ತಿ. **ಪುರ್ಯಷ್ಟಕ**ವೆಂದರೆ ಐದು ತನ್ಮಾತ್ರಗಳೂ ಮನಸ್ಸು ಬುದ್ಧಿ ಅಹಂಕಾರಗಳೂ ಸೇರಿದ ಎಂಟು ತತ್ವಗಳಿಂದ ಕೂಡಿರುವ ಗ್ರಂಥಿರೂಪವಾಗಿರುವ ಒಂದು ಸೂಕ್ಷ್ಮ ತತ್ವ. ನಾಲ್ಕನೆಯದು ಪಾಂಚಭೌತಿಕವಾದ **ಶರೀರ.** ಮಿತಪ್ರಮಾತೃವು ಈಗ ವಿವರಿಸಿದ ನಾಲ್ಕು ಅಂಶಗಳಿಂದ ಕೂಡಿದವನಾಗಿರುತ್ತಾನೆ.

ಇನ್ನು ಸಪ್ತಪಂಚಕಸ್ವಭಾವದ ವಿಚಾರ. ಇಲ್ಲಿ **ಸಪ್ತ** ಎಂದರೆ ಮೇಲೆ ಹೇಳಿದ ಸಪ್ತ ಪ್ರಮಾತೃಗಳು. **ಪಂಚಕ** ಎಂದರೆ ಚಿತ್ ಆನಂದ ಇಚ್ಛಾ ಜ್ಞಾನ ಕ್ರಿಯಾರೂಪವಾದ ಐದು ಶಕ್ತಿಗಳು. ಇದೇ ಶಕ್ತಿಗಳೇ ಅಖ್ಯಾತಿಬಲದಿಂದ ಕ್ರಮೇಣ ಕಲಾ ವಿದ್ಯಾ ರಾಗ ಕಾಲ ನಿಯತಿ ಎಂಬ ಪಂಚಕಂಚುಕಗಳಾಗುತ್ತವೆ. ಸಪ್ತ (ಏಳು) × ಪಂಚಕ (ಐದು) = ಮೂವತ್ತೈದು ತತ್ವಗಳು. ಮೊದಲನೆಯದಾದ ಶಿವತತ್ವವನ್ನು ಸೇರಿಸಿದರೆ ಮೂವತ್ತಾರು ತತ್ವಗಳಾಗುತ್ತವೆ. ಇವೆಲ್ಲವೂ ಪರಮಶಿವನ ಐಶ್ವರ್ಯವಾಗಿವೆ. ಆ ಪರಮಶಿವನೇ ವಿಶ್ವರೂಪಿಯಾಗಿ ಪ್ರಕಾಶಿಸುತ್ತಿದ್ದಾನೆ. ಈಗ ವಿವರಿಸಿರುವ ಭೇದಗಳನ್ನೂ ಅವುಗಳಲ್ಲಿರುವ ಅವಾಂತರ ಭೇದಗಳನ್ನೂ ತಿಳಿದು ಈ ಭಿನ್ನವಾದತತ್ವಗಳು ಚಿಚ್ಛಕ್ತಿಯ ವಿಕಾಸವೆಂದುತಿಳಿದರೆ ಮುಕ್ತಿಗೆ ಕಾರಣವಾಗುತ್ತದೆ. ಇವುಗಳ ಸ್ವರೂಪ ಸ್ವಭಾವಗಳನ್ನು ತಿಳಿಯದಿದ್ದರೆ ಬಂಧ.

## ತದ್ಭೂಮಿಕಾಃ ಸರ್ವದರ್ಶನಸ್ಥಿತಯಃ ॥ ೮ ॥

ಆ ಪರಮೇಶ್ವರನು ನಟನ ಹಾಗೆ ಅನೇಕ ವೇಷಗಳನ್ನಭಿನಯಿಸುತ್ತಾನೆ. ಎಲ್ಲಾ ದರ್ಶನಗಳೂ ಆ ಪರಮೇಶ್ವರನ ಭೂಮಿಕೆಗಳನ್ನೇ ಹೇಳುತ್ತವೆ.

ದಾರ್ಶನಿಕರು ವಿಶ್ವನನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ನಿರೂಪಿಸಿರುತ್ತಾರೆ. ಅವರ ನಿರ್ಣಯಗಳನ್ನು ಈ ಪ್ರತ್ಯಭಿಜ್ಞಾ ದರ್ಶನದ ತತ್ವ ಕ್ರಮಕ್ಕೆ ಹೋಲಿಸಿ ನೋಡಿದರೆ ದಾರ್ಶನಿಕರ ಸಿದ್ಧಾಂತ ಗಳಿಗೂ ಈ ತತ್ವ ಕ್ರಮಕ್ಕೂ ಇರುವ ಸಾಮ್ಯವು ಕಂಡುಬರುತ್ತದೆ.

ಚಾರ್ವಾಕರು ಚೈತನ್ಯದಿಂದ ಕೂಡಿದ ಶರೀರವೇ ಆತ್ಮವೆನ್ನು ವರು. ನೈಯ್ಯಾಯಿಕರೇ ಮೊದಲಾದವರು ಆತ್ಮನು ಜ್ಞಾನಾದಿ ಎಂಟುಗುಣಗಳಿಗಾಶ್ರಯನಾಗಿರುತ್ತಾನೆಂದೂ ಸಂಸಾರಾವಸ್ಥೆಯಲ್ಲಿ ಪ್ರತ್ಯಭಿಜ್ಞಾದರ್ಶನದ ಬುದ್ಧಿ ತತ್ವಕ್ಕೆ ಸಮಾನನಾಗಿಯೂ ಮೋಕ್ಷದಲ್ಲಿ ಗುಣಶೂನ್ಯನಾಗಿಯೂ ಇರುತ್ತಾನೆಂದು ಹೇಳುತ್ತಾರೆ. ಮೀಮಾಂಸ ಕರು 'ನಾನು' ಎಂಬ ರೂಢಿಯಿಂದಲೇ ತಿಳಿಯಲ್ಪಡತಕ್ಕವನಾಗಿದ್ದು ಸುಖ ದುಃಖ ಮೊದಲಾದ ಉಪಾಧಿಗಳಿಂದ ಮರೆಮಾಚಲ್ಪಟ್ಟವನೇ ಆತ್ಮನೆನ್ನುವರು. ಜ್ಞಾನ ಸಂತಾನವೇ ತತ್ವವೆಂದು ಬೌದ್ಧರು ಹೇಳು ತ್ತಾರೆ. ಇವರುಗಳೆಲ್ಲಾ ಬುದ್ಧಿ ವೃತ್ತಿಗಳನ್ನೇ ಹೇಳಿದ ಹಾಗಾಯಿತು.

ಕೆಲವು ವೇದಾಂತಿಗಳು ಪ್ರಾಣವನ್ನೇ ಆತ್ಮವೆನ್ನುತ್ತಾರೆ. ಅಭಾವ ಬ್ರಹ್ಮವಾದಿಗಳು ಮೊದಲು 'ಅಸತ್' ಎಂದರೆ ವಿಶ್ವವು ಅಭಾವ ರೂಪವಾಗಿತ್ತೆಂದು ಶೂನ್ಯ ಭೂಮಿಯನ್ನೇ ಹೇಳುತ್ತಾರೆ. ಮಾಧ್ಯಮಿಕರು (ಬೌದ್ಧರಲ್ಲಿ ಒಂದು ಸಂಪ್ರದಾಯದವರು) ಅಭಾವ

ಬ್ರಹ್ಮವಾದಿಗಳು ಹೇಳಿದಂತೆಯೇ ಹೇಳುತ್ತಾರೆ. ಪಾಂಚರಾತ್ರರು ಪರಾಪ್ರಕೃತಿಯು ವಾಸುದೇವನೆಂದೂ ಅವನ ಅಂಶಗಳೇ ಜೀವರುಗಳೆಂದೂ ಹೇಳಿ ಪರಾಪ್ರಕೃತಿಗೆ ಪರಿಣಾಮವನ್ನು ಒಪ್ಪಿರುವುದರಿಂದ ಅವ್ಯಕ್ತತತ್ವ ಸ್ಥಿತಿಯನ್ನೇ ಹೇಳಿದಹಾಗಾಯಿತು. ಸಾಂಖ್ಯರೇ ಮೊದಲಾದವರು ಪ್ರತ್ಯಭಿಜ್ಞಾಸಂಪ್ರದಾಯದ ವಿಜ್ಞಾನಾಕಲರಿಗೆ ಸಮಾನವಾದ ಸ್ಥಿತಿಯನ್ನವಲಂಬಿಸಿರುತ್ತಾರೆ. ಮೊದಲು ಈ ವಿಶ್ವವು ಸದ್ರೂಪವಾಗಿತ್ತೆಂದು ಕೆಲವು ವೇದಾಂತಿಗಳು ಹೇಳುತ್ತಾರೆ. 'ಈಶ್ವರ ತತ್ವ'ವು ಶಬ್ದಬ್ರಹ್ಮಮಯವಾಗಿ ಪಶ್ಯಂತೀರೂಪವಾಗಿರುವುವೆಂದು ವೈಯ್ಯಾಕರಣರ ಮತ. ಇವರು ಪ್ರತ್ಯಭಿಜ್ಞಾದರ್ಶನದ 'ಸದಾಶಿವ ತತ್ವ' ಸ್ಥಿತಿಯನ್ನೇ ಒಪ್ಪಿರುತ್ತಾರೆ. ಇದಲ್ಲದೆ ಆತ್ಮತತ್ವವು ವಿಶ್ವೋತ್ತೀರ್ಣವಾದುದೆಂದು ತಾಂತ್ರಿಕರು ಹೇಳುತ್ತಾರೆ. ಕುಲಸಂಪ್ರದಾಯದ ಆಮ್ನಾಯಪಂಡಿತರು ಆತ್ಮತತ್ವವು ವಿಶ್ವಮಯವಾಗಿದೆಯೆನ್ನುತ್ತಾರೆ. ತ್ರಿಕಾದಿ ದಾರ್ಶನಿಕರು ಪರಮಾತ್ಮನು ವಿಶ್ವೋತ್ತೀರ್ಣನಾಗಿಯೂ ವಿಶ್ವಾತ್ಮಕನಾಗಿಯೂ ಇದ್ದಾನೆಂದುಹೇಳುತ್ತಾರೆ. ದಾರ್ಶನಿಕರ ದೃಷ್ಟಿಗಳು ಬೇರೆ ಬೇರೆಯಾಗಿದ್ದರೂ ಇವುಗಳೆಲ್ಲೆಲ್ಲಾ ವ್ಯಾಪಿಸಿರುವವನು ಆ ಪರಮೇಶ್ವರನೊಬ್ಬನೇ ಎಂದು ತಿಳಿಯಬೇಕು. ಮಿತದೃಷ್ಟಿಯುಳ್ಳವರು ಈಗ ಮೇಲೆ ಹೇಳಿದ ಒಬ್ಬೊಬ್ಬ ದಾರ್ಶನಿಕರ ಸಿದ್ಧಾಂತಗಳಲ್ಲಿ ಅಭಿನಿವೇಶವುಳ್ಳವರಾಗಿರುತ್ತಾರೆ ಅಥವಾ ಅಭಿಮಾನವನ್ನು ಪಡೆದವರಾಗಿರುತ್ತಾರೆ. ಹೀಗೆ ಚಿದಾತ್ಮಕನಾದ ಭಗವಂತನ ಸ್ವಾತಂತ್ರ್ಯ ಶಕ್ತಿಯಿಂದ ಹೊರಹೊಮ್ಮಿರುವ ಈ ದಾರ್ಶನಿಕರ ದೃಷ್ಟಿಯು ಬೇರೆ ಬೇರೆಯಾಗಿದ್ದರೂ ಇವುಗಳಲ್ಲಿ ಕಂಡುಬರುವ ವ್ಯತ್ಯಾಸಗಳು ಸ್ವಾತಂತ್ರ್ಯ ಶಕ್ತಿಯ ಉನ್ಮೇಷ ನಿಮೇಷಗಳ ತಾರತಮ್ಯ

ಗಳಿಂದುಂಟಾದವುಗಳೆಂದು ತಿಳಿಯಬೇಕು. ಸರ್ವ ವ್ಯಾಪಿಯಾಗಿ ಗೋಚರಿಸುವ ಆ ಪರಮಾತ್ಮನಲ್ಲಿ ತ್ರಿಕಸಂಪ್ರದಾಯದಂತೆ ಶ್ರದ್ಧೆಯುಂಟಾಗಬೇಕಾದರೆ ಪರಮಶಿವನ ಶಕ್ತಿಪಾತವಾಗಬೇಕು.

ಎಲ್ಲಾ ಬಾಹ್ಯ ವಿಷಯಜ್ಞಾನಗಳಿಗೂ ಸಂಸ್ಕಾರ ರೂಪವಾದ ಸ್ಥಿತಿಯುಂಟು. ಈ ಸಂಸ್ಕಾರವು ಚಿತ್ತಿನಲ್ಲಿ ಅಂತರ್ಮುಖವಾಗಿ ವಿಶ್ರಾಂತಿಯನ್ನು ಪಡೆಯುತ್ತದೆ. ಚಿದಾನಂದ ಘನನಾಗಿರುವ ಆತ್ಮನು ಒಳಗೆ ವಿಶ್ರಾಂತವಾಗಿರುವ ಈ ವಿಷಯಜ್ಞಾನಗಳನ್ನು ಹೊರಹೊಮ್ಮಿಸುತ್ತಾನೆ. ಪುನಃ ಉಪಸಂಹರಿಸುತ್ತಾನೆ. ಒಳಗೆ ಪ್ರಶಾಂತವಾದ ವಿಲೀನಸ್ಥಿತಿಯೇ (ಮುಳುಗಿರುವಿಕೆಯೇ) ಮುಂದಿನ ಹೊರಹೊಮ್ಮುವಿಕೆಗೆ ಕಾರಣವಾಗಿರುತ್ತದೆ. ವಿಷಯಗಳ ಹೊರಹೊಮ್ಮುವಿಕೆ, ಇರುವಿಕೆ, ಉಪಸಂಹರಿಸುವಿಕೆ ಇವುಗಳಿಗೆ ಕ್ರಮವಾಗಿ ಸೃಷ್ಟಿ, ಸ್ಥಿತಿ ಸಂಹಾರಗಳೆಂದು ಪ್ರತೀತಿಯಿದೆ. ಈ ಮೂರು ಅಂಶಗಳ ಮೇಳನಾ ರೂಪವಾದ ವ್ಯಾಪಾರಗಳನ್ನು ನಡೆಸುವ ಶಕ್ತಿಗೆ **ತುರ್ಯಾ ಸಂವಿತ್** ಶಕ್ತಿಯೆಂದು ಹೆಸರು. ಇದು ಯಾವಾಗಲೂ ಪೂರ್ಣವಾಗಿಯೇ ಇರುತ್ತದೆ, ಹಾಗೆಯೇ ಸೂಕ್ಷ್ಮವಾಗಿಯೂ ಇರುತ್ತದೆ. ಭೇದಾಭೇದ ರೂಪವಾಗಿಯೂ ಅನುಭಯಾತ್ಮಕವಾಗಿಯೂ (ಸೃಷ್ಟಿ ಸಂಹಾರವಿಲ್ಲದೆ ಇರುವ ಸ್ಥಿತಿ) ಇರುತ್ತದೆ. ಅಕ್ರಮವಾಗಿಯೂ ಸ್ಫುರಿಸುತ್ತದೆ. ಇಂತಹ ವಿಚಿತ್ರ ವ್ಯಾಪಾರವುಳ್ಳ ಸಂವಿತ್ ಶಕ್ತಿಯನ್ನು ಕ್ರಮ ಕ್ರಮವಾಗಿ ಹೆಚ್ಚು ಹೆಚ್ಚಾಗಿ ಅನುಶೀಲನಮಾಡುವ ಭಕ್ತರನ್ನು ಈ ಸಂವಿದ್ದೇವತೆಯು ತನ್ನಲ್ಲಿಯೇ ಸೇರಿಸಿಕೊಳ್ಳುತ್ತಾಳೆ.

ಹೀಗಿರುವ ಪರಮೇಶ್ವರನ ಐಶ್ವರ್ಯವು ಯಾವರೀತಿಯಾಗಿ ಮಲಗಳಿಂದ ಕೂಡಿ ಕಲಾದಿ ಪಂಚಕಂಚುಕಗಳಿಂದ ಆವೃತವಾಗಿ

ಅಣುತ್ವವನ್ನೂ ಸಂಸಾರಿತ್ವವನ್ನೂ ಪಡೆಯುತ್ತದೆಂಬುದನ್ನು ಮುಂದಿನ ಸೂತ್ರವು ತೋರಿಸುತ್ತದೆ.

**ಚಿದ್ವತ್ತಚ್ಛಕ್ತಿ ಸಂಕೋಚಾತ್ ಮಲಾವೃತಃ ಸಂಸಾರೀ ॥ ೯ ॥**

ಚಿದಾತ್ಮಕನಾದ ಪರಮೇಶ್ವರನೇ ಶಕ್ತಿ ಸಂಕೋಚದ ದೆಸೆಯಿಂದ ಮಲಾವೃತನಾಗಿ ಸಂಸಾರಿಯಾಗಿರುತ್ತಾನೆ.

ಯಾವಾಗ ಪರಮೇಶ್ವರನು ಸ್ವಸ್ವಾತಂತ್ರ್ಯದಿಂದ ಅಭೇದ ವ್ಯಾಪ್ತಿಯನ್ನು ಬಿಟ್ಟು ಭೇದ ವ್ಯಾಪ್ತಿಯನ್ನಂಗೀಕರಿಸುತ್ತಾನೋ ಆಗ ಅವನ ಇಚ್ಛಾ ಜ್ಞಾನ ಕ್ರಿಯಾದಿ ಶಕ್ತಿಗಳು ಅಸಂಕುಚಿತವಾಗಿದ್ದರೂ ಸಂಕುಚಿತವಾದಂತೆ ತೋರುತ್ತವೆ. ಆಗಲೇ ಈ ಶಿವನು ಮಲಾವೃತ ನಾದ **ಸಂಸಾರಿಯೆಂದೆನಿಸುವನು.** ಈ ಕ್ರಮದಲ್ಲಿ ಅಪ್ರತಿಹತವಾದ ಸ್ವಾತಂತ್ರ್ಯರೂಪವಾದ ಇಚ್ಛಾಶಕ್ತಿಯು ಸಂಕುಚಿತವಾಗಿ ತಾನು ಪೂರ್ಣನಲ್ಲವೆಂಬ ಭಾವನೆಯಿರುವ **ಆಣವಮಲವಾಗುತ್ತದೆ.** ಜ್ಞಾನ ಶಕ್ತಿಯು ಕ್ರಮವಾಗಿ ಸಂಕೋಚದಿಂದ ಭೇದಭಾವವನ್ನು ಪಡೆದು ಸರ್ವಜ್ಞತ್ವದಿಂದ ಕಿಂಚಿತ್‌ಜ್ಞತ್ವವನ್ನು ಹೊಂದಿ ಅಂತಃಕರಣ ಮತ್ತು ಜ್ಞಾನೇಂದ್ರಿಯಗಳ ದ್ವಾರಾ ಸಂಕೋಚಗ್ರಹಣದಿಂದ ಭಿನ್ನವೇದ್ಯ ಪ್ರಥಾ ರೂಪವಾದ **ಮಾಯೀಯಮಲವಾಗುತ್ತದೆ.** ಕ್ರಿಯಾಶಕ್ತಿಯು ಕ್ರಮವಾಗಿ ಭಿನ್ನವಾಗಿ ಸರ್ವಕರ್ತೃತ್ವವು ಕಿಂಚಿತ್ ಕರ್ತೃತ್ವವಾಗಿ ಕರ್ಮೇಂದ್ರಿಯಗಳ ರೂಪಗಳಿಂದ ಅತ್ಯಂತ ಪರಿಮಿತಸ್ಥಿತಿಯನ್ನು ಹೊಂದಿ ಪುಣ್ಯ ಪಾಪಗಳನ್ನಾಚರಿಸುವ **ಕಾರ್ಮಿಕಮಲವಾಗುತ್ತದೆ.** ಒಟ್ಟನಲ್ಲಿ ಸ್ವರೂಪ ಧರ್ಮಗಳಾದ ಸರ್ವ ಕರ್ತೃತ್ವ, ಸರ್ವಜ್ಞತ್ವ, ಪೂರ್ಣತ್ವ, ನಿತ್ಯತ್ವ, ವ್ಯಾಪಕತ್ವ ಶಕ್ತಿಗಳು ಸಂಕೋಚವನ್ನು ಹೊಂದಿ

ದವುಗಳಾಗಿ ಯಥಾಕ್ರಮವಾಗಿ ಕಲಾ, ವಿದ್ಯಾ, ರಾಗ, ಕಾಲ, ನಿಯತಿ ರೂಪಗಳಿಂದ ಪ್ರಕಾಶಿಸುತ್ತವೆ. ಇಲ್ಲಿ ಈ ವಿಧವಾಗಿ ಶಿವನು ಶಕ್ತಿ ದರಿದ್ರನಾಗಿ ಸಂಸಾರಿಯೆಂದೆನಿಸಿಕೊಳ್ಳುತ್ತಾನೆ. ಸಂಸಾರಾವಸ್ಥೆ ಯಲ್ಲಿರುವವನು ಶಕ್ತಿ ವಿಕಾಸವನ್ನು ಪಡೆದರೆ ಶಿವನೇ ಆಗುತ್ತಾನೆ.

ಈಶ್ವರನಿಗೆ ತನ್ನ ಸ್ವಾತಂತ್ರ್ಯ ಶಕ್ತಿಯನ್ನು ವಿಸ್ತರಿಸಿ ವಿಶ್ವವನ್ನು ಸೃಷ್ಟಿಮಾಡಬೇಕೆಂಬ ಸಂಕಲ್ಪವುಂಟಾದರೆ ತನ್ನ ಪೂರ್ಣಾನಂದಮಯ ವಾದ ಅಭೇದ ವ್ಯಾಪ್ತಿಯನ್ನು ಒತ್ತಟ್ಟಗಿಟ್ಟು ಅನೇಕ ಪ್ರಕಾರವಾಗಿರುವ ವಿಶ್ವರೂಪಿಯಾಗುತ್ತಾನೆ. ಹೀಗಾಗುವಾಗ ತಡೆಯಿಲ್ಲದ ಇಚ್ಛಾ ಶಕ್ತಿಯು ಸಂಕುಚಿತವಾದ ಹಾಗೆ ತೋರುವ ಸ್ಥಿತಿಯನ್ನು ಮಲಾವೃತಃ ಸಂಸಾರೀ ಎಂದು ಹೇಳುತ್ತಾರೆ. ಮಲಾವೃತಃ ಎಂದರೆ ಮಲಗಳಿಂದ ಸುತ್ತಲ್ಪಟ್ಟವನೆಂದು ಅರ್ಥವಾಗುತ್ತದೆ. ಈ ಅಭಿಪ್ರಾಯವು ಅಷ್ಟಾಗಿ ತೃಪ್ತಿಕರವಾದದ್ದಲ್ಲ. ಸುತ್ತುವುದು ಸುತ್ತಲ್ಪಡುವುದು ಎಂಬ ಎರಡು ಪದಾರ್ಥಗಳಿಲ್ಲ. ಅಪ್ರತಿಹತವಾದ ಶಕ್ತಿಯು ತನ್ನ ಸಂಕಲ್ಪದಿಂದಲೇ ಸಂಕೋಚವನ್ನು ಪಡೆದಿರುವಾಗ ಇನ್ನೊಂದು ಪದಾರ್ಥದಿಂದ ಸುತ್ತಲ್ಪಟ್ಟಹಾಗೆ ಎನ್ನುವುದು ಕೇವಲ ಉಪಚಾರೋಕ್ತಿ 'ಮಲಾವೃತ' ಎಂಬುವುದು ಭೇದವನ್ನು ತೋರಿಸುವುದಿಲ್ಲ. ಶಕ್ತಿ ಸಂಕೋಚವನ್ನು ಸೂಚಿಸುತ್ತದೆ. ಇಚ್ಛಾಶಕ್ತಿಯ ಸಂಕೋಚವಿಲ್ಲದಿರುವಾಗ ಪರಿಪೂರ್ಣಾನುಭವವಿದ್ದು ಸಂಕುಚಿತವಾದಾಗ ತಾನು ಪೂರ್ಣನಲ್ಲವೆಂಬ ಭಾವನೆಯುಂಟಾಗುವಿಕೆಯೇ ಆಣವಮಲ. ಸರ್ವ ವ್ಯಾಪಿಯೂ ಸರ್ವಜ್ಞನೂ ಆಗಿದ್ದ ವಿಭುವು ಅಂತಃಕರಣ ಬುದ್ಧಿ ಮತ್ತು ಇಂದ್ರಿಯಗಳಿಗೆ ಒಳಪಟ್ಟು ತುಂಬಾ ಸಂಕೋಚ ರೂಪವಾದ ತಿಳಿವಳಿಕೆಯನ್ನು ಪಡೆಯುವಿಕೆಯೇ ಮಾಯೀಯಮಲ. ಕ್ರಿಯಾಶಕ್ತಿ

ಸಂಕೋಚದಿಂದ ಸರ್ವಕರ್ತೃತ್ವ ಶಕ್ತಿಯಿದ್ದವನು ಕಿಂಚಿತ್ಕರ್ತೃತ್ವವುಳ್ಳವನಾಗಿ ಕರ್ಮೇಂದ್ರಿಯಗಳಿಗಧೀನನಾಗಿ ಅತ್ಯಂತ ಪರಿಮಿತವಾದ ಪುಣ್ಯ ಪಾಪರೂಪವಾದ ಕರ್ಮಗಳನ್ನಾಚರಿಸುವಿಕೆಯೇ ಕಾರ್ಮಿಕಮಲ. ಸಂಕ್ಷೇಪವಾಗಿ ಹೇಳುವುದಾದರೆ 'ಅಪೂರ್ಣಂಮನ್ಯತಾ'ರೂಪವಾದ ಸ್ಥಿತಿಯನ್ನುಂಟಾಗುವಿಕೆಯೇ ಆಣವಮಲ. 'ಭಿನ್ನವೇದ್ಯಪ್ರಥಾ'ರೂಪವಾದ ಸ್ಥಿತಿಯೇ ಮಾಯೀಯಮಲ. 'ಶುಭಾಶುಭಾನುಷ್ಠಾನಮಯ'ವಾದದ್ದು ಕಾರ್ಮಮಲ. ಈ ಮೂರು ಮಲಗಳೂ ರೂಪುಗೊಳ್ಳುವ ವೇಳೆಗೆ ಮೊದಲಿದ್ದ ಸರ್ವಜ್ಞತ್ವ, ಸರ್ವ ಕರ್ತೃತ್ವ, ಪೂರ್ಣತ್ವ, ನಿತ್ಯತ್ವ ವ್ಯಾಪಕಶಕ್ತಿಗಳು ಸಂಕುಚಿತವಾಗಿ ಕ್ರಮವಾಗಿ ಕಲಾ ವಿದ್ಯಾ ರಾಗ ಕಾಲ ನಿಯತಿಗಳೆಂಬ ಕಂಚುಕಗಳಾಗುತ್ತವೆ. ಇಂತಹ ಶಕ್ತಿ ಸಂಕೋಚದಿಂದ ಶಕ್ತಿ ದರಿದ್ರನಾಗಿರುವವನು ಸಂಸಾರಿ. ಶಕ್ತಿ ವಿಕಾಸವಾದರೆ ಶಿವನೇ ಆಗುತ್ತಾನೆ.

ಸಂಸಾರಾವಸ್ಥೆಯಲ್ಲಿರುವ ಮಿತ ಪ್ರಮಾತೃವು ಶಿವನೇ ಎಂದರೆ ಆ ಶಿವತ್ವಕ್ಕೆ ಉಚಿತವಾದ ನೆನಪೇನಾದರೂ ಇದೆಯೇ ಎಂಬ ಪ್ರಶ್ನೆಯು ಏಳುತ್ತದೆ. ಇದಕ್ಕೆ ಉತ್ತರ:

**ತಥಾಪಿ ತದ್ವತ್ ಪಂಚಕೃತ್ಯಾನಿಕರೋತಿ ॥೧೦॥**

ಬದ್ಧಾವಸ್ಥೆಯಲ್ಲಿರುವ ಶಿವನು ಬದ್ಧಾವಸ್ಥೆಯಲ್ಲಿಲ್ಲದಿರುವಾಗ ನಿರ್ವಹಿಸುತ್ತಿದ್ದ ಹಾಗೆಯೇ ಸಂಕುಚಿತವಾಗಿ ಪಂಚಕೃತ್ಯಗಳನ್ನು ನಿರ್ವಹಿಸುತ್ತಾನೆ.

ಚಿದಾತ್ಮಕನಾದ ಭಗವಂತನು ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗ್ರಹ ಈ ಐದು ಕೃತ್ಯಗಳನ್ನು ಬದ್ಧ ದಶೆಯಲ್ಲಿಯೂ

ನಿರ್ವಹಿಸುತ್ತಿರುತ್ತಾನೆ. ಅದೇ ಶಿವನೇ ಅಶುದ್ಧಾಧ್ವವನ್ನು ವಿಸ್ತರಿಸುವ ಕ್ರಮದಿಂದ ಪದಾರ್ಥ ತತ್ವಗಳನ್ನು ವಿಕಾಸಪಡಿಸುವಂತಹ ಸೃಷ್ಟಿ ಸಂಹಾರಾದಿಗಳನ್ನು ಮಾಡುವನೋ ಹಾಗೆಯೇ ಬದ್ಧಾವಸ್ಥೆಯಲ್ಲಿಯೂ ಸಂಕುಚಿತವಾದ ಚಿಚ್ಛಕ್ತಿಯಿಂದ ಪಂಚಕೃತ್ಯಗಳನ್ನು ಮಾಡುತ್ತಾನೆಂದು ಶ್ರೀ ಸ್ವಚ್ಛಂದ್ರ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಇದೇ ಬ್ರಹ್ಮವಾದಿಗಳಿಗೂ ಈ ದರ್ಶನಕಾರರಿಗೂ ಇರುವ ವ್ಯತ್ಯಾಸ.

ಈಶ್ವರನು ತನ್ನ ಸ್ವೇಚ್ಛೆಯಿಂದ ದೇಹ ಪ್ರಾಣ ಇಂದ್ರಿಯಾದಿಗಳನ್ನು ಸ್ವೀಕರಿಸಿದವನಾಗಿ ವ್ಯವಹಾರದಲ್ಲಿ ತನ್ನ ಇಚ್ಛೆಯಿಂದಲೇ ಒಳಗೆ ಚಿದ್ರೂಪದಿಂದ ಪ್ರಕಾಶಿಸುತ್ತಿರುವ ಅರ್ಥವನ್ನೇ ಹೊರಗೂ ಪ್ರಕಾಶಪಡಿಸುತ್ತಾನೆ. ದೇಹ ಪ್ರಾಣಾದಿ ಸ್ಥಿತಿಯನ್ನು ಪ್ರವೇಶಿಸಿದ ಚಿದ್ರೂಪಿಯಾದ ಮಹೇಶ್ವರನು ಬಹಿರ್ಮುಖೀಭಾವದ ದಶೆಯಲ್ಲಿ ಕಪ್ಪು ಬಿಳುಪು ನೀಲಾದಿ ಪದಾರ್ಥಗಳನ್ನು ಆಯಾ ದೇಶ ಕಾಲಾದಿಗಳಿಂದ ಯಾವಾಗ ಪ್ರಕಾಶಪಡಿಸುವನೋ ಆ ಅಂಶದಲ್ಲಿ ಈತನಿಗೆ ಸ್ರಷ್ಟೃತ್ವ. ಬೇರೆ ಕಾಲ ಬೇರೆ ದೇಶ ಬೇರೆ ವಿಷಯ ತೋರುವಾಗ (ಅನ್ಯದೇಶ ಕಾಲ ಆಭಾಸಾಂಶದಲ್ಲಿ) ಸಂಹರ್ತೃತ್ವ. ಯಾವ ಪದಾರ್ಥವು ಎಷ್ಟು ಹೊತ್ತು ತೋರುತ್ತಿರುವುದೋ ಅಷ್ಟು ಹೊತ್ತು ಸ್ಥಾಪಕತ್ವ. ಅಭಿನ್ನವಾಗಿರುವ ಚಿತ್ತು ಭಿನ್ನವಾಗಿ ಪದಾರ್ಥರೂಪವಾಗಿ ತೋರುವುದೇ ವಿಲಯ. ಭಿನ್ನವಾದ ಪದಾರ್ಥರೂಪವಾಗಿ ತೋರಿ ಅಭಿನ್ನವಾದ ಪ್ರಕಾಶೈಕ್ಯರೂಪದಿಂದ ಪ್ರಕಾಶಿಸುವಿಕೆಯೇ ಅನುಗ್ರಹ. ಈ ಪಂಚವಿಧ ಕೃತ್ಯಗಳು 'ಸ್ಪಂದ ಸಂದೋಹ'ದಲ್ಲಿ ವಿಶದವಾಗಿ ವಿವರಿಸಲ್ಪಟ್ಟಿವೆ. ಈ ರೀತಿಯಾಗಿ ತನ್ನ ಪಂಚವಿಧ ಕೃತ್ಯಗಳ ನಿರ್ವಹಣೆಯನ್ನು ದೃಢನಂಬಿಕೆಯಿಂದಲೂ ತಿಳಿವಳಿಕೆ

ಯಿಂದಲೂ ಯಾವಾಗಲೂ ಪರಿಶೀಲನೆ ಮಾಡುತ್ತಿರುವ ಭಕ್ತರಿಗೆ ಮಾಹೈಶ್ವರ್ಯವು ಪ್ರಕಟವಾಗುತ್ತದೆ. ಆದುದರಿಂದ ಯಾರು ಯಾವಾಗಲೂ ಇದನ್ನು ಪರಿಶೀಲಿಸುತ್ತಾರೆಯೋ ಅವರು ಈ ವಿಶ್ವವನ್ನು ಸ್ವರೂಪ ವಿಕಾಸವೆಂದು ತಿಳಿದು ಜೀವನ್ಮುಕ್ತರಾಗುತ್ತಾರೆ. ಯಾರು ಈ ರೀತಿಯಾದ ಪರಿಶೀಲನೆಯಿಲ್ಲದೆ ಈ ವಿಭಿನ್ನವಾದ ಪ್ರಮೇಯ ಸಮೂಹವನ್ನು ನೋಡುತ್ತಿರುವರೋ ಅವರು ಬದ್ಧಾತ್ಮರಾಗಿರುವರು.

ಈ ವಿಶ್ವಕ್ಕೆ ಬ್ರಹ್ಮನೇ ಕಾರಣನೆಂದು ಹೇಳುವ ವೇದಾಂತಿಗಳು ಬ್ರಹ್ಮ ಶುದ್ಧ ಬುದ್ಧ ಮುಕ್ತ ಸ್ವಭಾವವುಳ್ಳವನಾಗಿರುವನೆಂದು ಹೇಳುತ್ತಾರೆ. ಈ ವಿಶ್ವವೆಲ್ಲಾ ಅವಿದ್ಯೆಯ ವಿಲಾಸವೆಂದೂ ಈ ಅವಿದ್ಯೆಯು ಅನಿರ್ವಚನೀಯವೆಂದೂ ಹೇಳುತ್ತಾರೆ. ಅನಿರ್ವಚನೀಯವೆಂದರೆ ಸದ್ರೂಪವೂ ಅಲ್ಲ; ಅಸದ್ರೂಪವೂ ಅಲ್ಲ. ಇರುವುದನ್ನು ಇರುವ ಹಾಗೂ ಇಲ್ಲದಿರುವುದನ್ನು ಇಲ್ಲದಿರುವ ಹಾಗೂ ಹೇಳುವುದಕ್ಕೆ ಸಾಧ್ಯವಿಲ್ಲದೆ ಇರುವುದರಿಂದ 'ಅವಿದ್ಯೆಯು' ಅನಿರ್ವಚನೀಯ. ಈ ಕಾರಣದಿಂದ ವೇದಾಂತಿಗಳು "ಬ್ರಹ್ಮ ಸತ್ಯಂ ಜಗನ್ಮಿಥ್ಯಂ" ಎಂಬ ಅಭಿಪ್ರಾಯವುಳ್ಳವರಾಗಿದ್ದಾರೆ. ತತ್ವಜ್ಞಾನದಿಂದ ಮಿಥ್ಯಾಜ್ಞಾನವು ನಿವೃತ್ತಿಯಾಗುತ್ತದೆಂದೂ ಆಗ ಜೀವನೇ ಬ್ರಹ್ಮನಾಗುತ್ತಾನೆಂಬುದೂ ಅವರವಾದ. ಈ ದರ್ಶನದಲ್ಲಾದರೋ ವಿಶ್ವಕ್ಕೆ ಪರಮಶಿವನೇ ಕಾರಣ, ಈ ವಿಶ್ವವನ್ನು ತನ್ನ ಸ್ವಾತಂತ್ರ್ಯ ಶಕ್ತಿಯಿಂದ ನಡೆಸುತ್ತಾನೆ; ಉಪಸಂಹರಿಸುತ್ತಾನೆ. ವಿಶ್ವಸೃಷ್ಟಿಗೆ ಬೇರೆ ಇನ್ನೊಂದು ಪದಾರ್ಥ ಬೇಕಾಗಿಲ್ಲ. ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗ್ರಹಗಳೇ ಮೊದಲಾದ ಪಂಚಕೃತ್ಯಗಳನ್ನು ಪರಮಶಿವನು ನಿರ್ವಹಿಸುತ್ತಿರುತ್ತಾನೆ. ಶಿವನು ಮಹಾ

ವಿಶ್ವಸೃಷ್ಟಿ ಮಹಾ ವಿಶ್ವಸಂಹಾರಗಳನ್ನು ಹೇಗೆ ಮಾಡುತ್ತಾನೋ ಹಾಗೆಯೇ ಮಿತಪ್ರಮಾತೃವು ತನ್ನ ಸಂಕುಚಿತ ಪ್ರಪಂಚದಲ್ಲಿ ಮಿತವಾಗಿ ಪಂಚಕೃತ್ಯಗಳನ್ನು ಮಾಡುತ್ತಿರುತ್ತಾನೆ. ಪರಮಶಿವನು ತತ್ತ್ವಗಳನ್ನೂ ತತ್ತ್ವಗಳ ಪರಿಣಾಮ ರೂಪಗಳಾದ ಪದಾರ್ಥಗಳನ್ನೂ ಸೃಷ್ಟಿಮಾಡು ವಂತೆಯೇ ಮಿತಪ್ರಮಾತೃವು ಅಂತರ್ಮುಖವಾದ ಚಿತ್ತನ್ನು ಬಹಿರ್ಮುಖ ವ್ಯವಹಾರ ರೂಪದಲ್ಲಿಯೂ ಪುನಃ ಬಾಹ್ಯ ಪದಾರ್ಥಜ್ಞಾನವನ್ನು ಚಿದ್ರೂಪವಾಗಿ ಉಪಸಂಹರಿಸುವ ಕ್ರಮದಲ್ಲಿಯೂ ಪಂಚಕೃತ್ಯಗಳನ್ನು ಮಾಡುತ್ತಿರುತ್ತಾನೆ. ಪ್ರಪಂಚವು ಸತ್ಯ, ಜ್ಞಾತೃತ್ವ ಕರ್ತೃತ್ವಗಳು ಸತ್ಯ, ಸುಖದುಃಖಾನುಭವಗಳು ಸತ್ಯ, ಸೃಷ್ಟಿ ಸ್ಥಿತಿ ಮೊದಲಾದ ಪಂಚಕೃತ್ಯಗಳು ಸತ್ಯ ಎಂಬುದೇ ಈ ಕಾಶ್ಮೀರ ಸಂಪ್ರದಾಯದ ವೈಶಿಷ್ಟ್ಯ. ಬ್ರಹ್ಮವಾದಿಗಳಿಗೂ ಈ ದರ್ಶನಕಾರರಿಗೂ ಇಷ್ಟೇ ವ್ಯತ್ಯಾಸವೆಂದು ಹೇಳಬಹುದು.

ಮಹಾ ವಿಶ್ವಸೃಷ್ಟಿ ಸ್ಥಿತಿ ಪ್ರಳಯಗಳು ವಿಸ್ತಾರವಾಗಿ ನಡೆಯುತ್ತಿರುತ್ತವೆ. ಹಾಗೆಯೇ ಮಿತಪ್ರಮಾತೃವು ಪಂಚವಿಧ ಕೃತ್ಯಗಳನ್ನು ಯಾವಾಗಲೂ ನಿರ್ವಹಿಸುವ ಕ್ರಮವನ್ನು ಸಾಧಕನು ಪರಿಶೀಲಿಸಬೇಕು. ಸ್ವಭಾವದಲ್ಲಿ ಶುದ್ಧಚಿನ್ಮಯನಾಗಿದ್ದವನು ಪಾಂಚಭೌತಿಕವಾದ ದೇಹ, ಪ್ರಾಣಶಕ್ತಿ, ಇಂದ್ರಿಯಗಳು ಪುರ್ಯಷ್ಟಕ ಮೊದಲಾದ ಮಾಯೀಯ ತತ್ತ್ವಗಳ ಸಂಬಂಧವನ್ನು ಪಡೆದನಂತರ ಅಥವಾ ಈ ರೀತಿ ತತ್ತ್ವಮಯನಾದಾಗ ಜೀವಾವಸ್ಥೆಯನ್ನು ಹೊಂದುತ್ತಾನೆ. ಕೇಳುವುದು ನೋಡುವುದು ನೆನೆಯುವುದು ಊಹಿಸುವುದು ಮುಂತಾದ ಮನಸ್ಸಿನ ವ್ಯಾಪಾರಗಳು ಎಲ್ಲರ ಅನುಭವದಲ್ಲಿವೆ. ಇದನ್ನು ಸ್ವಲ್ಪ ಪರಿಶೀಲಿಸಿದರೆ ಪಂಚಕೃತ್ಯಗಳು ಸಿದ್ಧವಾಗುತ್ತವೆ. ಹೇಗೆಂದರೆ:—ನಾವು ಒಂದು

ಪದಾರ್ಥವನ್ನು ಒಂದು ಸಮಯದಲ್ಲಿ ಒಂದು ಪ್ರದೇಶದಲ್ಲಿ ಒಂದು ನಿಯತವಾದ ಆಕಾರದಿಂದ ನೋಡುತ್ತೇವೆ. ಅದರಲ್ಲಿರುವ ಬಣ್ಣ ಗುಣಗಳೇ ಮೊದಲಾದ ವಿಷಯಗಳು ನಮ್ಮ ಗಮನಕ್ಕೆ ಬೀಳುತ್ತವೆ. ಒಂದು ವಿಷಯವನ್ನು ನೋಡುವಾಗ ಇನ್ನೊಂದು ವಿಷಯವನ್ನು ಗಮನಿಸುವುದಕ್ಕಾಗುವುದಿಲ್ಲ. ಯಾವ ವಿಷಯವನ್ನು ಯಾವ ಕ್ಷಣದಲ್ಲಿ ನೋಡುತ್ತೇವೆಯೋ ಆ ಕ್ಷಣದಲ್ಲಿ ಆ ವಿಷಯಕ್ಕೆ ಸೃಷ್ಟಿ. ಬೇರೆ ದೇಶ ಬೇರೆ ಕಾಲ ಬೇರೆ ಪದಾರ್ಥ ಬೇರೆ ಆಕಾರ ಇವುಗಳು ಬಂದರೆ ಹಿಂದಿನ ಕ್ಷಣದಲ್ಲಿ ನೋಡುತ್ತಿದ್ದ ವಿಷಯಕ್ಕೆ ಸಂಹಾರ. ಕೆಲವು ನಿಮಿಷಗಳಕಾಲವೋ ಕೆಲವು ಗಂಟೆಗಳಕಾಲವೋ ನಾವು ಎಷ್ಟುಹೊತ್ತು ಅವಿಚ್ಛಿನ್ನವಾಗಿ ಒಂದು ವಿಷಯವನ್ನು ಗಮನಿಸುತ್ತೇವೆಯೋ ಅಷ್ಟು ಹೊತ್ತು ಸ್ಥಿತಿ. ಚಿತ್ತಿನಲ್ಲಿ ಅಖಂಡವಾಗಿದ್ದ ವಿಷಯಗಳನ್ನು ಈ ರೀತಿ ಭೇದರೂಪವಾಗಿ ಪ್ರಕಾಶಪಡಿಸುವಿಕೆಯೇ ತಿರೋಧಾನ (ವಿಲಯ). ಸಾವಿರಾರು ವಿಷಯಗಳನ್ನು ನೋಡಿ ಕೇಳಿದ್ದರೂ ಉತ್ತರ ಕ್ಷಣದಲ್ಲಿಯೇ ಚಿದೈಕ್ಯವನ್ನು ಪಡೆಯುವಿಕೆಯೇ ಅನುಗ್ರಹ. ಅಂದರೆ ಸಾವಿರಾರು ವಿಷಯಗಳು ನಮಗೆ ತಿಳಿದಿದ್ದರೂ ಪರಸ್ಪರ ವಿರುದ್ಧವಾದ ವಿಷಯಗಳಿದ್ದರೂ ಸ್ವಯಂಪ್ರಕಾಶವಾದ ಚಿತ್ತಿನಲ್ಲಿ ಅಭಿನ್ನವಾಗಿರುವಿಕೆಯೇ ಅನುಗ್ರಹ. ಭಕ್ತನು ದೃಢವಾದ ವಿಶ್ವಾಸದಿಂದ ಯಾವಾಗಲೂ ತನ್ನಲ್ಲಿ ನಡೆಯುತ್ತಿರುವ ಈ ವಿಕಲ್ಪಪ್ರವಾಹವನ್ನು ಪರಿಶೀಲಿಸುತ್ತಾ ಈ ಪಂಚವಿಧ ಕೃತ್ಯಗಳನ್ನು ವಿಶದವಾಗಿ ಅನುಶೀಲನ, ಪರಿಶೀಲನ, ಅನುಸಂಧಾನ, ಪರಾಮರ್ಶ ಈ ನಾಲ್ಕುಬಗೆಯಾದ ಭಾವನೆಗಳಿಂದ ಯಾವಾಗಲೂ ಮನನ ಮಾಡುತ್ತಿದ್ದರೆ ಈ ವಿಶ್ವವೆಲ್ಲಾ ಸ್ವರೂಪ ವಿಕಾಸಮಯವೆಂದು ತೋರುತ್ತದೆ. ಇಂತಹವರು ಶರೀರ

ಪ್ರಾಣಾದಿ ಸಂಬಂಧಗಳಿಂದ ಮಿತಪ್ರಮಾತೃಗಳಾಗಿದ್ದರೂ ಜೀವನ್ಮುಕ್ತರೇ ಆಗಿರುವರೆಂದು ಆಗಮುಗಳಲ್ಲಿ ಹೇಳಿದೆ. ಈ ಕ್ರಮುವನ್ನು ಬಿಟ್ಟು ಪ್ರಪಂಚದಲ್ಲಿ ನಮುಗುಂಟಾಗುವ ಜ್ಞಾನವನ್ನು ಕೇವಲ ಹ್ರಸ್ವ ದೃಷ್ಟಿಯಿಂದ ರಾಗ ದ್ವೇಷಗಳಿಗೆ ಉಪಯೋಗಿಸುವವರು ಬದ್ಧರು.

ಪಂಚವಿಧ ಕೃತ್ಯಗಳನ್ನು ಮಾಡುವುದರಲ್ಲಿ ಇದೇ ಪ್ರಕಾರವೋ ಅಥವಾ ರಹಸ್ಯರೂಪವಾಗಿ ಇನ್ನೇನಾದರೂ ಬೇರೆ ಕ್ರಮುವಿದೆಯೋ ಎಂಬ ಪ್ರಶ್ನೆಗೆ ಉತ್ತರವಾಗಿ ಮುಂದಿನ ಸೂತ್ರ.

**ಆಭಾಸನ ರಕ್ತಿ ವಿಮರ್ಶನ ಬೀಜಾವಸ್ಥಾಪನ**
**ವಿಲಾಪನ ತಸ್ತಾನಿ ॥ ೧೧ ॥**

ಜೀವಾತ್ಮನು ಆಭಾಸನ ರಕ್ತಿ ವಿಮರ್ಶನ ಬೀಜಾವಸ್ಥಾಪನ ವಿಲಾಪನಗಳಿಂದ ಪಂಚಕೃತ್ಯಗಳನ್ನು ನಿರ್ವಹಿಸುತ್ತಾನೆ.

ಶ್ರೀಮನ್ಮಹಾರ್ಥ ದೃಷ್ಟಿಯಿಂದ ಅಂದರೆ ತಾತ್ವಿಕ ದೃಷ್ಟಿಯಿಂದ ಹೇಳುವುದಾದರೆ ದೃಗಾದಿದೇವೀಪ್ರಸರಣಕ್ರಮುದಿಂದ (ಕಣ್ಣೇ ಮೊದಲಾದ ಇಂದ್ರಿಯಗಳ ದ್ವಾರಾ) ಯಾವ ಯಾವ ವಿಷಯುಗಳು ಪ್ರಕಾಶಿಸಲ್ಪಡುತ್ತವೆಯೋ ಅವೆಲ್ಲಾ ಸೃಷ್ಟಿ. ಅಂದರೆ ಇಂದ್ರಿಯಗಳಿಂದ ಯಾವ ಯಾವ ಪದಾರ್ಥಜ್ಞಾನವುಂಟಾಗುತ್ತದೆಯೋ ಅದೆಲ್ಲಾ ಸೃಷ್ಟಿ. ಇದಕ್ಕೆ ಅಭಾಸನವೆಂದು ಹೇಳುವುದು. ಹಾಗೆ ಸೃಷ್ಟಿ ಮಾಡಿದ ಸ್ಥಿತಿಯಲ್ಲಿ ಎಷ್ಟುಕಾಲ ಚಾಂಚಲ್ಯವಿಲ್ಲದೆ ಅದರಲ್ಲಿ ರಂಜಿಸುತ್ತದೆಯೋ ಅಂದರೆ ಸ್ಥಾಪಿಸಲ್ಪಟ್ಟಿರುತ್ತದೆಯೋ ಅದೇ ರಕ್ತಿ. ಇದನ್ನು ಸ್ಥಿತಿಯೆಂದು ಹೇಳುತ್ತೇವೆ. ಬಾಹ್ಯಜ್ಞಾನವನ್ನು ಅಂತರ್ಮುಖವಾಗಿಯೂ ಅಂತರ್ಮುಖೀನವಾದ ವಿಷಯುಗಳನ್ನು ಬಹಿರ್ಮುಖವಾಗಿಯೂ

ಮಾಡುವ ಚಮತ್ಕಾರದಲ್ಲಿ ಬಾಹ್ಯಜ್ಞಾನ ಅಂತರ್ಮುಖವಾಗಿ ಮಾಡು ವಿಕೆಯೇ ವಿಮರ್ಶನ. ಇದೇ ಚಮತ್ಕಾರ ರೂಪವಾದ ಸಂಹಾರ. ಯಾವಾಗ ಸಂಹರಿಸಲ್ಪಟ್ಟು ಒಳಗೆ ವಿಚಿತ್ರವಾದ ಸಂಸ್ಕಾರಗಳನ್ನು ಸೂಕ್ಷ್ಮಾದಿಸೂಕ್ಷ್ಮರೂಪದಿಂದ ಇಟ್ಟುಕೊಂಡಿದ್ದು ಇನ್ನೊಂದು ಸಮಯದಲ್ಲಿ ಅಭಿವ್ಯಕ್ತವಾಗುವ ಸ್ಥಿತಿಯಲ್ಲಿರುವುದೇ ಬೀಜಾವ ಸ್ಥಾಪನ. ಯಾವಾಗ ಒಳಗೆ ಸ್ಥಾಪಿಸಲ್ಪಟ್ಟಿರುವ ವಿಷಯಜ್ಞಾನ ಸಂಸ್ಕಾರಗಳು ಅನುಭವಿಸಲ್ಪಡುತ್ತಿದ್ದರೂ ಹಠಪಾಕಕ್ರಮದಿಂದ (ಅಕ್ಕಿ ಯನ್ನು ಬೇಯಿಸಿ ಮೆತ್ತಗಾಗುವಂತೆ ಮಾಡುವ ಕ್ರಮದಿಂದ) ಆ ಸಂಸ್ಕಾರಗಳು ಕಾಲಕ್ರಮದಲ್ಲಿ ನಿಶ್ಶೇಷವಾಗಿ ಚಿದಗ್ನಿಯಲ್ಲಿ ಏಕೀಭವಿಸಿ ಬೆರೆತುಹೋಗುತ್ತವೆಯೋ ಅಂತಹ ಪರಿಪೂರ್ಣಸ್ಥಿತಿಗೆ ಅನುಗ್ರಹ ವೆಂದೂ ವಿಲಾಪನವೆಂದೂ ಹೆಸರು. ಇಂತಹ ಪಂಚವಿಧಕೃತ್ಯ ಕಾರಿತ್ವವು ಎಲ್ಲರಿಗೂ ಯಾವಾಗಲೂ ಸನ್ನಿಹಿತವಾಗಿ ನಡೆಯುತ್ತಿದ್ದರೂ ಸದ್ಗುರೂಪದೇಶವಿಲ್ಲದೆ ಪ್ರಕಾಶಿಸುವುದಿಲ್ಲ. ಪ್ರಕಾಶಿಸುವುದಕ್ಕೋಸ್ಕರ ಸದ್ಗುರು ಸೇವೆಯನ್ನನುಸರಿಸಬೇಕು.

ಯಾರಿಗೆ ಪಂಚವಿಧಕೃತ್ಯಪರಿಜ್ಞಾನವೂ ಸದ್ಗುರೂಪದೇಶವೂ ಇಲ್ಲವೋ ಅವರಿಗೆ ಆವರಿಸಲ್ಪಟ್ಟ ಸ್ವಸ್ವರೂಪದ ಸ್ವಾಭಾವಿಕ ಶಕ್ತಿ ಗಳಿಂದ ವ್ಯಾಮೋಹವುಂಟಾಗುತ್ತದೆ.

ತದಪರಿಜ್ಞಾನೆ ಸ್ವಶಕ್ತಿಭಿರ್ವ್ಯಾಮೋಹಿತತಾ
ಸಂಸಾರಿತ್ವಂ ॥ ೧೨ ॥

ಪಂಚಕೃತ್ಯಗಳ ತಿಳಿವಳಿಕೆಯಿಲ್ಲದೆ ಸ್ವಶಕ್ತಿಗಳಿಂದ ವ್ಯಾಮೋ ಹಿತನಾಗಿರುವುದೇ ಸಂಸಾರಿ ದಶೆ.

ಮೇಲೆ ಹೇಳಿದಂತೆ ಯಾವಾಗಲೂ ಸಂಭವಿಸುತ್ತಿರುವ ಪಂಚ ವಿಧ ಕೃತ್ಯಕಾರಿತ್ವವು ತಿಳಿಯದಿದ್ದರೆ ಶಕ್ತಿಪಾತಕ್ಕೆ ಕಾರಣವಾದ ತನ್ನ ಸಹಜ ಶಕ್ತಿಗಳ ಪ್ರಕಾಶವುಂಟಾಗುವುದಿಲ್ಲ. ಅಂತಹ ಅಪ್ರಕಾಶಸ್ಥಿತಿಯಲ್ಲಿ ತನ್ನ ಶಕ್ತಿಗಳಿಂದ ವ್ಯಾಮೋಹಿತನಾಗಿ ಬಗೆ ಬಗೆಯಾದ ಪರಸ್ಪರ ವಿರುದ್ಧವಾಗಿರುವ ಲೌಕಿಕ ವಿಷಯಗಳಿಂದ ಮತ್ತು ಶಾಸ್ತ್ರಗಳ ಅಧ್ಯಯನದಿಂದುಂಟಾದ ಸಂಶಯಗಳಿಂದ ಕದಡಿರುವಿಕೆಯೇ ಅಂದರೆ ಹೊಯ್ದಾಟದಲ್ಲಿರುವಿಕೆಯೇ ಸಂಸಾರಿತ್ವ. ಚಿತ್ಪ್ರಕಾಶದಿಂದ ಬೇರೆಯಾಗದಿರುವುದಾಗಿ ಮಹಾ ಮಂತ್ರರೂಪವಾದ ಪೂರ್ಣಾಹಂ ವಿಮರ್ಶ ಮಯವಾದ **ಪರಾವಾಕ್ ಶಕ್ತಿ**ಯೊಂದಿದೆ. ಇದು ಅಕಾರಾದಿ ಕ್ಷಕಾರದ ವರೆಗಿರುವ ವರ್ಣರೂಪದಿಂದ ಎಲ್ಲಾ ಶಕ್ತಿಸಮೂಹಗಳನ್ನೂ ಒಳಗೊಂಡಿದೆ. ಆ ಪರಾಶಕ್ತಿಯು ಪಶ್ಯಂತೀ, ಮಧ್ಯಮಾ, ವೈಖರೀ ಎಂಬ ಈ ಮೂರು ಹಂತಗಳ ಕ್ರಮದಿಂದ ಗ್ರಾಹಕರ (ಬದ್ಧಜೀವರ) ಸ್ಥಿತಿಯನ್ನು ಬೆಳಗಿಸುತ್ತದೆ. ಅಲ್ಲಿ 'ಪರಾ'ರೂಪದಲ್ಲಿ ತನ್ನ ಸ್ವರೂಪವನ್ನು ತೋರ್ಪಡಿಸದೆ ಬದ್ಧಾತ್ಮನಿಗೆ ಅಸ್ಫುಟವಾದ ಅಸಾಧಾರಣವಾದ ಪದಾರ್ಥಗಳನ್ನು ಪ್ರಕಾಶಪಡಿಸುತ್ತಾ ಪ್ರತಿ ಕ್ಷಣದಲ್ಲಿಯೂ ಹೊಸದಾಗಿ ವಿಕಲ್ಪಕ್ರಿಯೆಗಳನ್ನು ಹೊರಹೊಮ್ಮಿಸುತ್ತದೆ. ವಿಕಲ್ಪವಿಲ್ಲದ ಪರಿಶುದ್ಧವಾದ ಸ್ವಸ್ಥಿತಿಯನ್ನು ವಿಕಲ್ಪಗಳಿಂದ ಆಚ್ಛಾದಿಸಲ್ಪಟ್ಟಂತೆಯೇ ತೋರಿಸುತ್ತದೆ. ಅಕಾರಾದಿ ಕ್ಷಕಾರದವರೆಗಿರುವ ಐವತ್ತು ವರ್ಣಗಳು ದೇವತಾಮಯವಾಗಿವೆ. ಈ ವರ್ಣಗಳಲ್ಲಿ ಬ್ರಾಹ್ಮ್ಯಾದಿ ದೇವತೆಗಳು ಆ ಪರಾಶಕ್ತಿಯ ಅಂಶಗಳಾಗಿ ಕಕಾರಾದಿ ವರ್ಣಗಳ ದ್ವಾರಾ ವಿಚಿತ್ರ ಶಕ್ತಿಗಳುಳ್ಳವುಗಳಾಗಿವೆ. ಇವುಗಳಿಂದ ಮೋಹಗೊಳಿಸಲ್ಪಟ್ಟು ದೇಹ ಪ್ರಾಣಾದಿಗಳನ್ನೇ ಸಂಕುಚಿತವಾದ ಭಾವನೆಗಳಿಂದ ತನ್ನ ಸ್ವರೂಪ

ವೆಂದು ಮೂಢರು ತಿಳಿಯುತ್ತಾರೆ. ಅಕ್ಷರಮಯವಾದ ಈ ಬ್ರಾಹ್ಮ್ಯಾದಿ ದೇವತೆಗಳು ಪಶು ದಶೆಯಲ್ಲಿ ಭೇದ ವಿಷಯಗಳಲ್ಲಿ ಸೃಷ್ಟಿ ಸ್ಥಿತಿಗಳನ್ನೂ ಅಭೇದ ವಿಷಯದಲ್ಲಿ ಸಂಹಾರವನ್ನೂ ಪ್ರಕಟಿಸುತ್ತವೆ. ಇದರಿಂದ ಬದ್ಧಾತ್ಮನಿಗೆ ಪಶು ದಶೆಯಲ್ಲಿ ಪರಿಮಿತವಾದ ವಿಕಲ್ಪ ಗಳುಂಟಾಗುತ್ತವೆ. ಅದೇ ಪರಾಶಕ್ತಿಯು ಪತಿ ದಶೆಯಲ್ಲಿಯಾದರೋ ಭೇದ ವಿಷಯದಲ್ಲಿ ಸಂಹಾರವನ್ನೂ ಅಭೇದ ವಿಷಯಗಳಲ್ಲಿ ಸೃಷ್ಟಿ ಸ್ಥಿತಿ ಗಳನ್ನೂ ಪ್ರಕಟಿಸುತ್ತದೆ. ಈ ಪರಾಶಕ್ತಿಯು ಯಾವಾಗಲೂ ಅನು ಸಂಧಾನಮಾಡುವ ಸಾಧಕನಿಗೆ ಕ್ರಮಕ್ರಮವಾಗಿ ವಿಕಲ್ಪಗಳನ್ನು ತಿರಸ್ಕರಿಸಿ ಭೈರವ ಮುದ್ರಾನುಪ್ರವೇಶಮಯವಾದ (ಸ್ವಸ್ವರೂಪ ಸಾಕ್ಷಾತ್ಕಾರ) ಮಹತ್ತರವಾದ ಅವಿಕಲ್ಪ ಭೂಮಿಯನ್ನೇ ಪ್ರಕಾಶ ಪಡಿಸುತ್ತದೆ. ಈ ವಿಶ್ವವೆಲ್ಲಾ ತನ್ನ ವೈಭವವೆಂದು ತಿಳಿದು ವಿಶ್ವಾತ್ಮ ನಾಗಿ ಅನುಸಂಧಾನಮಾಡುವವನಿಗೆ ವಿಕಲ್ಪಗಳು ಪ್ರಸರಿಸುತ್ತಿದ್ದರೂ ಮಾಹೇಶತ್ವವು ಅವ್ಯಾಹತವಾಗಿರುತ್ತದೆಂದು ವಿಜ್ಞಾನಭೈರವದಲ್ಲಿ ಹೇಳಲ್ಪಟ್ಟಿದೆ.

**ಸರ್ವೋsಹಮಯಂ ವಿಭವಃ ಇತ್ಯೇವಂ ಪರಿಜಾನತಃ ।**
**ವಿಶ್ವಾತ್ಮನೋ ವಿಕಲ್ಪಾನಾಂ ಪ್ರಸರೇಪಿ ಮಹೇಶತಾ ॥**

ಈ ರೀತಿಯಾಗಿ ಪರಾಮರ್ಶಮಾಡುವವರು ಚಿದಾನಂದಾವೇಶ ವನ್ನು ಪಡೆದು ನಿತ್ಯಾನಂದವನ್ನನುಭವಿಸುತ್ತಾರೆ. ಹಿಂದೆ ಹೇಳಿದ ಹಾಗೆ ಪಂಚವಿಧ ಶಕ್ತಿಗಳಿಂದ ವ್ಯಾಮೋಹಿತನಾಗಿರುವುದೇ ಸಂಸಾರಿತ್ವ.

ಚಿಚ್ಛಕ್ತಿಯೇ ವಿಶ್ವವನ್ನು ಹೊರಹೊಮ್ಮಿಸುವುದು. ಪ್ರಮಾತೃ ಗಳಿಗೆ ವಕ್ರವಾದ ಸಂಸಾರಿತ್ವವನ್ನುಂಟುಮಾಡುವುದರಿಂದ ವಾಮೇಶ್ವರಿ

ಎಂಬ ಹೆಸರುಳ್ಳದ್ದಾಗಿದೆ. ಮುಂದೆ ಖೇಚರೀ ಗೋಚರೀ ದಿಕ್ಚರೀ ಭೂಚರೀ ಎಂಬ ರೂಪಗಳಿಂದ ಎಲ್ಲಾ ಪ್ರಮಾತೃಗಳೂ, ಅಂತಃಕರಣ ಬಹಿಷ್ಕರಣಗಳೂ ಭಾವ ಸ್ವಭಾವಗಳಿಂದ ಪದಾರ್ಥರೂಪವಾಗಿ ಸ್ಫುರಿಸುತ್ತದೆ. ಪಶುಭೂಮಿಕೆಯಲ್ಲಿ ಶೂನ್ಯಪದದಲ್ಲಿದ್ದು ಕಿಂಚಿತ್ಕರ್ತೃತ್ವಾದಿ ಕಲಾದಿ ಶಕ್ತಿಗಳಿಂದ **ಖೇಚರೀ** ರೂಪವನ್ನು ಪಡೆಯುತ್ತದೆ. ಪಾರಮಾರ್ಥಿಕವಾದ ಚಿದ್ಗಗನ ಸ್ವರೂಪವನ್ನು ಮರೆಮಾಚಿಕೊಂಡು ಪ್ರಕಾಶಿಸುತ್ತದೆ. ಎರಡನೆಯದಾದ ಗೋಚರೀ ಚಕ್ರದಿಂದ ಭೇದ ನಿಶ್ಚಯದಲ್ಲಿ ಅಭಿಮಾನ ವಿಕಲ್ಪಗಳೇ ಪ್ರಧಾನವಾಗಿರುವ ಅಂತಃಕರಣ ರೂಪವನ್ನು ಪಡೆಯುತ್ತದೆ. **ಗೋಚರೀ** ಸ್ಥಿತಿಯಲ್ಲಿ ಅಭಿನ್ನವಾದ ತನ್ನ ಸ್ವರೂಪವನ್ನು ಮರೆಮಾಚಿಕೊಂಡು ಭೇದ ನಿಶ್ಚಯಾತ್ಮಕವಾದ ಅತಾತ್ವಿಕವಾದ ಸ್ವರೂಪದಿಂದ ಪ್ರಕಾಶಿಸುತ್ತಿರುತ್ತದೆ. ಭೇದವನ್ನಾಲೋಚಿಸುನಂತಹ ಬಹಿಷ್ಕರಣ ದೇವತಾರೂಪಗಳನ್ನು ಪಡೆದು ದಿಕ್ಚರೀ ಚಕ್ರಗಳೆಂದೆನಿಸಿಕೊಳ್ಳುತ್ತದೆ. ಈ ಸ್ಥಿತಿಯಲ್ಲಿ ಅಭೇದ ಪ್ರಕಾಶವು ಮರೆಮಾಚಲ್ಪಟ್ಟು ಸ್ಫುರಿಸುತ್ತಿರುತ್ತದೆ. ಸಾರ್ವಾತ್ಮ್ಯ ಸ್ವಭಾವವುಳ್ಳ ಇವನ ಸ್ವರೂಪವು ಮರೆಮಾಚಲ್ಪಟ್ಟು ತಾನು ಬೇರೆ ಎಂಬ ಭಾವನೆಯು ಭೂಚರೀ ಚಕ್ರದಲ್ಲುಂಟಾಗುತ್ತದೆ. ಇದೆಲ್ಲವೂ ಪಶು ವಿಷಯ. ಪತಿ ಭೂಮಿಕೆಯಲ್ಲಾದರೋ ಇದೇ ಶಕ್ತಿಗಳು ಸರ್ವಕರ್ತೃತ್ವರೂಪವಾದ ಶಕ್ತಿಯಿಂದ ಚಿದ್ಗಗನಚರೀರೂಪವಾಗಿಯೂ ಅಭೇದ ನಿಶ್ಚಯರೂಪವಾದ ಗೋಚರಿಯಾಗಿಯೂ ಅಭೇದ ಆಲೋಚನಾರೂಪವಾದ ದಿಕ್ಚರಿಯಾಗಿಯೂ ತನ್ನ ಶರೀರದಂತೆ ಅಭಿನ್ನ ಪ್ರಥೆಯುಳ್ಳ ಪ್ರಮೇಯರೂಪವಾದ ಭೂಚರೀರೂಪವಾಗಿಯೂ ಪತಿ ಹೃದಯವಿಕಾಸದಿಂದ ಸ್ಫುರಿಸುತ್ತದೆ.

ಖೇಚರೀಸ್ಥಿತಿಯಲ್ಲಿ ಆ ಮಹಾಚಿತ್ತು ಪಂಚಕಂಚುಕಗಳಿಂದ ಕೂಡಿ ಸ್ವಸ್ವರೂಪವನ್ನು ಮರೆಸಿಕೊಂಡು ಜೀವ ಭಾವವನ್ನು ಹೊಂದಿತು. ಗೋಚರೀಸ್ಥಿತಿಯಲ್ಲಿ ಮನಶ್ಶಕ್ತಿಯಾಯಿತು. ಅನೇಕ ವಿಕಲ್ಪಗಳಿಗೆ ಕಾರಣವಾದ ಅಂತಃಕರಣರೂಪವನ್ನು ಪಡೆಯಿತು. ದಿಕ್ಚರೀಸ್ಥಿತಿಯಲ್ಲಿ ಬಾಹ್ಯೇಂದ್ರಿಯಗಳಾಯಿತು. ಭೂಚರೀಸ್ಥಿತಿಯಲ್ಲಿ ಭೇದಜ್ಞಾನವನ್ನುಂಟುಮಾಡುವ ಬಾಹ್ಯ ವಿಷಯರೂಪವನ್ನು ತಾಳಿತು. ಪರಾಶಕ್ತಿಯು ಜೀವನಲ್ಲಿ ಅವರೋಹಣಕ್ರಮದಲ್ಲಿ ಈ ನಾಲ್ಕು ರೂಪಗಳನ್ನು ಹೊಂದುತ್ತದೆ. ಈ ವಿಷಯವನ್ನು ಸಿದ್ಧಪುರುಷನಾದ ಭಟ್ಟ ದಾಮೋದರನು ಈ ರೀತಿ ಹೇಳುತ್ತಾನೆ.

ಪೂರ್ಣಾವಚ್ಛಿನ್ನಮಾತ್ರಾಂತರ್ಬಹಿಷ್ಕರಣಭಾವಗಾಃ ।
ವಾಮೇಶಾದ್ಯಾಃ ಪರಿಜ್ಞಾನಾಜ್ಞಾನಾತ್ ಸ್ಯುರ್ಮುಕ್ತಿ ಬಂಧದಾಃ ॥

ಇರುವ ಅಂತಃಕರಣ ಬಹಿಷ್ಕರಣ ಪ್ರಮೇಯ ಸ್ವಭಾವಗಳಾಗಿರುವ ವಾಮೇಶ್ವರೀ ಮೊದಲಾದ ಶಕ್ತಿಗಳನ್ನು ತಿಳಿಯುವುದರಿಂದ ಮುಕ್ತಿ. ತಿಳಿಯದೆ ಇರುವುದರಿಂದ ಬಂಧ. ಈ ಶಕ್ತಿಗಳಿಂದ ವ್ಯಾಮೋಹಿತನಾಗಿರುವುದೇ ಸಂಸಾರಿತ್ವ.

ಚಿದಾತ್ಮನಾದ ಪರಮೇಶ್ವರನು ಯಾವಾಗಲೂ ಚ್ಯುತಿಯಿಲ್ಲದೆ ಒಂದೇ ಆಗಿರುವ ಸ್ಫುರತ್ತಾರೂಪವಾದ ಕರ್ತೃತ್ವ ಪ್ರಧಾನವಾದ ಐಶ್ವರ್ಯ ಶಕ್ತಿಯಿಂದ ವಿರಾಜಿಸುತ್ತಿರುತ್ತಾನೆ. ಆ ಮಹಾಶಕ್ತಿಯು ಯಾವಾಗ ತನ್ನ ಸ್ವರೂಪವನ್ನು ಮರೆಸಿಕೊಂಡು ಪಶುಸ್ಥಿತಿಯಲ್ಲಿ ಪ್ರಾಣಾಪಾನಸಮಾನವೇ ಮೊದಲಾದ ಶಕ್ತಿ ದಶೆಗಳಿಂದ ಕಂಗೊಳಿಸು

ತ್ತದೆಯೋ ಆಗ ಜಾಗ್ರತ್‌ಸ್ವಪ್ನ ಸುಷುಪ್ತಿ ದಶೆಗಳಿಂದ ದೇಹ ಪ್ರಾಣ ಪುರ್ಯಷ್ಟಕ ಕಲಾ ಮೊದಲಾದವುಗಳಿಂದ ಮೋಹಗೊಳಿಸುತ್ತದೆ. ಈ ಮೋಹಗೊಳ್ಳುವಿಕೆಯೇ ಸಂಸಾರಿತ್ವ. ಯಾವಾಗ ಮಧ್ಯ ಮೋಲ್ಲಾಸವು ಉದಾನಶಕ್ತಿಯನ್ನು ವಿಕಾಸಗೊಳಿಸುತ್ತದೆಯೋ ಹಾಗೆಯೇ ವಿಶ್ವವನ್ನು ವ್ಯಾಪಿಸಿರುವ ವ್ಯಾನಶಕ್ತಿಯನ್ನೂ ವಿಕಾಸ ಗೊಳಿಸುತ್ತದೆ. ಆ ಸ್ಥಿತಿಯಲ್ಲಿ ತುರ್ಯಾ ಮತ್ತು ತುರ್ಯಾತೀತವಾದ ಪೂರ್ಣ ಚಿದಾನಂದಾನುಭವವುಂಟಾಗುತ್ತದೆ. ಈ ರೀತಿಯಾದ ಸಿದ್ಧಾವಸ್ಥೆಯನ್ನು ಪಡೆದಿರುವವನು ಜೀವನ್ಮುಕ್ತನಾಗುತ್ತಾನೆ. ಪಂಚಕೃತ್ಯಗಳು, ವ್ಯಕ್ತಿಗೇನೆ ಅನ್ವಯಿಸುವ ಖೇಚರೀ ಗೋಚರೀ ವಿಷಯಗಳು, ಪ್ರಾಣಾಪಾನ ಸಮಾನ ವಿಷಯಗಳು ಇಂತಹ ಸ್ವಶಕ್ತಿ ಗಳಿಂದಲೇ ವ್ಯಾಮೋಹಿತನಾಗುವ ಕ್ರಮವು ವಿವರಿಸಲ್ಪಟ್ಟಿತು.

ಒಂಭತ್ತನೆಯ ಸೂತ್ರದಲ್ಲಿ ಚಿತ್ಪ್ರಕಾಶ ಸಂಕೋಚದಿಂದ ಸಂಸಾರಿ ಯಾಗುತ್ತಾನೆಂದು ಹೇಳಿದೆ. ಈ ಸೂತ್ರದಲ್ಲಾದರೋ ತನ್ನ ಶಕ್ತಿ ಗಳಿಂದ ವ್ಯಾಮೋಹಿಸಲ್ಪಟ್ಟು ಸಂಸಾರಿಯಾಗುವನು ಎಂದು ಬೇರೆ ಬಗೆ ಯಾಗಿ ಹೇಳಿದೆ. ಸಂಕುಚಿತ ಶಕ್ತಿಯುಳ್ಳವನಾಗಿದ್ದರೂ ದೇಹ ಪ್ರಾಣಾದಿಗಳಿಂದ ಕೂಡಿದ್ದರೂ ತನ್ನ ಶಕ್ತಿಗಳಿಂದ ವ್ಯಾಮೋಹಿತನಾಗ ದಿದ್ದರೆ – ಆಗಮಗಳಲ್ಲಿ ಹೇಳಿರುವಂತೆ ಬದ್ಧಾತ್ಮನು ಶಿವಭಟ್ಟಾರಕನೇ ಆಗಿರುತ್ತಾನೆಂದು ಇನ್ನೊಂದು ರೀತಿಯಾಗಿ ಹೇಳಿದೆ. ಪರಮೇಶ್ವರನು ಮನುಷ್ಯ ದೇಹವನ್ನು ಹೊಂದಿ ಮರೆಮಾಚಿಕೊಂಡಿದ್ದಾನೆಂದು ಆಗಮ ದಲ್ಲಿ ಹೇಳಲ್ಪಟ್ಟದೆ. ಯಾವ ಸೂಕ್ಷ್ಮದೃಷ್ಟಿಯುಳ್ಳವರು ಶರೀರ ವನ್ನಾಗಲಿ ಬಾಹ್ಯ ಪದಾರ್ಥಗಳನ್ನಾಗಲಿ ಮೂವತ್ತಾರು ತತ್ವಮಯ

ವೆಂದೂ ಶಿವರೂಪವಾಗಿದೆಯೆಂದೂ ನೋಡುವರೋ ಅವರು ಸಿದ್ಧಿ ಯನ್ನು ಪಡೆಯುವರು.

ಶಿವನಿಗೆ ಸ್ವಭಾವಸಿದ್ಧವಾಗಿರುವವುಗಳು ಚಿತ್, ಆನಂದ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳು. ಇವುಗಳಲ್ಲಿ ಚಿಚ್ಛಕ್ತಿ ಆನಂದಶಕ್ತಿ ಇವೆರಡೂ ಸ್ವರೂಪವನ್ನು ನಿರೂಪಿಸುವಂಥವುಗಳು. ಇಚ್ಛಾಜ್ಞಾನ ಕ್ರಿಯಾಶಕ್ತಿಗಳ ಸಂಕೋಚವೇ ಆಣವ ಮಾಯಿಯ ಕಾರ್ಮಿಕ ಮಲ ಗಳೆಂದು ಹಿಂದೆಯೇ ಹೇಳಿದೆ. ಈಶ್ವರ ಶಕ್ತಿಗಳು ಎಷ್ಟು ಬಗೆಯಾಗಿ ಹೊರಹೊಮ್ಮುತ್ತವೆಂಬುದನ್ನು ವಿಶದವಾಗಿ ಇಷ್ಟೇ ಎಂದು ಹೇಳುವುದ ಕ್ಕಾಗುವುದಿಲ್ಲ. ಈ ಈಶ್ವರನ ಶಕ್ತಿಗಳು ಶಿವನನ್ನು ಬಿಟ್ಟು ಬೇರೆಯಿಲ್ಲ. ಶಕ್ತಿಯೂ ಶಕ್ತಿಯನ್ನುಳ್ಳ ಶಕ್ತನೂ ಬೇರೆಯಾಗಿರುವುದಿಲ್ಲ. ಶಿವನು ಚಿನ್ಮಯನಾಗಿರುವುದರಿಂದ ಆತನ ಶಕ್ತಿಯು ಮೊದಲು ಚಿದ್ವಿಕಾಸ ರೂಪವಾದ ಪೂರ್ಣಾಹಂ ವಿಮರ್ಶರೂಪವಾಗಿಯೇ ಇರುತ್ತದೆ. ಇದು ಪ್ರಸರಿಸುವ ಕ್ರಮದಲ್ಲಿ ಅನಂತಭೇದಗಳನ್ನು ಪಡೆಯುತ್ತದೆ. ಈ ಶಕ್ತಿಯ ಪ್ರಸಾರವನ್ನು ನಾವು ಮೂರು ಬಗೆಯಾಗಿ ಎಣಿಸಬಹುದು. ಒಂದು ಗ್ರಾಹ್ಯಗಳಾಗಿರುವ ಮೂವತ್ತೈದು ತತ್ವಗಳ ರೂಪ. ಇನ್ನೊಂದು ಗ್ರಾಹಕರೂಪವಾದ ಸಪ್ತಪ್ರಮಾತೃಗಳು. ಮೂರ ನೆಯದು ಪರಾಪಶ್ಯಂತೀ ಮಧ್ಯಮಾ ವೈಖರೀರೂಪದಿಂದಿದೆ. ಈಪರಿಯ ಮೂರು ಪ್ರಕಾಶಗಳಲ್ಲಿ ಮೂವತ್ತೈದು ತತ್ವಗಳ ಮತ್ತು ಪ್ರಮಾತೃಗಳ ವಿಷಯ ಹಿಂದೆಯೇ ಹೇಳಲ್ಪಟ್ಟಿದೆ. ಚಿನ್ಮಯನಾದ ಶಿವನು ಸ್ವಾತಂತ್ರ್ಯ ಶಕ್ತಿಯಿಂದಲೇ ಎಲ್ಲಾ ವಿಶ್ವವನ್ನೂ ಪ್ರಕಟಪಡಿಸು ವಾಗ ಅನೇಕ ಶಕ್ತಿಗಳನ್ನು ಹೊರಹೊಮ್ಮಿಸುತ್ತಾನೆ. ಇದರಲ್ಲಿ ಪರಾ ಶಕ್ತಿಯು ತನ್ನ ಸಹಜಸ್ವರೂಪವನ್ನು ಮಿತಪ್ರಮಾತೃವಿಗೆ (ಜೀವನಿಗೆ)

ತೋರ್ಪಡಿಸುವುದಿಲ್ಲ. ಈ ಪರಾಶಕ್ತಿಯು ಮಹಾಮಂತ್ರರೂಪವಾಗಿ ಮೊದಲು ಅಭಿನ್ನವಾಗಿರುತ್ತದೆ. 'ಆಕೂತ'ದಿಂದ ಪಶ್ಯಂತೀಸ್ಥಿತಿಯನ್ನು ಪಡೆಯುತ್ತದೆ. ಮಧ್ಯಮಾಸ್ಥಿತಿಯನ್ನು ಪಡೆದಾಗ ಗ್ರಾಹ್ಯ ಗ್ರಾಹಕಾಂಶಗಳು ಸಮಾನವಾಗಿರುತ್ತವೆ. ವೈಖರೀ ದಶೆಗೆ ಬರುವ ವೇಳೆಗೆ ಅಕಾರಾದಿ ಕ್ಷಕಾರಾಂತವಾದ ಐವತ್ತು ಅಕ್ಷರರೂಪವಾಗಿ ಹೊರಹೊಮ್ಮುತ್ತದೆ. ಅಕ್ಷರಗಳಿಂದ ಪದಗಳೂ ಪದಗಳಿಂದ ವಾಕ್ಯಗಳೂ ವಾಕ್ಯಗಳಿಂದ ಅರ್ಥ ತಾತ್ಪರ್ಯಗಳೂ ಅನುಭವಿಸಲ್ಪಡುತ್ತಿರುತ್ತವೆ. ಈ ರೀತಿಯಾಗಿ ಅಕ್ಷರಗಳು ಮಿತಪ್ರಮಾತೃವಿಗೆ ಅನಂತವಾದ ವಿಕಲ್ಪಗಳನ್ನು ತೋರಿಸುತ್ತಿರುತ್ತವೆ. ಅಕ್ಷರಗಳ ಹಿನ್ನೆಲೆಯೇನು ಅದರ ಮೂಲಸ್ವರೂಪವೇನು ಎಂದು ನಾವು ಅಷ್ಟಾಗಿ ಯೋಚಿಸುವುದಿಲ್ಲ. ಶ್ರದ್ಧೆಯಿಂದ ವಿಮರ್ಶೆಮಾಡುವವರಿಗೆ ಅದರ ವೈಶಿಷ್ಟ್ಯದ ಅರಿವಾಗುತ್ತದೆ. ಪರಾಶಕ್ತಿಯು ಬೇರಿದ್ದ ಹಾಗೆ, ವೈಖರಿಯು ಮರಕ್ಕೆ ಎಲೆಗಳೂ ಪೂಗಳೂ ಇದ್ದಹಾಗೆ, ಈ ರೀತಿಯಾಗಿ ವೈಖರೀ ವಿಲಾಸವು ಅನಂತವಾಗಿದೆ. ಈ ಅಕ್ಷರ ಸಾಮ್ರಾಜ್ಯವನ್ನು ಅನುಭವಿಸುವ ವ್ಯಕ್ತಿಯು ತನ್ನನ್ನು ತುಂಬಾ ಸಂಕುಚಿತನನ್ನಾಗಿ ತಿಳಿಯುತ್ತಾನೆ. ಹೀಗಿದ್ದರೂ ಅಕ್ಷರಗಳಲ್ಲಿ ಒಂದು ವಿಶಿಷ್ಟವಾದ ಮಹಾತ್ಮ್ಯವಿದೆ. ಪ್ರತಿಯೊಂದು ಅಕ್ಷರಕ್ಕೂ ಒಂದೊಂದು ಅಧಿದೇವತೆಯಿದೆ. ಅಕ್ಷರಸಂಯೋಗವು ಮಂತ್ರವಾಗುತ್ತದೆ. ಇಂತಹ ಮಂತ್ರ ಜಪಗಳಿಂದ ಚಮತ್ಕಾರವಾದ ಫಲಗಳುಂಟಾಗುತ್ತವೆ. ಇದೆಲ್ಲಾ ಸ್ಥೂಲ ವಿಷಯ.

ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಿದರೆ ವೈಖರಿಯಿಂದ ಮಧ್ಯಮಾ ಮಧ್ಯಮಾದಿಂದ ಪಶ್ಯಂತೀ, ಪಶ್ಯಂತೀಯಿಂದ ಪರಾ ಹೀಗೆ ಅಂತರ್ಮುಖವಾಗಿ ಅನುಸಂಧಾನವೇರ್ಪಡುತ್ತದೆ. ಆ ಸ್ಥಿತಿಯಲ್ಲಿ ದೇಶ

ಕಾಲ ಆಕಾರಗಳಿಲ್ಲದ ನಿರ್ವಿಕಲ್ಪವಾದ ಶಕ್ತಿಯ ಅನುಸಂಧಾನವೂ ಚಿದನುಭವವೂ ಬೇರೆಯಾಗಿ ತೋರುವುದಿಲ್ಲ. ಪರಾಶಕ್ತಿಯ ಪ್ರಸಾರ ಕ್ರಮವನ್ನು ನಾವು ಅರಿತರೂ ಭೇದಪ್ರಪಂಚದಲ್ಲಿ ನಮ್ಮ ವ್ಯವಹಾರ ನಡೆಯಲೇಬೇಕು. ಇದರಲ್ಲಿ ಎಲ್ಲಾ ಅಕ್ಷರಗಳನ್ನೂ ಆ ಪರಾಶಕ್ತಿಯ ವಿಕಾಸಗಳೆಂದು ತಿಳಿದು ನಾವು ಉಚ್ಚರಿಸುವ ಪ್ರತಿಯೊಂದು ಅಕ್ಷರವೂ ಆ ಪರಾಶಕ್ತಿಯ ಉಪಾಸನೆಯೆಂಬ ಭಾವನೆಯಿದ್ದರೆ ಅಂತಹವನಿಗೆ **ಮಾತೃಕಾಚಕ್ರಸಂಬೋಧವಾಗುತ್ತದೆಂದು** ಶಾಸ್ತ್ರಗಳಲ್ಲಿ ಹೇಳಿದೆ. ಮಾತೃಕಾಚಕ್ರಸಂಬೋಧವೆಂದರೆ ಸಾಧಕನು ವ್ಯವಹಾರ ದೃಷ್ಟಿಯುಳ್ಳವನಾಗಿದ್ದರೂ ಪರಮಾರ್ಥದ ಕಡೆಗೆ ಯಾವಾಗಲೂ ಒಲವುಳ್ಳವನಾಗಿದ್ದರೆ ಅವನ ವಾಕ್ ವ್ಯಾಪಾರವೆಲ್ಲಾ ಪರಾಶಕ್ತಿಯ ಉಪಾಸನೆಯಾಗಿ ಅಕ್ಷರಗಳಿಂದ ಹೇಳುವುದಕ್ಕೆ ಆಗದೆ ಇರುವ ಅನುಭವವೇರ್ಪಡುತ್ತದೆ.

ಶಿವನು ಅಭಿನ್ನವಾದ ಚಿನ್ಮಯನಾಗಿರುತ್ತಾನೆ. ಭೇದರೂಪವಾದ ಪ್ರಪಂಚವನ್ನು ಸೃಷ್ಟಿಸುವುದೇ ಅವನಿಗೆ ಸಂಹಾರರೂಪವಾಗಿರುತ್ತದೆ. ಮಿತಪ್ರಮಾತೃವಿಗೆ ಭೇದಜ್ಞಾನವು ಸೃಷ್ಟಿರೂಪವಾಗಿಯೂ ಅಭೇದಜ್ಞಾನವು ಸಂಹಾರರೂಪವಾಗಿಯೂ ಇರುತ್ತದೆ. ಶಿವನ ಅಭೇದಸ್ಥಿತಿ ನಿತ್ಯವಾದದ್ದು ಮತ್ತು ಒಡಕಿಲ್ಲದಿರುವುದು. ಮಿತ ಪ್ರಮಾತೃವಿನ ಅಭೇದಸ್ಥಿತಿ ಮಿಂಚಿನಂತಿರುವುದು. ಆದುದರಿಂದ ಈ ಮಿತಪ್ರಮಾತೃವು ತನ್ನ ಪಂಚಕೃತ್ಯಗಳನ್ನು ಸದಾ ಅನುಸಂಧಾನ ಮಾಡುವುದರಿಂದ ಚಿದಾನಂದಾವೇಶದಲ್ಲಿ ಮುಳುಗುವನು. ಮಾರ್ಗಗಳು ಬೇರೆಬೇರೆಯಾಗಿದ್ದರೂ ಕೊನೆಯಲ್ಲುಂಟಾಗುವ ಪರಮಫಲ ಒಂದೇ ರೀತಿಯಾಗಿರುತ್ತದೆ. ಮಾತೃಕಾನುಸಂಧಾನ, ಪಂಚಕೃತ್ಯಗಳ

ಪರಿಶೀಲನ ಇವೆರಡೂ ಮುಖಭೇದಗಳು. ಇವುಗಳ ಅಭ್ಯಾಸದ ಫಲವು ಒಂದೇ ಆಗಿರುತ್ತದೆ.

ಶಿವನ ಶಕ್ತಿಗಳು ಅನಂತವೆಂದು ಹೇಳಿದೆ. ಅದರಲ್ಲಿ ಚಿಚ್ಛಕ್ತಿಯೇ ವಿಶ್ವವನ್ನು ಹೊರಹೊಮ್ಮಿಸುವಾಗ ಅನೇಕ ರೂಪಗಳನ್ನು ಪಡೆಯುತ್ತದೆ. ನಮ್ಮ ಅಲ್ಪಜ್ಞಾನದಿಂದ ಎಲ್ಲವನ್ನೂ ವಿಶದಪಡಿಸುವುದಕ್ಕಾಗದಿದ್ದರೂ ಕೆಲವು ಪರಿಭಾಷೆಗಳ ಮೂಲಕ ಆದಷ್ಟುಮಟ್ಟಿಗೆ ತಿಳಿಯಬಹುದು. ಪರಿಭಾಷೆ, ಸಂಜ್ಞೆ, ಲಕ್ಷಣ ಎಂಬ ಪದಗಳನ್ನು ನಮ್ಮ ಬುದ್ಧಿಗೆ ನಿರ್ದಿಷ್ಟವಾದ ಆಕಾರವನ್ನುಂಟುಮಾಡುವುದಕ್ಕೋಸ್ಕರ ಹೇಳುತ್ತೇವೆ. ಇಲ್ಲಿ ವಾಮೇಶ್ವರೀ ಎಂಬುದು ಒಂದು ಸಂಜ್ಞೆ. ವಾಮೇಶ್ವರೀ ಅಂದರೆ ವಿಶ್ವವನ್ನು ವಮನಮಾಡುವಿಕೆ ಅಥವಾ ಹೊರಹೊಮ್ಮಿಸುವ ಶಕ್ತಿ. ಇಂತಹ ಅಸಾಧಾರಣವಾದ ವಿಚಿತ್ರ ಶಕ್ತಿಗೆ ವಾಮೇಶ್ವರೀ ಎಂದು ಹೆಸರು. ಈ ಶಕ್ತಿಯು ಮೂಲರೂಪದಿಂದ ಮಿತಪ್ರಮಾತೃವಿನ ಶರೀರ, ಇಂದ್ರಿಯ, ಅರ್ಥ ಮೊದಲಾದ ರೂಪಗಳನ್ನು ತನ್ನ ಪ್ರಭಾವದಿಂದ ಪಡೆಯುತ್ತದೆ. ಜ್ಞಾತೃತ್ವ ಕರ್ತೃತ್ವ ಮೊದಲಾದ ಶಕ್ತಿಗಳನ್ನುಳ್ಳದ್ದಾಗಿ ಮಿತಪ್ರಮಾತೃವಿನಲ್ಲಿ ವಿಲಕ್ಷಣವಾಗಿ ಸ್ಫುರಿಸುತ್ತದೆ. ಕಿಂಚಿತ್‌ಕರ್ತೃತ್ವ ಕಿಂಚಿತ್‌ಜ್ಞಾತೃತ್ವ ಮೊದಲಾದ ಸಂಕುಚಿತಾವಸ್ಥೆಗಳನ್ನುಳ್ಳದ್ದಾಗಿಯೂ ಒಂದು ಸಮಯದಲ್ಲಿ ದೇಶ ಕಾಲ ಆಕಾರಸಹಿತವಾದ ಜ್ಞಾನವನ್ನುಂಟುಮಾಡುತ್ತಲೂ ಇನ್ನೊಂದು ಸಮಯದಲ್ಲಿ ದೇಶ ಕಾಲ ಆಕಾರರಹಿತವಾದ ನಿರ್ವಿಕಲ್ಪವಾದ ಚಿದನುಭವವನ್ನು ಮಿಂಚಿನಂತೆ ತೋರಿಸುತ್ತಲೂ ಇರುತ್ತದೆ. ಇದು ವಾಮೇಶ್ವರಿಯ ಮೊದಲನೆಯದಾದ **ಖೇಚರೀಸ್ಥಿತಿ** 'ಖ'

ಎಂದರೆ ಆಕಾಶ 'ಚರಿ' ಎಂದರೆ ಅದರಲ್ಲಿ ಸಂಚರಿಸುವುದು. ಚಿದ್ಗಗನದಲ್ಲಿ ಸಂಚರಿಸುವುದು ಎಂದರ್ಥ.

ಮಾಯಾಪದದಲ್ಲಿ ಭೇದಜ್ಞಾನವೇ ಪ್ರಧಾನವಾದದ್ದು. ಮಿತ ಪ್ರಮಾತೃವಿಗೆ ಈ ಭೇದಜ್ಞಾನಗಳಿಗೆ ಮುಖ್ಯವಾದ ಉಪಕರಣ ಮನಸ್ಸು. ಮನಸ್ಸಿಲ್ಲದೆ ವಿಕಲ್ಪಗಳಿಲ್ಲ. ವಿಕಲ್ಪಗಳಿಲ್ಲದೆ ದೇಶ ಕಾಲಾದಿ ಭೇದಗಳು ತೋರುವುದಿಲ್ಲ. ಪ್ರತಿಯೊಂದು ಪದಾರ್ಥಕ್ಕೂ ಒಂದು ನಿಶ್ಚಿತವಾದ ವ್ಯವಹಾರ ನಿಯಮವಿದೆ. ಈ ನಿಯಮವು ಬೇರೆ ಬೇರೆ ಪದಾರ್ಥಗಳಿಗೆ ಬೇರೆಬೇರೆಯಾಗಿರುತ್ತದೆ. ಇಂತಹ ಭೇದ ವ್ಯವಹಾರದಲ್ಲಿ ಅಭಿಮಾನವು ಅಂತಃಕರಣದಿಂದುಂಟಾಗುತ್ತದೆ. ಈ ವ್ಯವಹಾರಕ್ಕೆ ಮೂಲಕಾರಣವಾಗಿರುವುದು ಆ ಚಿಚ್ಛಕ್ತಿಯಾಗಿದ್ದರೂ ತನ್ನ ಅಭಿನ್ನವಾದ ಸ್ವರೂಪವನ್ನು ಈ ಸ್ಥಿತಿಯಲ್ಲಿ ತೋರ್ಪಡಿಸುವುದಿಲ್ಲ. ಈ ಅಂತಃಕರಣಾವಸ್ಥೆಯನ್ನು ಪಡೆದಿರುವ ದಶೆಗೆ **ಗೋಚರೀ ಚಕ್ರ**ವೆಂದು ಹೆಸರು. 'ಗೋ' ಅಂದರೆ ಕಿರಣ 'ಚರಿ' ಅಂದರೆ ಕಿರಣಗಳಲ್ಲಿ ಗೋಚರಿಸುವುದು ಎಂದರ್ಥ. ತೇಜಸ್ಸು ಅಖಂಡವಾಗಿದ್ದರೂ ಕಿರಣಗಳು ಅನೇಕವಾಗಿರುವುವು. ಅಂತಃಕರಣಗಳು ಅನೇಕ ವಿಧವಾಗಿ ಮಿಂಚುತ್ತಿರುತ್ತವೆ. ಅಂತಃಕರಣದ ಒಂದು ವಿಶೇಷ ಯೋಗ್ಯತೆಯೇನೆಂದರೆ: ರೂಪ ರಸ ಗಂಧ ಶಬ್ದ ಸ್ಪರ್ಶ ಈ ಐದು ಗುಣಗಳನ್ನು ಅನುಭವ ಮಾಡಿಸುವಿಕೆ. ಚಿಚ್ಛಕ್ತಿಯು ಮೊದಲು ಜೀವಾವಸ್ಥೆಯಲ್ಲಿ ಕಿಂಚಿತ್ ಕರ್ತೃತ್ವಾದಿ ಸಂಕುಚಿತ ಜೀವ ಧರ್ಮಗಳನ್ನು ತೋರ್ಪಡಿಸಿತು. ಗೋಚರೀ ಚಕ್ರದಲ್ಲಿ ವಿಕಲ್ಪಗಳನ್ನು ಪ್ರಧಾನವಾಗಿ ತೋರ್ಪಡಿಸಿತು. ಈ ವಿಕಲ್ಪಗಳು ಮೇಲೆ ಹೇಳಿದ ರೂಪ ರಸವೇ ಮೊದಲಾದ ಐದು ಗುಣಗಳ ರೂಪ

ವಾಗಿದೆ. ಇನ್ನು ಇದಕ್ಕಿಂತಲೂ ಸಂಕುಚಿತವಾದ ರೂಪರಸ ಮುಂತಾದ ಒಂದೊಂದೇ ಗುಣವನ್ನು ಗ್ರಹಿಸುವ ಬಾಹ್ಯೇಂದ್ರಿಯಗಳ ರೂಪದಿಂದ ಸ್ಫುರಿಸುವಾಗ ದಿಕ್ಚರೀಚಕ್ರವೆಂದೆನಿಸಿಕೊಳ್ಳುತ್ತದೆ. 'ದಿಕ್' ಎಂದರೆ ದಿಕ್ಕುಗಳಲ್ಲಿ 'ಚರಿ' ಎಂದರೆ ಚರಿಸುವುದು ಎಂದರ್ಥ. ಇದುವರೆಗೂ ಆಗಿರುವ ಮೂರು ಚಕ್ರಗಳು ಪದಾರ್ಥಗಳನ್ನು ಪ್ರತಿಫಲಿಸುವ ಯೋಗ್ಯತೆಯುಳ್ಳವುಗಳಾಗಿವೆ. ಈ ಸ್ಥಿತಿಯಲ್ಲದೆ ಪ್ರತಿಫಲಿಸಲ್ಪಡುವ ಯೋಗ್ಯತೆಯನ್ನು ಪಡೆದು ಬೇರೆ ಬೇರೆ ವಸ್ತುರೂಪಗಳಾಗಿರುವ ಪ್ರಮೇಯಗಳು ಅನಂತವಾಗಿವೆ. ಅವು ಯಾವಾಗಲೂ ಪರಸ್ಪರ ಭಿನ್ನವಾಗಿ ತಿಳಿಯಲ್ಪಡುವವುಗಳಾಗಿರುತ್ತವೆ. ಈ ರೀತಿಯಾದ ಭೇದಜ್ಞಾನವನ್ನುಂಟುಮಾಡುವ ಸ್ವಭಾವವುಳ್ಳದ್ದಕ್ಕೆ ಭೂಚರೀಚಕ್ರವೆಂದು ಹೆಸರು. 'ಭೂ' ಎಂದರೆ ಭೂಮಿ, 'ಚರಿ' ಎಂದರೆ ಸಂಚರಿಸುವುದು ಎಂದರ್ಥ. ಪಾಂಚಭೌತಿಕವಾದ ಎಲ್ಲಾ ಪದಾರ್ಥಗಳೂ ಭೂಚಕ್ರದಲ್ಲಡಗಿರುತ್ತವೆ. ಈ ರೀತಿಯಾಗಿ ಆ ಮಹಾಮಹಿಮಳಾದ ಚಿಚ್ಛಕ್ತಿಯು ಖೇಚರೀ ಸ್ಥಿತಿಯಲ್ಲಿ ಮಿತಪ್ರಮಾತೃವಾಗಿಯೂ ಗೋಚರೀ ಸ್ಥಿತಿಯಲ್ಲಿ ಅಂತಃಕರಣರೂಪಿಯಾಗಿಯೂ ದಿಕ್ಚರೀಸ್ಥಿತಿಯಲ್ಲಿ ಬಾಹ್ಯೇಂದ್ರಿಯರೂಪಿಯಾಗಿಯೂ ಭೂಚರೀಸ್ಥಿತಿಯಲ್ಲಿ ಪ್ರಮೇಯಸ್ವರೂಪಿಯಾಗಿಯೂ ಪ್ರಕಾಶಿಸುತ್ತಾಳೆ.

ಇದೇ ಚಿಚ್ಛಕ್ತಿಯೇ ಪತಿಭೂಮಿಕೆಯಲ್ಲಿ ಖೇಚರೀಸ್ಥಿತಿಯಲ್ಲಿ ಸರ್ವಜ್ಞತ್ವ, ಸರ್ವಕರ್ತೃತ್ವ ಸರ್ವಶಕ್ತಿತ್ವಾದಿರೂಪವಾಗಿಯೂ, ಗೋಚರೀಸ್ಥಿತಿಯಲ್ಲಿ ಅಭೇದ ನಿಶ್ಚಯರೂಪವಾಗಿಯೂ, ದಿಕ್ಚರೀ ಸ್ಥಿತಿಯಲ್ಲಿ ಅಭೇದಾಲೋಚನಾತ್ಮಕವಾಗಿಯೂ, ಭೂಚರೀಸ್ಥಿತಿಯಲ್ಲಿ ವಿಶ್ವವೆಲ್ಲಾ ಅಭಿನ್ನವಾಗಿ ತನ್ನ ಶರೀರದಂತೆ ಸ್ಫುರಿಸುತ್ತದೆ. ಇಂತಹ ಚಮತ್ಕಾರವು ಈ ಶಕ್ತಿಯ ವಿಲಾಸವಾಗಿದೆಯೆಂದು ತಿಳಿಯಬೇಕು.

ಪರಮೇಶ್ವರನ ಶಕ್ತಿಗಳು ಅನಂತವಾಗಿದ್ದರೂ ಅವುಗಳಲ್ಲಿ ಸ್ಫುರತ್ತಾಸಾರವಾಗಿರುವ ಶಕ್ತಿಯೊಂದಿದೆ. ಅದನ್ನು ಕರ್ತೃತ್ವ ಶಕ್ತಿ ಐಶ್ವರ್ಯ ಶಕ್ತಿ ಎಂದು ಕರೆಯುತ್ತಾರೆ. ಯಾವುದು ನಿಸ್ತರಂಗವಾಗಿದ್ದು ಉನ್ಮಿಷಿತವಾಗುವುದೋ ಅದು ಕರ್ತೃತ್ವಶಕ್ತಿಯೆಂದೆನಿಸಿಕೊಳ್ಳುವುದು. ಅದು ಪತಿದಶೆಯಲ್ಲಿ ವ್ಯತ್ಯಾಸವಿಲ್ಲದೆ ಇರುತ್ತದೆ. ಆ ಶಕ್ತಿಯು ಪಶು ದಶೆಯಲ್ಲಿ ಪ್ರಸರಿಸುವಾಗ ತನ್ನ ಅನಂತವಾದ ಸ್ವರೂಪವನ್ನು ಮರೆ ಮಾಚಿಕೊಂಡಿರುತ್ತದೆ. ಇಳಿಯುವಾಗ ಭೌತಿಕ ಶರೀರವನ್ನು ಧರಿಸಿರುವ ಪ್ರಾಣಾಪಾನ ವ್ಯಾನಸಮಾನ ಮೊದಲಾದವುಗಳನ್ನೊಳಗೊಂಡ ಪ್ರಾಣಶಕ್ತಿರೂಪವನ್ನು ಪಡೆಯುತ್ತದೆ. ಪ್ರಾಣಶಕ್ತಿಯ ವಿವರಣೆಗಳು ಬೇರೆಬೇರೆ ರೀತಿಯಾಗಿರುತ್ತವೆ. ಪ್ರಾಣಶಕ್ತಿಗಳು ಆಯಾ ಶರೀರಕ್ಕೆ ಧಾರಣ ಪೋಷಣ ವಿಷಯಗಳಲ್ಲಿ ಒಂದು ವಿಶಿಷ್ಟವಾದ ಕೆಲಸವನ್ನು ಮಾಡುತ್ತಿರುತ್ತವೆ. ಪ್ರಾಣಶಕ್ತಿಯು ಹೃದಯಕ್ರಿಯೆಯ ಮೂಲಕ ಶರೀರವನ್ನು ಧರಿಸಿರುತ್ತದೆ. ಅಪಾನವು ಶರೀರದ ಅಧೋಭಾಗದಲ್ಲಿದ್ದು ವಾತವಿಸರ್ಗವೇ ಮೊದಲಾದ ಕೆಲಸಗಳನ್ನು ಮಾಡುತ್ತದೆ. ಸಮಾನವು ಹೊಕ್ಕಳಿನಲ್ಲಿದ್ದು ಜೀರ್ಣಶಕ್ತಿಯ ಕ್ರಮಗಳನ್ನು ನಡೆಸುತ್ತಿರುತ್ತದೆ. ವ್ಯಾನಶಕ್ತಿಯು ಶರೀರವನ್ನೆಲ್ಲಾ ವ್ಯಾಪಿಸಿರುತ್ತದೆ. ಹಾಗೆಯೇ ವಿಶ್ವವನ್ನೆಲ್ಲಾ ವ್ಯಾಪಿಸಿರುತ್ತದೆ. ಇದು ಶರೀರದಲ್ಲಾಗುವ ವ್ಯತ್ಯಾಸಗಳನ್ನು ಒಂದು ಕ್ರಮದಲ್ಲಿಟ್ಟಿರುತ್ತದೆ. ಉದಾನಶಕ್ತಿಯು ಸುಷುಮ್ನಾನಾಡಿಯಲ್ಲಿರುತ್ತದೆ. ಆ ಸುಷುಮ್ನಾನಾಡಿಯು ಬೆನ್ನು ಮೂಳೆಯಲ್ಲಿ ಅತಿ ಸೂಕ್ಷ್ಮರೂಪದಿಂದ ಇದೆಯೆಂದು ತಾಂತ್ರಿಕರ ಅಭಿಪ್ರಾಯ. ಶಿವನ ವಾಸಸ್ಥಾನವಾದ ಬ್ರಹ್ಮರಂಧ್ರದಿಂದ ಕುಂಡಲಿನೀ ಶಕ್ತಿ ಇರುವ ಬೆನ್ನುಮೂಳೆಯ ಕೊನೆಯವರೆಗೂ ಸುಷುಮ್ನಾನಾಡಿ

ಅಖಂಡವಾಗಿರುತ್ತದೆ. ಈ ಪ್ರಾಣ ಶಕ್ತಿಗಳು ಮುಖ್ಯವಾಗಿ ಹೃದಯ ಕ್ರಿಯೆಗಳು ಒಂದುಕ್ಷಣವಾದರೂ ನಿಲ್ಲದೆ ತಮ್ಮ ಕೆಲಸಗಳನ್ನು ಜಾಗ್ರತ್ ಸ್ವಪ್ನ ಸುಷುಪ್ತಿ ಈ ಮೂರು ಅವಸ್ಥೆಗಳಲ್ಲಿಯೂ ನಡೆಸುತ್ತಲೇ ಇರುತ್ತವೆ. ಈ ಪ್ರಾಣ ವ್ಯಾಪಾರವು ನಿಂತರೆ ಶರೀರಕ್ಕೂ ಆತ್ಮಕ್ಕೂ ವಿಯೋಗವೇರ್ಪಡುತ್ತದೆ. ಲೋಕ ರೂಢಿಯಲ್ಲಿಯೂ ಕೂಡ ಮರಣಕ್ಕೆ ಪ್ರಾಣ ಹೋಯಿತೆಂದು ಹೇಳುತ್ತಾರೆ.

ಜಾಗ್ರತ್ ಸ್ವಪ್ನ ಸುಷುಪ್ತಿ ತುರ್ಯಾ ತುರ್ಯಾತೀತ ಎಂಬ ಐದು ಅವಸ್ಥೆಗಳು ಜೀವನಿಗಿವೆ. ಮೊದಲಿನ ಮೂರು ಅವಸ್ಥೆಗಳು ಎಲ್ಲರ ಅನುಭವದಲ್ಲಿವೆ. ಮಿಕ್ಕೆರಡು ತುಂಬಾ ನುರಿತ ಸಾಧಕರಿಗೆ ವಿಶದವಾಗಿ ಅನುಭವಕ್ಕೆ ಬರುತ್ತವೆ. ಶರೀರವಿರುವವನಿಗೆ ಯಾವುದಾದರೂ ಒಂದು ಅವಸ್ಥೆ ಇದ್ದೇ ಇರುತ್ತದೆ. ವ್ಯಕ್ತಿಯು ಶರೀರ ಇಂದ್ರಿಯ ಮನಸ್ಸು ಆತ್ಮ ಎಂಬ ನಾಲ್ಕು ತತ್ವಗಳು ಒಂದುಕಡೆಯಲ್ಲಿ ಸೇರಿರುವ ಮೂರ್ತಿಯಾಗಿರುತ್ತಾನೆ. ಈ ಸಂಪ್ರದಾಯದಂತೆ ಹೇಳುವುದಾದರೆ ದೇಹ ಪ್ರಾಣ ಪುರ್ಯಷ್ಟಕ ಕಲಾದಿಗಳಿಂದ ವ್ಯಾಮೋಹಿತನಾಗಿರುವವನೇ ಮಿತಪ್ರಮಾತೃವಾದ ಜೀವನು. ಜಾಗ್ರದವಸ್ಥೆಯಲ್ಲಿ ಆತ್ಮನು ಮನಸ್ಸನ್ನು ಪ್ರೇರಿಸುತ್ತಾನೆ. ಮನಸ್ಸು ಇಂದ್ರಿಯಗಳಿಂದ ಬಾಹ್ಯ ಪದಾರ್ಥಗಳನ್ನು ಗ್ರಹಿಸುತ್ತದೆ. ಜಾಗ್ರದವಸ್ಥೆಯಲ್ಲಿ ಈ ನಾಲ್ಕರ ಸಂಬಂಧಗಳು ಇರುತ್ತವೆ. ಸ್ವಪ್ನಾವಸ್ಥೆಯಲ್ಲಿ ಬಾಹ್ಯ ಪದಾರ್ಥಗಳ ವ್ಯವಹಾರವಿಲ್ಲದೆ ಇರುವುದರಿಂದ ಆತ್ಮ ಮನಸ್ಸು ಮನಸ್ಸಿನ ವಿಷಯಗಳು ಮಾತ್ರ ಇರುತ್ತವೆ. ಸುಷುಪ್ತಿಯಲ್ಲಿ ಆತ್ಮ ಮತ್ತು ಮನಸ್ಸು ಇವೆರಡರ ಸಂಬಂಧ ಮಾತ್ರ ಇರುತ್ತದೆ. ಕೇವಲ ಸ್ವಾತ್ಮಪರಾಮರ್ಶವೇ ತುರ್ಯಾವಸ್ಥೆ. ಈ ಪರಾಮರ್ಶವೂ ಇಲ್ಲದೆ ಅಲೆಗಳಿಲ್ಲದ

ಸಮುದ್ರದಂತಿರುವ ಸ್ಥಿತಿಗೆ ತುರ್ಯಾತೀತಾವಸ್ಥೆಯೆಂದು ಹೆಸರು. ಈ ಐದು ಅವಸ್ಥೆಗಳು ಎಲ್ಲರ ಅನುಭವದಲ್ಲೂ ಅಂಶತಃ ಇದ್ದೇ ಇವೆ. ಸಾಧಕನು ಸಾಧನಾಭ್ಯಾಸಗಳಿಂದ ಮಧ್ಯಧಾಮವನ್ನು ಅಂದರೆ ಸುಷುಮ್ನಾನಾಡಿಯನ್ನೂ ಅದರಲ್ಲಿರುವ ಉದಾನಶಕ್ತಿಯನ್ನೂ ಎಚ್ಚರಗೊಳಿಸಿದರೆ ಶರೀರವನ್ನೂ ವಿಶ್ವವನ್ನೂ ವ್ಯಾಪಿಸಿರುವ ವ್ಯಾನಶಕ್ತಿಯು ಎಚ್ಚರಗೊಳ್ಳುತ್ತದೆ. ಆ ಸ್ಥಿತಿಯಲ್ಲಿ ತುರ್ಯಾ ಮತ್ತು ತುರ್ಯಾತೀತ ಈ ಎರಡು ದಶೆಗಳು ಚಿದಾನಂದಮಯವಾಗಿ ಅನುಭವಕ್ಕೆ ಬರುತ್ತವೆ. ಜೀವನು ತನ್ನ ಕರ್ತೃತ್ವ ಶಕ್ತಿಯ ಸಂಕೋಚದಿಂದ ಪ್ರಾಣಶಕ್ತಿಗಳಿಂದ ನಿಯಮಿತನಾಗಿದ್ದಾನೆ. ಜಾಗ್ರದಾದಿ ಅವಸ್ಥೆಗಳಿಗೆ ತುತ್ತಾಗಿದ್ದಾನೆ. ದೇಹ ಪ್ರಾಣ ಪುರ್ಯಷ್ಟಕ ಕಲಾ ಮೊದಲಾದವುಗಳಿಂದ ವ್ಯಾಮೋಹಿತನಾಗಿದ್ದಾನೆ. ಇಂತಹವನು ತನ್ನ ಶಕ್ತಿಗಳನ್ನು ಸ್ವಪ್ರಯತ್ನದಿಂದ ವಿಕಾಸಗೊಳಿಸಿದರೆ ಪಶುದಶೆಯಲ್ಲಿಯೇ ಜೀವನ್ಮುಕ್ತನಾಗುತ್ತಾನೆ.

ಹಿಂದೆ ಐದನೆಯ ಸೂತ್ರದಲ್ಲಿ ಚಿಚ್ಛಕ್ತಿಯೇ ತನ್ನ ಸ್ವಾತಂತ್ರ್ಯದಿಂದ ಸಂಕೋಚವನ್ನು ಪಡೆಯುತ್ತದೆಂದು ನಿರೂಪಿಸಿದ್ದಾಯಿತು. ಒಂಭತ್ತನೆಯ ಸೂತ್ರದಲ್ಲಿ 'ಚಿತ್'ಸಂಕೋಚದಿಂದ 'ಚಿತ್ತ'ವಾಯಿತೆಂದು ಹೇಳಿದ್ದಾಯಿತು. ಹದಿಮೂರನೆ ಸೂತ್ರದಲ್ಲಿ ಅಂತರ್ಮುಖೀಭಾವದಿಂದ ಚಿತ್ತವು ಹೇಗೆ ಚಿತ್ ಆಗುತ್ತದೆಂದು ವಿವರಿಸಲ್ಪಟ್ಟಿದೆ.

ಒಂದೇ ನದಿಯಿಂದ ಮೂರು ಕಾಲುವೆಗಳು ಹರಿಯುವಂತೆ ಚಿಚ್ಛಕ್ತಿಯು ಮೂರು ಭಾಗಗಳಾಗಿ ಕವಲೊಡೆಯುತ್ತದೆ. ಪರಾ ಪಶ್ಯಂತೀ ಮಧ್ಯಮಾ ವೈಖರೀರೂಪದಿಂದ ಮಿತಪ್ರಮಾತೃವಿನಲ್ಲಿ ಒಂದು ಕವಲು ಪ್ರಕಟವಾಗುತ್ತದೆ. ಶಿವನ ಮೊದಲು ಪೃಥ್ವೀವರೆಗೂ ಮೂವತ್ತಾರು ತತ್ವಗಳ ರೂಪವಾಗಿ ಇನ್ನೊಂದು ಕವಲೊಡೆಯುತ್ತದೆ.

ಶಿವನೇ ಮೊದಲಾಗಿ ಏಳು ಪ್ರಮಾತೃರೂಪದಲ್ಲಿ ಮೂರನೆಯ ಕವಲೊಡೆದು ಹರಿಯುತ್ತದೆ. ಮೂವತ್ತಾರು ತತ್ವಗಳ ರೂಪವಾಗಿ ಪರಿಗಣಿಸುವಾಗ ಕರ್ತೃತ್ವಶಕ್ತಿ ಸಂಕುಚಿತವಾಗಿ ಮೇಲಿನಿಂದ ಇಳಿದು ಬರುವಾಗ್ಗೆ ಹದಿನಾರನೆ ತತ್ವವಾದ ಚಿತ್ತರೂಪವನ್ನು ತಾಳುತ್ತದೆ. ಚಿಚ್ಛಕ್ತಿಯು ಶಿವನಿಂದ ಹದಿನಾರನೆಯ ಮೆಟ್ಟಲಿನಲ್ಲಿ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ಒಡೆಯನಾಗುತ್ತದೆ. ವ್ಯವಹಾರ ಪ್ರಪಂಚದಲ್ಲಿ ಬಗೆಬಗೆಯಾದ ವಿಕಲ್ಪಗಳನ್ನೂ ಭೇದಜ್ಞಾನಗಳನ್ನೂ ಪ್ರತಿಫಲಿಸುತ್ತದೆ. ಇದು ಬಹಿರ್ಮುಖವಾಗಿದ್ದರೆ ಭೇದಜ್ಞಾನಗಳಿಗೆ ಹೇಗೆ ಆಶ್ರಯವಾಗಿರುತ್ತದೆಯೋ ಹಾಗೆಯೇ ಅಂತರ್ಮುಖವಾದರೆ ಹಿಂದಿರುಗಿ ಹದಿನಾರು ಮೆಟ್ಟಲುಗಳನ್ನು ಹತ್ತಿ ಶುದ್ಧಚಿದ್ರೂಪವನ್ನು ಪಡೆಯುತ್ತದೆ ಎಂಬ ವಿಷಯವನ್ನು ಈ ಸೂತ್ರದಲ್ಲಿ ಹೇಳಿದೆ.

ಮಿತಪ್ರಮಾತೃವಿಗೆ ಚಿತ್ತವು ಬಹಳ ಮುಖ್ಯವಾದದ್ದು. ಎಲ್ಲಾ ಚಲನವಲನಗಳಿಗೂ ಗ್ರಹಣ ಸ್ಮರಣಗಳಿಗೂ ಆಶ್ರಯವಾಗಿದೆ. ಐದನೆಯ ಸೂತ್ರದಿಂದ ಪನ್ನೆರಡನೆಯ ಸೂತ್ರದವರೆಗೂ ಚಿತ್ತಿನ ಚಿಚ್ಛಕ್ತಿಯ ಅವರೋಹಣಕ್ರಮವು ಹೇಳಲ್ಪಟ್ಟದೆ. ಇನ್ನುಮುಂದೆ ಆರೋಹಣಕ್ರಮವು ಸೂಚಿಸಲ್ಪಟ್ಟದೆ.

**ತತ್ಪರಿಜ್ಞಾನೆ ಚಿತ್ತಮೇವ ಅಂತರ್ಮುಖೀ ಭಾವೇನ ಚೇತನ**
**ಪದಾಧ್ಯಾರೋಹಾತ್ ಚಿತಿಃ ॥ ೧೩ ॥**

ಹಿಂದೆ ಹೇಳಿದ ಚಿಚ್ಛಕ್ತಿಪ್ರಸರಣಜ್ಞಾನದಿಂದ 'ಚಿತ್ತ'ವೇ ಅಂತರ್ಮುಖವಾಗಿ ಪರಮಚಿದ್ರೂಪವನ್ನು ಪಡೆಯುವುದರಿಂದ 'ಚಿತ್' ಆಗುತ್ತದೆ.

ಹಿಂದಿನ ಸೂತ್ರವನ್ನು ವಿವರಿಸುವ ಪ್ರಸಂಗದಿಂದ ಪ್ರಮೇಯ ಹೇಳಿದ್ದಾಯಿತು. ಈಗ ಶಬ್ದಸಂಗತಿ ದೃಷ್ಟಿಯಿಂದ ಸಂಕ್ಷೇಪವಾಗಿ ವಿವರಿಸಲ್ಪಡುತ್ತದೆ. ತನ್ನ ಪಂಚಕೃತ್ಯಕಾರಿತ್ವವನ್ನು ತಿಳಿದರೆ ಅಂದರೆ ಅನುಭವಕ್ಕೆ ತಂದುಕೊಂಡರೆ ಅದನ್ನು ತಿಳಿಯದೆ ಇರುವ ಕಾರಣವು ಕಳಚಿಹೋಗುತ್ತದೆ. ಇದೇ ಸ್ವಶಕ್ತಿ ವ್ಯಾಮೋಹ ನಿವೃತ್ತಿ. ಇದರಿಂದ ಸ್ವಾತಂತ್ರ್ಯ ಪಡೆದು ಹಿಂದೆ ವಿವರಿಸಿರುವ ಚಿತ್ರವೇ ಸಂಕೋಚ ವ್ಯವಹಾರಗಳುಳ್ಳ ಹೊರಗಿನ ವ್ಯಾಪಾರಗಳಲ್ಲಿ ಆಸಕ್ತಿಯನ್ನು ಬಿಡುವುದರಿಂದ ಅಂತರ್ಮುಖೀಭಾವವನ್ನು ಪಡೆಯುತ್ತದೆ. ಹಾಗೆಯೇ ಒಳಗಿನ ಅನುಸಂಧಾನದಿಂದ ಚೇತನಸ್ಥಿತಿಯನ್ನು ಹತ್ತುತ್ತಾ ಗ್ರಾಹಕರ ಅಂತಸ್ತನ್ನು ಕ್ರಮಕ್ರಮವಾಗಿ ಸಂಕೋಚದ ಅಂಶಗಳಿಲ್ಲದಂತೆ ತನ್ನ ಸ್ವರೂಪವನ್ನು ಪಡೆಯುತ್ತದೆ. ಇದೇ ಚಿದವಸ್ಥೆ. ಇದೇ ಪರಾಕಾಷ್ಟ. ಇದನ್ನೇ ಪೂರ್ಣಾಹಂ ವಿಮರ್ಶೆಯೆನ್ನುವುದು.

ಒಂದು ವೇಳೆ ಪಾರಮಾರ್ಥಿಕವಾದ ಚಿಚ್ಛಕ್ತಿಯ ಪದವು ಎಲ್ಲಾ ಭೇದಗಳನ್ನೂ ನುಂಗುವ ಸ್ವಭಾವವುಳ್ಳದ್ದಾಗಿದ್ದರೆ ಮಾಯಾಪದದಲ್ಲಿಯೂ ಭೇದಭಾವನೆಗಳಿಲ್ಲದಿರಬೇಕಾಗಿತ್ತು. ಸೂರ್ಯನು ಮೇಘಗಳಿಂದ ಆವರಿಸಲ್ಪಟ್ಟಿದ್ದರೂ ಪದಾರ್ಥಗಳನ್ನು ಪ್ರಕಾಶಪಡಿಸುವುದಿಲ್ಲವೆ? ಎಂದು ಶಂಕಿಸಿ ಮುಂದಿನ ಸೂತ್ರವು ಹೊರಟಿದೆ.

**ಚಿತಿವನ್ಹಿರವರೋಹಪದೇ ಛನ್ನೋಽಪಿ ಮಾತ್ರಯಾ**
**ಮೇಯೇಂಧನಂ ಪ್ಲುಷ್ಯತಿ ॥ ೧೪ ॥**

ಚಿದಗ್ನಿಯು ತತ್ವಲೋಕದಲ್ಲಿಳಿಯುವಾಗ ಮಾಯಾಪ್ರಮಾತೃ ದಶೆಯಲ್ಲಿ ತನ್ನ ಸ್ವಾತಂತ್ರ್ಯವನ್ನು ಮರೆಸಿಕೊಂಡಿದ್ದರೂ ಪ್ರಮೇಯಗಳಾದ ಪದಾರ್ಥಗಳನ್ನು ಅಂಶತಃ ಸಾತ್ಮ್ಯೀಕರಿಸುತ್ತದೆ.

ಚಿತ್ತೀ ವಿಶ್ವವನ್ನು ನುಂಗುವ ಸ್ವಭಾವವುಳ್ಳದ್ದರಿಂದ ಬೆಂಕಿ ಎಂದು ಹೇಳಲ್ಪಡುತ್ತದೆ. ಮಾಯಾಪ್ರಮಾತೃ ದಶೆಯಲ್ಲಿ ತನ್ನ ಸ್ವಾತಂತ್ರ್ಯವನ್ನು ಮರೆಮಾಚಿಕೊಂಡಿದ್ದರೂ ಅಂದರೆ ಬೂದಿ ಮುಚ್ಚಿದ ಕೆಂಡದಂತಿದ್ದರೂ ಅಂಶತಃ ನೀಲ ಪೀತಾದಿ ಪ್ರಮೇಯಗಳನ್ನು ತನ್ನಲ್ಲಿ ಸೇರಿಸಿಕೊಳ್ಳುತ್ತದೆ. ಇಲ್ಲಿ 'ಘಾತ್ರಯಾ' ಎಂದರೆ ಸಾತ್ಮೀಕರಿಸಿದ್ದ ಪದಾರ್ಥಗಳನ್ನು ಸಂಸ್ಕಾರರೂಪದಿಂದಿಟ್ಟದ್ದು ಕಾಲಾಂತರದಲ್ಲಿ ಪ್ರಕಾಶಪಡಿಸುವುದು ಎಂದರ್ಥ. ಚಿತ್ತು ವಿಷಯಗಳನ್ನು ನುಂಗುವುದು ಅಂದರೆ ಪದಾರ್ಥಜ್ಞಾನವು ಸಂಸ್ಕಾರರೂಪವಾಗಿ ಚಿತ್ಸಮುದ್ರದಲ್ಲಿ ಮುಳುಗುತ್ತಿರುವುದು ಎಲ್ಲಾ ಪ್ರಮಾತೃಗಳಿಗೂ ಅನುಭವದಲ್ಲಿರುವ ವಿಷಯವಾಗಿದೆ.

ವರ್ತಂತೇ ಜಂತವೋಽಶೇಷಾ ಅಪಿ ಬ್ರಹ್ಮೇಂದ್ರ ವಿಷ್ಣವಃ ।
ಗ್ರಸಮಾನಾಸ್ತತೋ ವಂದೇ ದೇವ ವಿಶ್ವಂ ಭವನ್ಮಯಂ ॥

ಪರಮೇಶ್ವರನೇ! ಬ್ರಹ್ಮೇಂದ್ರ ವಿಷ್ಣು ಮೊದಲಾದ ಎಲ್ಲಾ ಪ್ರಾಣಿಗಳೂ ನಿನ್ನಿಂದ ಸಾತ್ಮೀಕೃತರಾಗುತ್ತಿರುತ್ತಾರೆ. ವಿಶ್ವವೆಲ್ಲಾ ನಿನ್ನಿಂದ ತುಂಬಿದೆ. ಅಂತಹ ನಿನಗೆ ನಮಸ್ಕಾರವು ಎಂದು ಉತ್ಪಲಾಚಾರ್ಯರು ಹೇಳಿದ್ದಾರೆ.

ಚಿತ್ಪ್ರಸರವು ಶಿವನ ಮೊದಲು ಸಕಲನವರೆಗೂ ಅವರೋಹಣ ಕ್ರಮದಿಂದ ಸಂಕುಚಿತವಾಗುತ್ತದೆ. ಏಳನೆಯವನಾದ ಸಕಲ ಪ್ರಮಾತೃವು (ಬದ್ಧ ಜೀವನು) ತನ್ನ ಶಕ್ತಿಗಳ ಪೂರ್ಣ ವಿಕಾಸವಿಲ್ಲದಿರುವನಾಗಿರುತ್ತಾನೆ. ಆದರೂ ಅವನಲ್ಲಿ ಎಲ್ಲಾ ಶಕ್ತಿಗಳೂ ಸೂಕ್ಷ್ಮರೂಪದಲ್ಲಿದ್ದೇ ಇರುತ್ತವೆ. ಸಂಕೋಚ ವಿಕಾಸಗಳು ಸ್ವಾತಂತ್ರ್ಯ

ಶಕ್ತಿಯ ವಿಲಾಸಗಳು. ಚಿಚ್ಛಕ್ತಿಯು ಈ ವಿಶ್ವವನ್ನು ಹೊರಹೊಮ್ಮಿಸುತ್ತದೆ ಮತ್ತು ಉಪಸಂಹರಿಸುತ್ತದೆ. ಇದೇ ಮಹಾ ವಿಶ್ವಸೃಷ್ಟಿ; ಮಹಾ ವಿಶ್ವ ಸಂಹಾರ.

ಅನಂತವಾದ ವಿಶ್ವದಲ್ಲಿ ಅಣುರೂಪಿಯಾಗಿ ಅತ್ಯಲ್ಪವಾದ ಸಂಕೋಚವನ್ನು ಪಡೆದಿರುವವನು ಮಿತಪ್ರಮಾತೃವು. ಈತನು ಸೃಷ್ಟಿ ಸ್ಥಿತಿ ಸಂಹಾರವೇ ಮೊದಲಾದವುಗಳನ್ನು ಮಾಡುವನೆಂದು ಹಿಂದೆಯೇ ಹೇಳಿದೆ. ಆದರೂ ಇಲ್ಲಿ ಪ್ರಮೇಯಗಳನ್ನು ಹೇಗೆ ನುಂಗುತ್ತಾನೆ ಅಥವಾ ತನ್ನಲ್ಲಿ ಅಡಗಿಸಿಕೊಳ್ಳುತ್ತಾನೆ ಎಂಬ ವಿಷಯವನ್ನು ಸ್ವಲ್ಪ ಮಟ್ಟಿಗೆ ವಿಶದಪಡಿಸಬೇಕಾಗಿದೆ. ಮಿತಪ್ರಮಾತೃವು ಬಗೆಬಗೆಯ ವಿಷಯಜ್ಞಾನವನ್ನು ಪಡೆಯುತ್ತಾನೆ. ಅವು ಐಂದ್ರಿಯಿಕವಾಗಿಯೂ ಇರುತ್ತವೆ; ಅತೀಂದ್ರಿಯ ವಿಷಯಗಳಾಗಿಯೂ ಇರುತ್ತವೆ. ಮನೆ ಹೊಲ ತೋಟ ಪಶು ಮೊದಲಾದವುಗಳು ಐಂದ್ರಿಯಿಕಗಳು. ಸ್ವರ್ಗ ನರಕ ಮೊದಲಾದವುಗಳು ಅತೀಂದ್ರಿಯ ವಿಷಯಗಳು. ಇಂತಹ ಎಲ್ಲಾ ವಿಷಯಗಳೂ ಮಿತಪ್ರಮಾತೃವಾದ ಇವನಲ್ಲೇ ಅಡಗಿರುತ್ತವೆ. ಈ ಸಾತ್ಮೀಕರಣವು ತಕ್ಕ ಸಮಯದಲ್ಲಿ ಹೊರಹೊಮ್ಮುವುದಕ್ಕೆ ಸರಿಯಾದ ಸಂಸ್ಕಾರರೂಪವನ್ನು ತಾಳಿರುತ್ತದೆ. ಆದುದರಿಂದ ಹಿಂದಿನ ವಿಷಯಗಳು ನೆನಪಿಗೆ ಬಂದು ವ್ಯವಹಾರ ನಡೆಯುವ ಜ್ಞಾನಾನುಭವವು ಎಲ್ಲಾ ಪ್ರಮಾತೃಗಳ ಅನುಭವದಲ್ಲಿಯೂ ಇದೆ. ಮಹಾ ವಿಶ್ವವನ್ನು ಸೃಷ್ಟಿಮಾಡಿದ ಚಿತ್ತು ವಿಶ್ವವನ್ನು ತನ್ನಲ್ಲಿ ಉಪಸಂಹರಿಸಿಕೊಂಡರೆ ಅದು ಪೂರ್ಣವಾಗಿ ಚಿತ್ತಿನಲ್ಲಿ ಲಯವಾಗಿಬಿಡುತ್ತದೆ. ಮರಳಿ ಸೃಷ್ಟಿಗೆ ಹಿಂದಿನ ಸಂಸ್ಕಾರವು ಬೇಕಾಗಿಲ್ಲ. ತನ್ನ ಸ್ವಶಕ್ತಿಯಿಂದಲೇ ಸೃಷ್ಟಿಮಾಡುತ್ತದೆ. ಮಿತಪ್ರಮಾತೃವಾದರೋ ಪ್ರಮೇಯ

ಗಳನ್ನು ಸ್ವರೂಪತಃ ಉಪಸಂಹರಿಸಿಕೊಳ್ಳಲಾರನು. ವಿಷಯಜ್ಞಾನ ಗಳನ್ನು ಸಾತ್ಮೀಕರಣಮಾಡಿಕೊಳ್ಳುತ್ತಾನೆ. ಅಂದರೆ ತನ್ನಲ್ಲೇ ಸೇರಿಸಿ ಕೊಳ್ಳುತ್ತಾನೆ. ಪುನಃ ಆ ತಿಳಿವಳಿಕೆಯನ್ನು ಹೊರಹೊಮ್ಮಿಸ ಬೇಕಾದರೆ ಹಿಂದಿನ ಜ್ಞಾನದ ಸಂಸ್ಕಾರದ ಬಲ ಬೇಕು. ಸಂಕ್ಷೇಪ ವಾಗಿ ಹೇಳುವುದಾದರೆ ಮಿತಪ್ರಮಾತೃವಿನ ಪ್ರಳಯ ಸೃಷ್ಟಿಗಳು ಸಂಸ್ಕಾರಾಪೇಕ್ಷೆಯುಳ್ಳದ್ದಾಗಿರುತ್ತವೆ.

**ಬಲ ಲಾಭೆ ವಿಶ್ವಮಾತ್ಮಸಾತ್ ಕರೋತಿ ॥ ೧೫ ॥**

ಇಂತಹ ಬಲ ಲಾಭವು ಲಭಿಸಿದರೆ ಅಂದರೆ ಚಿದ್ವಿಕಾಸವಾದರೆ ವಿಶ್ವ ವನ್ನು ತನ್ನಲ್ಲಿಯೇ ಸೇರಿಸಿಕೊಳ್ಳುತ್ತಾನೆ.

ದೇಹ ಪ್ರಾಣಾದಿರೂಪವಾದ ಚಿತ್ತು ತನ್ನ ಸಂಕೋಚವನ್ನು ಬಿಟ್ಟು ತನ್ನ ಸಹಜ ಸ್ವರೂಪವನ್ನು ಪ್ರಕಾಶಪಡಿಸುವಿಕೆಯೇ ಬಲ. ಇಂತಹ ಬಲ ಲಭಿಸಿದರೆ ಭೂಮಿಯಿಂದ ಸದಾಶಿವನವರೆಗೂ ಇರುವ ಈ ವಿಶ್ವವನ್ನು ತನ್ನ ಸ್ವರೂಪಕ್ಕಿಂತಲೂ ಬೇರೆಯಲ್ಲದಿರುವಂತೆ ತಿಳಿಯುತ್ತಾನೆ. ಈ ವಿಷಯವನ್ನು ಹಿರಿಯರು ತಮ್ಮ ದೇಶಭಾಷೆ ಯಲ್ಲಿರುವ ಕ್ರಮಸೂತ್ರಗಳಲ್ಲಿ ಹೇಳಿದ್ದಾರೆ. ಬೆಂಕಿಯು ಎಲ್ಲಾ ಪದಾರ್ಥಗಳನ್ನೂ ತನ್ನಲ್ಲಿ ಸೇರಿಸಿಕೊಳ್ಳುವಂತೆ ಚಿತ್ತು ವಿಶ್ವವನ್ನೇ ತನ್ನಲ್ಲಿ ಸೇರಿಸಿಕೊಳ್ಳುತ್ತದೆ. ವಿಶ್ವವು ಮಾಯಾಪ್ರಮಾತೃವಿಗೆ ಸಮಾ ವೇಶವಾಗುವುದೆಂದರೆ ಅದು ಯಾವುದೋ ಒಂದು ಕ್ಷಣದಲ್ಲಾಗ ಬಹುದು. ಅದನ್ನು ನಾವು ಅಂಗೀಕರಿಸಬೇಕೆ ಬೇಡವೆ ಎಂಬ ಶಂಕೆ ಯೇಳುತ್ತದೆ. ಶರೀರ ಪ್ರಾಣಾದಿಗಳ ಪ್ರಾಪ್ತಿ ಮತ್ತು ವಿಯೋಗೆ ಗಳು ಅನಿತ್ಯವಾಗಿವೆ. ವಸ್ತುತಃ ಚಿತ್ತು ಯಾವಾಗಲೂ ಸ್ವಯಂ

ಪ್ರಕಾಶವಾಗಿಯೇ ಇದೆ. ಸ್ವಯಂಪ್ರಕಾಶವಿಲ್ಲದಿದ್ದರೆ ದೇಹವೇ ಮೊದಲಾದ ವಿಷಯಗಳು ತಿಳಿಯುತ್ತಿರಲಿಲ್ಲ. ಆದುದರಿಂದ ದೇಹವೇ ನಾನು ಎಂಬ ಅಭಿಮಾನವನ್ನು ಹೋಗಲಾಡಿಸುವುದಕ್ಕೋಸ್ಕರ ಸಾಧನಾಭ್ಯಾಸಗಳು ನಿರೂಪಿತವಾಗಿವೆ. ಸಾಧನಾಭ್ಯಾಸಗಳು ದೇಹಾಭಿಮಾನವನ್ನು ನಿವಾರಿಸುವುದಕ್ಕೆ ಉಪದೇಶಿಸಲ್ಪಟ್ಟವೆಯೇ ಹೊರತು ಯಾವಾಗಲೂ ಸ್ವಯಂಪ್ರಕಾಶವಾಗಿರುವ ಚಿತ್ಪ್ರಾಪ್ತಿಗೋಸ್ಕರವಲ್ಲ. ಇದು ಸಿದ್ಧವಾಗಿಯೇ ಇದೆ. ಇದಕ್ಕಾಗಿ ಬೇರೆ ಸಾಧನಗಳು ಬೇಕಾಗಿಲ್ಲ.

ಈ ರೀತಿಯಾದ ಬಲ ಲಾಭವಾದರೂ ಮಾಯಾಪದದಲ್ಲಿ ಮಿತಪ್ರಮಾತೃವಿಗೆ ವಿಶ್ವವು ಆತ್ಮ ಸಾಕ್ಷಾತ್ಕಾರರೂಪವಾದ ಸಮಾವೇಶರೂಪದಲ್ಲಿ ಯಾವುದೋ ಒಂದುಕ್ಷಣದಲ್ಲಿ ಪ್ರಾಪ್ತವಾಗಬಹುದು. ಅವನಿಗೆ ದೇಹ ಪ್ರಾಣಾದಿಗಳ ಸಂಬಂಧವಿರುವವರೆಗೂ ನಿರಂತರ ಸಮಾವೇಶವಾಗಲಾರದೆಂದು ಕೆಲವರು ಶಂಕಿಸಬಹುದು. ದೇಹ ಪ್ರಾಣಾದಿಗಳ ಸಂಬಂಧ ಮತ್ತು ವಿನಾಶಗಳು ಅನಿತ್ಯವಾದವುಗಳಾಗಿರುವುದರಿಂದ ಮಿತಪ್ರಮಾತೃವಿಗೆ ದೇಹ ಪ್ರಾಣಾದಿಗಳ ಸಂಬಂಧವಿರುವವರೆಗೆ ಸಮಾವೇಶವು ಕ್ಷಣಿಕವಾಗಿದ್ದರೂ ತೊಂದರೆಯಿಲ್ಲ. ಅವನಿಗೆ ಬಲ ಲಾಭದಿಂದ ದೇಹಾಭಿಮಾನವು ನಾಶವಾಗುತ್ತದೆ. ಆದುದರಿಂದ ಮಿತಪ್ರಮಾತೃ ದಶೆಯಲ್ಲಿಯೂ ಚಿದ್ವಿಕಾಸರೂಪವಾದ ಸಮಾವೇಶವಾಗಬಹುದು.

**ಚಿದಾನಂದ ಲಾಭೆ ದೇಹಾದಿಷು ಚೈತ್ಯಮಾನೇಷ್ವಪಿ**
**ಚಿದೈಕಾತ್ಮ್ಯ ಪ್ರತಿಪತ್ತಿ ದಾರ್ಢ್ಯಂ ಜೀವನ್ಮುಕ್ತಿಃ ॥ ೧೬ ॥**

ಚಿದಾನಂದ ಲಾಭವಾದರೆ ಶರೀರವಿದ್ದರೂ ಚಿತ್ತಿನಲ್ಲಿ ದೃಢವಾದ ನಂಬಿಕೆಯಿರೋಣದರಿಂದ ಜೀವನ್ಮುಕ್ತಿಯಾಗುತ್ತದೆ.

ಈ ವಿಶ್ವವೆಲ್ಲಾ ತನ್ನಲ್ಲಿದೆಯೆಂಬ ಸಮಾವೇಶರೂಪವಾದ ಚಿದಾನಂದವು ಲಭಿಸಲಾಗಿ ಜಾಗ್ರದವಸ್ಥೆಯಲ್ಲಿಯೂ ಹೂವಿಗೆ ದಳಗಳಿರುವಂತೆ ದೇಹ ಪ್ರಾಣ ನೀಲ ಸುಖ ಮೊದಲಾದ ಅನಂತ ಪ್ರಮೇಯಗಳು ತೋರುತ್ತಿರುತ್ತವೆ. ಹೀಗಿದ್ದರೂ ಚಿತ್ಸಮಾವೇಶದ ಸಂಸ್ಕಾರದಶೆಯಿಂದ ಮುಂದೆ ಹೇಳುವ ಕ್ರಮದಂತೆ ಚಿತ್ತಿನಲ್ಲಿ ದೃಢವಾದ ವಿಶ್ವಾಸವುಂಟಾಗುತ್ತದೆ. ಅಚಂಚಲವಾದ ಚಿದನುಭವ ರಸದಿಂದ ಚಿತ್ತು ಒಂದೇ ಇದೆಯೆಂದು ತೋರುತ್ತದೆ. ಈ ರೀತಿಯಾದ ಅನುಭವಿಯು ಈ ಲೋಕದಲ್ಲಿ ಬದುಕಿದ್ದರೂ ಜೀವನ್ಮುಕ್ತನಾಗಿರುವನು. ನಿಜಸ್ವರೂಪವನ್ನು ಗುರ್ತಿಸಿ ಎಲ್ಲಾ ಪಾಶರಾಶಿಗಳನ್ನು ಕಳೆಯುವುದೇ ಮುಖ್ಯವಾದುದೆಂದೂ ಚಿತ್ತಿನ ಕ್ರೀಡೆಯೇ ಈ ವಿಶ್ವವೆಂದೂ ಯಾವಾಗಲೂ ಅನುಸಂಧಾನಮಾಡುವವನು ಜೀವನ್ಮುಕ್ತನಾಗುವನೆಂದೂ ಸ್ಪಂದ ಶಾಸ್ತ್ರದಲ್ಲಿ ಹೇಳಿದೆ.

**ಇತಿವಾ ಯಸ್ಯ ಸಂವಿತ್ತಿಃ ಕ್ರೀಡಾತ್ವೇನಾಖಿಲಂಜಗತ್ ।**
**ಸಪಶ್ಯರ್ನ್ ಸತತಂ ಯುಕ್ತೋ ಜೀವನ್ಮುಕ್ತೋ ನಸಂಶಯಃ ॥**

**ಮಧ್ಯ ವಿಕಾಸಾತ್ ಚಿದಾನಂದಲಾಭಃ ॥ ೧೭ ॥**

ಬ್ರಹ್ಮನಾಡಿ ವಿಕಸಿಸುವುದರಿಂದ ಚಿದಾನಂದ ಲಾಭವುಂಟಾಗುತ್ತದೆ.

ಯಾವುದು ಎಲ್ಲಾ ಪದಾರ್ಥಗಳಲ್ಲಿಯೂ ಸೂಕ್ಷ್ಮರೂಪದಿಂದ ವ್ಯಾಪಿಸಿ ಅಂತರ್ಯಾಮಿಯಾಗಿರುವುದೋ ಯಾವುದರ ಸಂಬಂಧವಿಲ್ಲದೆ ಯಾವ ವಸ್ತುವೂ ಸ್ವರೂಪ ಸಿದ್ಧಿಯನ್ನು ಪಡೆಯುವುದಿಲ್ಲವೋ ಅಂತಹ

ಮಹಾಮಹಿಮಳಾದ **ಸಂವಿತ್ತೇ ಮಧ್ಯ.** ಅದು ಮಾಯಾದಶೆಯಲ್ಲಿ ತನ್ನ ಪ್ರಭಾವವನ್ನು ಮರೆಮಾಚಿಕೊಂಡು ಮೊದಲು ಪ್ರಾಣಶಕ್ತಿ ರೂಪವನ್ನು ಅಂಗೀಕರಿಸಿ ಅವರೋಹಣಕ್ರಮದಿಂದ ಬುದ್ಧಿ ದೇಹಾದಿ ಸ್ಥಿತಿಗಳನ್ನು ಹೊಂದುತ್ತಾ ಸಾವಿರಾರು ನಾಡಿಗಳ ಸ್ವರೂಪವನ್ನನುಸರಿಸಿದೆ. ಅದೇ ಸಂವಿತ್ತು ಮುತ್ತುಗದೆಲೆಯ ನಡುವೆ ಇರುವ ಕಡ್ಡಿಯಂತೆ ತಲೆಯಲ್ಲಿರುವ ಬ್ರಹ್ಮರಂಧ್ರದಿಂದ ಮೊದಲು ಮಾಡಿಕೊಂಡು ಮೂಲಾಧಾರದವರೆಗೂ ಪ್ರಾಣಶಕ್ತಿ ಮತ್ತು ಬ್ರಹ್ಮ ಇವೆರಡಕ್ಕೂ ಆಶ್ರಯವಾಗಿ ಪ್ರಧಾನವಾಗಿ ಮಧ್ಯಮನಾಡಿರೂಪದಿಂದ ವ್ಯಾಪಿಸಿದೆ. **ನಮಗುಂಟಾಗುವ ಎಲ್ಲಾ ಪ್ರೇರಣೆಗಳೂ ಎಲ್ಲಾ ವೃತ್ತಿಗಳೂ ಈ ಮಧ್ಯಮನಾಡಿಯಿಂದಲೇ ಹುಟ್ಟುತ್ತವೆ. ಇಲ್ಲಿಯೇ ಮುಳುಗುತ್ತವೆ.** ವೃತ್ತಿಗಳ ಮೂಲ ಮತ್ತು ಪ್ರೇರಣೆಯಲ್ಲಾ ಪ್ರಾಣಾಶ್ರಯದಲ್ಲಿಯೂ ಮನಸ್ಸು ಬ್ರಹ್ಮಾಶ್ರಯದಲ್ಲಿಯೂ ಇರುತ್ತವೆ. ಹೀಗಿದ್ದರೂ ಈ ಮಹಾಶಕ್ತಿಯು ಬದ್ಧಾತ್ಮರಿಗೆ ತಿಳಿಯದಿರುವಹಾಗೆಯೇ ಇದೆ. ಯಾವಾಗ ಹಿಂದೆ ಹೇಳಿದ ಯುಕ್ತಿ ಕ್ರಮಗಳಿಂದ ಎಲ್ಲಾ ಪದಾರ್ಥಗಳಲ್ಲಿಯೂ ಸೂಕ್ಷ್ಮರೂಪವಾಗಿ ವ್ಯಾಪಿಸಿರುವ ಸಂವಿತ್‌ಶಕ್ತಿಯಾದ ಮಧ್ಯನಾಡಿಯು ವಿಕಸಿಸುವುದೋ ಅಥವಾ ನಾವು ಮುಂದೆ ಹೇಳುವ ಕ್ರಮದಿಂದ ಈ ಮಧ್ಯಭೂತವಾದ ಬ್ರಹ್ಮನಾಡಿಯು ವಿಕಸಿಸುತ್ತದೆಯೋ ಅಂತಹ ವಿಕಾಸದಿಂದ ಹಿಂದೆ ಹೇಳಿದ ಚಿದಾನಂದ ಪ್ರಾಪ್ತಿಯಾಗುತ್ತದೆ. ಆ ಮಹಾಪ್ರಾಪ್ತಿಯಿಂದ ಮೇಲೆ ವಿವರಿಸಿದ ಜೀವನ್ಮುಕ್ತಿಯುಂಟಾಗುತ್ತದೆ.

ಚಿಚ್ಛಕ್ತಿಯು ಅನಂತಪ್ರಕಾರವಾಗಿದೆ. ನಮಗೆ ಕಾಣಿಸುವ ಮತ್ತು ತೋರುವ ಎಲ್ಲಾ ಪದಾರ್ಥಗಳಲ್ಲಿಯೂ ಸ್ಥೂಲರೂಪವು

ಪ್ರಧಾನವಾಗಿ ಕಂಡುಬಂದರೂ ಸೂಕ್ಷ್ಮವಾಗಿ ಅಂತರ್ಯಾಮಿಯಾಗಿ ಅತೀಂದ್ರಿಯವಾಗಿರುವ ಆ ಮಹಾಶಕ್ತಿಯು ಇದ್ದೇ ಇದೆ. ಆ ಶಕ್ತಿಯ ಪ್ರಸಾರವು ಸಹಸ್ರಾರು ಮುಖಗಳಾಗಿದೆ. ಅಶುದ್ಧಾಧ್ವದಲ್ಲಿ ಕಲಾದಿ ಪೃಥ್ವೀವರೆಗೂ ಆಗಿರುವ ತತ್ವಗಳ ಸ್ವರೂಪಗಳಿಂದ ಪ್ರಕಾಶಿಸುತ್ತಿದೆ. ಮಾಯಾಪ್ರಮಾತೃವು ದೇಹ ಪ್ರಾಣ ಪುರ್ಯಷ್ಟಕಗಳಿಂದ ಕೂಡಿರುತ್ತಾನೆ. **ಸಂವಿತ್‌ಶಕ್ತಿಯು ಅವರೋಹಣಕ್ರಮದಲ್ಲಿ ಹಿಂದೆ ವಿವರಿಸಿರುವಂತೆ ಪ್ರಾಣಶಕ್ತಿರೂಪವನ್ನು ಪಡೆಯುತ್ತದೆ.** ಮಿತಪ್ರಮಾತೃವಿನ ಶರೀರದಲ್ಲಿ ಪಂಚಪ್ರಾಣಗಳ ರೂಪದಿಂದ ಪ್ರಕಾಶಿಸುತ್ತದೆ. ಮನುಷ್ಯನ ಶರೀರದಲ್ಲಿ ೭೨೦೦೦ ನಾಡಿಗಳಿವೆ ಯೆಂದು ಹಿರಿಯರ ನಿಶ್ಚಯವಿದೆ. ಇವುಗಳಲ್ಲಿ ಕೆಲವು ಪ್ರಾಣವಾಹಕಗಳು ಕೆಲವು ರಕ್ತವಾಹಕಗಳು ಎಂದು ವಿಭಾಗವಿದೆ. ಪ್ರಾಣವಾಹಕ ನಾಡಿಗಳಲ್ಲಿ ಪ್ರಾಣಶಕ್ತಿಯು ವಿದ್ಯುಚ್ಛಕ್ತಿಯಂತೆ ಸಂಚರಿಸುತ್ತದೆ. ರಕ್ತವಾಹಕನಾಡಿಗಳಲ್ಲಿ ರಕ್ತವು ಪ್ರಾಣಶಕ್ತಿಯ ಪ್ರೇರಣೆಯಿಂದಲೇ ಹರಿಯುತ್ತದೆ. ತಲೆಯಿಂದ ಕಾಲಿನವರೆಗೂ ಈ ೭೨೦೦೦ ನಾಡಿಗಳು ವಿಚಿತ್ರ ಸನ್ನಿವೇಶಗಳನ್ನು ಹೊಂದಿಕೊಂಡಿವೆ. ಈ ೭೨೦೦೦ ನಾಡಿಗಳಲ್ಲಿ ೧೦೧ ನಾಡಿಗಳು ಮುಖ್ಯವಾದವುಗಳು. ಈ ೧೦೧ ನಾಡಿಗಳಲ್ಲಿ ೧೦ ನಾಡಿಗಳು ಪ್ರಾಣವಾಯುವಿನ ಬಲದಿಂದ ಅಂಕೆಯಲ್ಲಿಡಬಹುದಾಗಿರುವವುಗಳಾಗಿವೆ. ಈ ೧೦ರಲ್ಲಿ ಮೂರು ಮುಖ್ಯವಾದವು. ಇವುಗಳಿಗೆ ಇಡಾ ಪಿಂಗಳಾ ಸುಷುಮ್ನಾ ಎಂದು ಹೆಸರು. ಈ ಮೂರರಲ್ಲಿ ಒಂದು ಅತಿ ಮುಖ್ಯವಾದದ್ದು. ಇದಕ್ಕೆ **ಸುಷುಮ್ನಾ,** ಮಧ್ಯನಾಡಿ, ಬ್ರಹ್ಮನಾಡಿ ಎಂಬ ಸಂಜ್ಞೆ ಇದೆ. ಇದು ಮುತ್ತಿನಸರದಲ್ಲಿ ನಡುವೆ ಇರುವ ಕಡ್ಡಿಯಂತೆ ಇದೆ. ಇದನ್ನಾಶ್ರಯಿಸಿ ಮುತ್ತುಗ

ದೆಲೆಯಲ್ಲಿ ಅತಿ ಸೂಕ್ಷ್ಮವಾದ ಆ ಎಲೆಯ ತಂತು ಪಂಜರಗಳಂತೆ ಇಲ್ಲಿ ಸುಷುಮ್ನಾನಾಡಿಯನ್ನಾಶ್ರಯಿಸಿಕೊಂಡು ಅದರ ಮೊದಲು ನಡುವೆ ಕೊನೆಗಳಲ್ಲಿ ೭೨೦೦೦ ನಾಡಿ ಪಂಜರಗಳಿವೆ. ಈ ಬ್ರಹ್ಮನಾಡಿಯು ತಲೆಯ ಮಧ್ಯಭಾಗದಿಂದ ಹಿಡಿದು ಮೂಲಾಧಾರದವರೆಗೂ ವ್ಯಾಪಿಸಿದೆ. ಮನುಷ್ಯನಿಗುಂಟಾಗುವ ಕಾಮ ಕ್ರೋಧ ಲೋಭ ಮೊದಲಾದ ವೃತ್ತಿಗಳು ಮೂಲಾಧಾರದಿಂದಲೇ ಹೊರಹೊಮ್ಮುತ್ತವೆ. ಮನಸ್ಸಿನ ಪ್ರಸನ್ನತೆ ಸೌಮ್ಯತ್ವ ಶಾಂತಿ ಏಕಾಗ್ರತೆ ಮುಂತಾದವುಗಳು ಅದರ ಶಿರೋಭಾಗದಿಂದ ಹೊರಹೊಮ್ಮುತ್ತವೆ. ಸೂಕ್ಷ್ಮವಾಗಿ ನಮ್ಮಲ್ಲಿಯೇ ನಾವು ವಿಮರ್ಶೆ ಮಾಡಿಕೊಂಡರೆ ಬಾಹ್ಯಪ್ರಪಂಚ ಪ್ರವೃತ್ತಿಗಳೆಲ್ಲಾ ಬ್ರಹ್ಮನಾಡಿಯ ಮೂಲಾಧಾರ ಪ್ರದೇಶದಿಂದಲೂ ಆಂತರೀಯತೆಗೆ ಸಂಬಂಧಪಟ್ಟ ಜ್ಞಾನಪ್ರವಾಹಗಳು ಕೊನೆಭಾಗದಿಂದಲೂ ಹೊರಹೊಮ್ಮುತ್ತಿವೆಯೆಂದು ಅನುಭವದಿಂದ ಊಹಿಸಬಹುದು. ಬಾಹ್ಯ ಪದಾರ್ಥಗಳಿಗೆ ಸಂಬಂಧಪಟ್ಟ ವೃತ್ತಿಗಳೂ ಆಂತರೀಯತೆಗೆ ಸಂಬಂಧಪಟ್ಟ ಭಾವನೆಗಳೂ ಈ ಮಧ್ಯನಾಡಿಯಿಂದಲೇ ಹೊರಹೊಮ್ಮುತ್ತಿವೆ. ಮರಳಿ ಅದರಲ್ಲಿಯೇ ಲಯವಾಗುತ್ತಿವೆ. ವಸ್ತುಸ್ಥಿತಿ ಇಷ್ಟು ವಿಶದವಾಗಿ ವಿಸ್ತಾರವಾಗಿ ಅನುಭವಗಮ್ಯವಾಗಿದ್ದರೂ ಪಶುಗಳಾದ ಅಜ್ಞರಿಗೆ ತಿಳಿಯದೆ ಕುರುಡರಿಗೆ ಬೆಳಕಿದ್ದಹಾಗಿದೆ. ಹಿಂದೆ ಹೇಳಿದ ಪಂಚಕೃತ್ಯಗಳ ಅನುಶೀಲನಾದಿಕ್ರಮಗಳಿಂದ ಯಾವಾಗ ಆ ಮಧ್ಯಮನಾಡಿಯು ವಿಕಾಸವನ್ನು ಪಡೆಯುತ್ತದೆಯೋ ಆಗ ಮೇಲೆ ನಿರೂಪಿಸಿರುವ ಚಿದಾನಂದ ಲಾಭವಾಗುತ್ತದೆ. ಅಥವಾ ಮುಂದೆ ಹೇಳಲ್ಪಡುವ ಇನ್ನೂ ಆಗಮಗಳಲ್ಲಿ ನಿರೂಪಿಸಿರುವ ಉಪಾಯಗಳನ್ನು ಅಧಿಕಾರಿಗಳು ತಮ್ಮ ಮಟ್ಟಕ್ಕನುಸಾರವಾಗಿ ಅನುಷ್ಠಾನಮಾಡಿದರೆ ಮಧ್ಯನಾಡಿ ವಿಕಾಸವಾಗಿ ಚಿದಾನಂದ ಲಾಭವುಂಟಾಗುತ್ತದೆ.

## ಮಧ್ಯಮ ವಿಕಾಸಕ್ಕೆ ಉಪಾಯಗಳು :

**ವಿಕಲ್ಪಕ್ಷಯ ಶಕ್ತಿಸಂಕೋಚ ವಿಕಾಸ ವಾಹಚ್ಛೇದಾದ್ಯಂತ ಕೋಟನಿಭಾಲನಾದಯ ಇಹ ಉಪಾಯಾಃ ।। ೧೮ ।।**

ವಿಕಲ್ಪಕ್ಷಯ, ಶಕ್ತಿಸಂಕೋಚ ವಿಕಾಸ, ವಾಹಚ್ಛೇದ, ಆದ್ಯಂತಕೋಟ ನಿಭಾಲನ ಇವೇ ಮೊದಲಾದವುಗಳು ಉಪಾಯಗಳು.

ಮಧ್ಯಶಕ್ತಿ ವಿಕಾಸಕ್ಕೆ ಹಿಂದೆ ನಾವು ಹೇಳಿರುವ ಪಂಚವಿಧ ಕೃತ್ಯಕಾರಿತ್ವ ಮುಂತಾದವುಗಳನ್ನು ಅನುಶೀಲನ ಪರಿಶೀಲನ ಅನು ಸಂಧಾನ ಪರಾಮರ್ಶಕ್ರಮಗಳಿಂದ ಅನುಸರಿಸುವುದರಿಂದ ಸರ್ವಮಧ್ಯ ಭೂತವಾಗಿರುವ ಸಂವಿತ್ತಿನ ವಿಕಾಸವುಂಟಾಗುತ್ತದೆ. ಆದರೂ ಇನ್ನೂ ಕೆಲವು ಉಪಾಯಗಳಿವೆ. ಪ್ರಾಣಾಯಾಮ ಮುದ್ರಾ ಬಂಧ ಮುಂತಾದ ಕ್ರಮಗಳನ್ನು ಅಭ್ಯಾಸಮಾಡುವುದರಿಂದ ಸಾಧಕನು ಅತಿಶಯವಾದ ಅಲೌಕಿಕ ಸುಖವನ್ನು ಪಡೆಯುತ್ತಾನೆ. ಹೃದಯದಲ್ಲಿ ಮನಸ್ಸನ್ನು ನಿಲ್ಲಿಸಿ ತನ್ನ ಸ್ವರೂಪಜ್ಞಾನಕ್ಕೆ ತಡೆಯಾಗಿರುವ ವಿಕಲ್ಪಗಳನ್ನು ಹಿಂದೆ ಹೇಳಿದ ಯುಕ್ತಿಯಿಂದ ಸಾಧಿಸಿದರೆ ಪ್ರಶಾಂತಸ್ಥಿತಿಯನ್ನು ಪಡೆಯುತ್ತಾನೆ. ವಿಕಲ್ಪವಿಲ್ಲದ ಪರಾಮರ್ಶದಿಂದ ಪರಿಶುದ್ಧವಾದ ಚಿತ್ಪ್ರಮಾತೃವನ್ನು ಧ್ಯಾನಮಾಡುವುದಕ್ಕೆ ಸಮರ್ಥನಾದರೆ ಅಲ್ಲಿಂದ ಬೇಗನೆ. ವಿಕಾಸವಾಗಲಿರುವ ತುರ್ಯ ತುರ್ಯಾತೀತ ಸಮಾವೇಶ ವನ್ನು ಪಡೆಯುತ್ತಾನೆ.

'ವಿಕಲ್ಪ ಹಾನೇ ನೈಕಾಗ್ರ್ಯಾತ್ ಕ್ರಮೇಣೇಶ್ವರತಾಪದಂ' ವಿಕಲ್ಪಗಳನ್ನು ಬಿಟ್ಟು ಏಕಾಗ್ರತೆಯಿಂದ ಅನುಸಂಧಾನಮಾಡಿ ಈಶ್ವರತ್ವ ವನ್ನು ಪಡೆಯಬಹುದೆಂದು ಪ್ರತ್ಯಭಿಜ್ಞೆಯಲ್ಲಿ ಹೇಳಿದೆ.

ವಿಕಲ್ಪಗಳು ಲಯವಾದರೆ ಪರಮಪದ ಪ್ರಾಪ್ತಿಯಾಗುತ್ತದೆಂದು ಸ್ಪಂದಶಾಸ್ತ್ರದಲ್ಲಿ ಹೇಳಿದೆ.

'ಯದಾಕ್ಷೋಭಃ ಪ್ರಲೀಯೇತ ತದಾಸ್ಯಾತ್ ಪರಮಂಪದಂ'

**ವಿಹಾಯ ಸಕಲಾಃ ಕ್ರಿಯಾಜನನಿ ಮಾನಸೀಃ ಸರ್ವತೋ**
**ವಿಮುಕ್ತ ಕರಣಕ್ರಿಯಾನುಸೃತಿಪಾರತಂತ್ರ್ಯೋಜ್ವಲಮ್ ।**
**ಸ್ಥಿತೈಸ್ತ್ವದನುಭಾವತಃ ಸಪದಿ ವೇದ್ಯತೆ ಸಾ ಪರಾ**
**ದಶಾ ನೃಭಿರತಂದ್ರಿತಾಸಮ ಸುಖಾಮೃತಸ್ಯಂದಿನೀ ॥**

ಈ ರೀತಿ ಜ್ಞಾನ ಗರ್ಭಸ್ತೋತ್ರದಲ್ಲಿ ಹೇಳಲ್ಪಟ್ಟದೆ.

ಹೇ ದೇವಿಯೆ! ಪರಾಧೀನಗಳಾದ ಬಾಹ್ಯೇಂದ್ರಿಯ ಕ್ರಿಯೆಗಳಿಂದುಂಟಾಗುವ ವೃತ್ತಿಗಳನ್ನೂ ಮಾನಸಿಕವಾದ ಭಾವನೆಗಳನ್ನೂ ಸಂಪೂರ್ಣವಾಗಿ ತೊರೆದು ನಿನ್ನನ್ನೇ ಅನುಸಂಧಾನಮಾಡುವ ತಾಳ್ಮೆಯಿರುವ ಮನುಷ್ಯರಿಂದ ಅಸಮಾನವಾದ ಅಮೃತವನ್ನು ಕರೆಯುತ್ತಿರುವ ಮಹಾ ಸುಖರೂಪವಾದ ಪರಾದಶೆಯು ಅನುಭವಿಸಲ್ಪಡುತ್ತದೆ. ಈ ಉಪಾಯವು ಎಲ್ಲಾ ಉಪಾಯಗಳಿಗಿಂತಲೂ ಮುಖ್ಯವಾದುದೆಂದು ಪ್ರತ್ಯಭಿಜ್ಞೆಯಲ್ಲಿ ಹೇಳಿದೆ. ಶಕ್ತಿ ಸಂಕೋಚವಿಕಾಸ ಮೊದಲಾದ ಉಪಾಯಗಳು ಪ್ರತ್ಯಭಿಜ್ಞೆಯಲ್ಲಿ ಹೇಳಲ್ಪಟ್ಟಲ್ಲ. ಆದರೂ ಆಗಮಗಳಲ್ಲಿ ಹೇಳಲ್ಪಟ್ಟಿರುವುದರಿಂದ ಅನೇಕ ದಾರಿಗಳನ್ನು ತೋರಿಸಿದರೆ ಒಬ್ಬೊಬ್ಬರು ಒಂದೊಂದು ದಾರಿಯನ್ನನುಸರಿಸಬಹುದೆಂದು ನಿರೂಪಿಸಿದೆ. ಇಲ್ಲಿಗೆ ವಿಕಲ್ಪಕ್ಷಯವಾಯಿತು.

ಇಂದ್ರಿಯದ್ವಾರಾ ಪ್ರಸರಿಸುತ್ತಲಿರುವ ಶಕ್ತಿಯನ್ನು ಉಪಸಂಹರಿಸುವ ಕ್ರಮದಿಂದ ಉನ್ಮುಖೀಕರಣವೇ ಶಕ್ತಿಸಂಕೋಚ.

ಕಠೋಪನಿಷತ್ತಿನಲ್ಲಿ ಈ ರೀತಿ ಹೇಳಲ್ಪಟ್ಟಿದೆ.

ಪರಾಂಚಿ ಖಾನಿ ವ್ಯತೃಣತ್‌ಸ್ವಯಂಭೂಃ
ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ ।
ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದ್
ಆವೃತ್ತಚಕ್ಷುರಮೃತತ್ವಮಿಚ್ಛನ್ ॥

ಬ್ರಹ್ಮನು ಇಂದ್ರಿಯಗಳನ್ನು ಹೊರಗಿನ ವಿಷಯಗಳನ್ನು ತಿಳಿಯುವ ಸ್ವಭಾವವುಳ್ಳವುಗಳನ್ನಾಗಿ ಸೃಷ್ಟಿಮಾಡಿದ್ದಾನೆ. ಅದುದರಿಂದ ಹೊರಗಿನ ಪದಾರ್ಥಗಳನ್ನು ಮಾತ್ರ ಈ ಇಂದ್ರಿಯಗಳಿಂದ ತಿಳಿಯುತ್ತಾನೆ. ಇವುಗಳಿಂದ ಅಂತಃಪ್ರಪಂಚವನ್ನು ನೋಡಲಾರ. ಒಬ್ಬಾನೊಬ್ಬ ಧೀರನಾದ ಸಾಧಕನು ಹೊಳೆಗೆ ಎದುರಾಗಿ ಈಜುವಂತೆ ಇಂದ್ರಿಯಗಳನ್ನು ಹಿಂದಕ್ಕೆ ತಿರುಗಿಸಿ ಮೋಕ್ಷಾಕಾಂಕ್ಷಿಯಾಗಿ ಅಂತಃಪ್ರಪಂಚವನ್ನು ನೋಡಿದನು.

ಆಮೆಯು ತನ್ನ ಕೈಕಾಲುಗಳನ್ನು ಒಳಕ್ಕೆ ಎಳೆದುಕೊಳ್ಳುವ ಹಾಗೂ ಭಯಪಟ್ಟಾಗ ಹೃದಯದಲ್ಲಿಯೇ ಎಲ್ಲಾ ಶಕ್ತಿಗಳೂ ಅಡಗಿದ ಹಾಗೂ ಹೊರಕ್ಕೆ ಇಂದ್ರಿಯಗಳ ಮೂಲಕ ಪ್ರಸರಿಸುತ್ತಲಿರುವ ಶಕ್ತಿಗಳು ಉಪಸಂಹರಿಸಲ್ಪಟ್ಟರೆ ನಿತ್ಯೋದಿತವಾದ ಚಿದನುಭವವುಂಟಾಗುತ್ತದೆ. ಈ ಉಪಸಂಹರಣಕ್ರಮವು ಉನ್ಮುಖೀಕರಣವೆನಿಸುತ್ತದೆ.

ಒಳಗೆ ಗೂಢವಾಗಿರುವ ಶಕ್ತಿಯು ಅಕ್ರಮರೂಪವಾದ ಕ್ರಮದಿಂದ ಎಲ್ಲಾ ಇಂದ್ರಿಯಗಳ ಮೂಲಕವೂ ಸ್ಫುರಿಸುವಾಗ ತನ್ನ ಲಕ್ಷ್ಯವು ಅಂತಃಪ್ರಪಂಚದಲ್ಲಿಯೇ ಇದ್ದು ಹೊರಗಿನ ದೃಷ್ಟಿಯು ನಿಮೇಷೋನ್ಮೇಷಗಳಿಲ್ಲದಿರಬೇಕು. ತಾತ್ಪರ್ಯವೇನೆಂದರೆ: ಈ ಸಾಧಕನ

ಹೊರಗಿನ ವ್ಯಾಪಾರಗಳು ಭೈರವೀಯ ಮುದ್ರೆಯ ಅನುಪ್ರವೇಶ ಯುಕ್ತಿಯಿಂದ ನಡೆಯಬೇಕು. ಯಾವಾಗಲೂ ಬಾಹ್ಯ ವ್ಯವಹಾರಗಳನ್ನು ನಡೆಸುತ್ತಿದ್ದರೂ ಚಿದನುಸಂಧಾನವು ಏಕಾಗ್ರವಾಗಿರುವಿಕೆಯೇ ಭೈರವೀಮುದ್ರಾ. ಭೈರವೀಮುದ್ರಾ, ಖೇಚರೀಮುದ್ರಾ ಈ ಎರಡು ಮುದ್ರೆಗಳಿಗೂ ಈ ಸಂಪ್ರದಾಯದಲ್ಲಿ ಒಂದೇ ಅರ್ಥ. ಶಕ್ತಿವಿಕಾಸವನ್ನು ಹೊಂದಿದವನು ಈ ಯುಕ್ತಿಯಿಂದ ಜೀವನವನ್ನು ನಡೆಸುತ್ತಾನೆ.

ಸಮಾಧಿಸ್ಥಿತಿಯನ್ನು ನೋಡಿರುವವನು ಜಾಗ್ರದವಸ್ಥೆಯಲ್ಲಿಯೂ ಚಿದ್ರಸಾನುಭವಿಯಾಗಿಯೇ ಇರುತ್ತಾನೆ. ಈ ವಿಷಯವು ಕಕ್ಷ್ಯಾಸ್ತೋತ್ರದಲ್ಲಿ ಈ ರೀತಿ ಹೇಳಲ್ಪಟ್ಟಿದೆ.

ಸರ್ವಾಃ ಶಕ್ತೀಶ್ಚೇತಸಾ ದರ್ಶನಾದ್ಯಾಃ
ಸ್ವೇ ಸ್ವೇ ವೇದ್ಯೇ ಯೌಗಪದ್ಯೇನ ವಿಷ್ವಕ್ ।
ಕ್ಷಿಪ್ತ್ವಾ ಮಧ್ಯೇ ಹಾಟಕಸ್ತಂಭಭೂತ
ಸ್ತಿಷ್ಠನ್ವಿಶ್ವಾಧಾರ ಏಕೋಽವಭಾಸಿ ॥

ಎಲೈ ಪರಮೇಶ್ವರನೇ 'ಮನಸ್ಸಿನಿಂದ ತಿಳಿಯುವುದು, ಇಂದ್ರಿಯಗಳಿಂದ ನೋಡುವುದು ಕೇಳುವುದು ಮೊದಲಾದ ಎಲ್ಲಾ ಶಕ್ತಿ

---

ಭೈರವೀ ಮುದ್ರಾಲಕ್ಷಣ

ಮನಃ ಸ್ಥಿರಂ ಯಸ್ಯ ವಿನಾವಲಂಬನಂ
ವಾಯುಃ ಸ್ಥಿರೋ ಯಸ್ಯ ವಿನಾವರೋಧನಮ್ ।
ದೃಷ್ಟಿಃ ಸ್ಥಿರಾ ಯಸ್ಯ ವಿನಾವಲೋಕನಂ
ಸ್ಯಾತ್ಸೈವ ಮುದ್ರಾ ವಿಮಲಾ ಚ ಖೇಚರೀ ॥

ವ್ಯಾಪಾರಗಳನ್ನು ತಮ್ಮ ತಮ್ಮ ವಿಷಯಗಳಿಂದ ಹಿಂದಿರುಗಿಸಿ ವಿಶ್ವಕ್ಕೆಲ್ಲಾ ಆಧಾರವಾದ ಚಿನ್ನದ ಕಂಬದಂತೆ ಚಾಂಚಲ್ಯವಿಲ್ಲದೆ ಪ್ರಕಾಶಿಸುತ್ತಿದ್ದೀಯೆ' ಎಂದು ತಿಳಿದು ಮನನಮಾಡತಕ್ಕದ್ದು ಎಂದು ಸ್ತೋತ್ರ ಮಾಡಿರುತ್ತಾರೆ.

ಆರು ಮುಖಗಳುಳ್ಳ ಆಧಾರಚಕ್ರದಲ್ಲಿ ಶಕ್ತಿಯನ್ನು ಅಭಿವೃದ್ಧಿಪಡಿಸಿ ಮಧ್ಯನಾಡಿಯ ಬುಡ ಮಧ್ಯೆ ಕೊನೆಯಲ್ಲಿ ಸ್ಪರ್ಶಾವೇಶ ರೂಪವಾದ ಅನುಸಂಧಾನಮಾಡುವಿಕೆ. ಅಂದರೆ ಜ್ಞಾನರೂಪವಾಗಿ ಅದನ್ನು ನೆನೆದು ಅನುಸಂಧಾನಮಾಡುವುದು. ಈ ಉಪಾಯದಿಂದ ಬಾಹ್ಯ ಪ್ರಸರಣರೂಪವಾದ ಶಕ್ತಿವಿಕಾಸಕ್ಕೂ ಅಂತರನು ಸಂಧಾನವಾಗುವ ಚಿದ್ವನ್ಹಿಗೂ ಮಧ್ಯೆ ಮನಸ್ಸನ್ನು ಭಾವನಾಬಲದಿಂದ ಸುಖಮಯವಾಗಿ ನಿಲ್ಲಿಸಿದರೆ ಇತರ ವಿಷಯಗಳನ್ನು ಮರೆಯುವಂತಹ ಆನಂದ ವುಂಟಾಗುತ್ತದೆ.

**ವನ್ಹೇರ್ವಿಷಸ್ಯ ಮಧ್ಯೇ ತು ಚಿತ್ತಂ ಸುಖಮಯಂ ಕ್ಷಿಪೇತ್ ।**
**ಕೇವಲಂ ವಾಯುಪೂರ್ಣಂ ವಾ ಸ್ಮರಾನಂದೇನ ಯುಜ್ಯತೇ ॥**

ಇಲ್ಲಿ ವನ್ಹಿಯು (ಚಿತ್ತವು) ಅನುಪ್ರವೇಶಕ್ರಮದಿಂದ ಶಕ್ತಿಸಂಕೋಚಾವಸ್ಥೆಯನ್ನೂ ಪ್ರಸರಣಕ್ರಮದಿಂದ ವಿಕಾಸವನ್ನು ಪಡೆಯುವಿಕೆಯೇ ಶಕ್ತಿಸಂಕೋಚ ವಿಕಾಸವೆಂದೆನಿಸಿಕೊಳ್ಳುತ್ತದೆ. ಈ ಎರಡು ಸ್ಥಿತಿಗಳ ಮಧ್ಯೆ ಮನಸ್ಸನ್ನು ನಿಲ್ಲಿಸುವುದು ಒಂದು ಕ್ರಮ. ವಾಯುಧಾರಣೆಯಿಂದ ನಿಲ್ಲಿಸುವುದು ಇನ್ನೊಂದುಕ್ರಮ. ಇಲ್ಲಿಗೆ ಶಕ್ತಿವಿಕಾಸವಾಯಿತು.

ಎಡಬಲಗಳ ಮೂಗಿನ ಸೊಳ್ಳೆಗಳಲ್ಲಿ ಸಂಚರಿಸುತ್ತಿರುವ ಪ್ರಾಣವಾಯುವಿನ ಗತಿಯನ್ನು ಹೃದಯದಲ್ಲಿ ನಿಲ್ಲಿಸುವುದರಿಂದ 'ಕ'ಕಾರ

'ಹ'ಕಾರಗಳಪಾಗಿರುವ ಅನಚ್ಕ ವರ್ಣೋಚ್ಚಾರದಿಂದ ವಾಹಗತಿಯನ್ನು ನಿಲ್ಲಿಸುವುದು **ವಾಹಚ್ಛೇದ.** ಒಳಗೆ ಹೃದಯದಲ್ಲಿ ಮನಸ್ಸನ್ನು ನಿಲ್ಲಿಸಿ ಅನಚ್ಕ ವರ್ಣಗಳ ಉಚ್ಚಾರಣಕ್ರಮದಿಂದ ಎಡಬಲ ನಾಡಿಗಳನ್ನು ನಿಲ್ಲಿಸಿ ಸಾಧನೆಮಾಡುವವನಿಗೆ ಅಜ್ಞಾನವೆಂಬ ಕಗ್ಗತ್ತಲೆಯು ನಾಶವಾಗಿ ಅವನು ಪಶ್ವವಸ್ಥೆಯಲ್ಲಿದ್ದರೂ ಪರಮೇಶ್ವರನ ತತ್ವವನ್ನು ಪಡೆಯುವಂತಹ ಜ್ಞಾನಪ್ರಕಾಶವನ್ನು ಪಡೆಯುತ್ತಾನೆ.

ಅನಚ್ಕಕಕೃತಾಯತಿಪ್ರಸೃತಪಾರ್ಶ್ವನಾಡೀದ್ವಯ
ಚ್ಛಿದೋ ವಿಧೃತಚೇತಸೋ ಹೃದಯಪಂಕಜಸ್ಯೋದರೆ।
ಉದೇತಿ ತವ ದಾರಿತಾಂಧತಮಸಃ ಸ ವಿದ್ಯಾಂಕುರೋ
ಯ ಏಷ ಪರಮೇಶತಾಂ ಜನಯಿತುಂ ಪಶೋರಪ್ಯಲಂ॥

ಆದ್ಯಂತಕೋಟಿ ನಿಭಾಲನ. ಆದಿಕೋಟಿ ಎಂದರೆ ಹೃದಯ. ಹೃದಯದಿಂದ ೭೨೦೦೦ ನಾಡಿಗಳು ಹೊರಟಿರುತ್ತವೆ. ಮುಖ್ಯವಾಗಿ ಬ್ರಹ್ಮರಂಧ್ರಕ್ಕೆ ಇದರಿಂದ ಒಂದು ಸೂಕ್ಷ್ಮವಾದ ನಾಡಿ ಹೊರಟಿದೆ. ಈ ನಾಡಿಯ ಬುಡವು ಹೃದಯದಲ್ಲಿಯೂ ಕೊನೆಯು ಬ್ರಹ್ಮರಂಧ್ರವಾದ ದ್ವಾದಶಾಂತದಲ್ಲಿಯೂ ಇದೆ. ಮನಸ್ಸನ್ನು ನಿಲ್ಲಿಸುವುದು ಎರಡು ಬಗೆಯಾಗಿದೆ. ಈ ಸೂಕ್ಷ್ಮನಾಡಿಯ ಮೂಲಸ್ಥಾನವಾದ ಹೃದಯದಲ್ಲಾದರೂ ನಿಲ್ಲಿಸಬಹುದು. ಅಗ್ರಸ್ಥಾನವಾದ ತಲೆಯಲ್ಲಿರುವ ದ್ವಾದಶಾಂತದಲ್ಲಿಯಾದರೂ ನಿಲ್ಲಿಸಬಹುದು. ಈ ವಿಧವಾದ ಭಾವನಾಭ್ಯಾಸಕ್ಕೆ ಸಾಧಕನು ವಿಶದವಾಗಿ ಅದರ ಭೇದಗಳನ್ನು ತಿಳಿದಿರಬೇಕು. ಜಾಗ್ರದವಸ್ಥೆಯಲ್ಲಿ ಹೊರಗಿನ ವ್ಯವಹಾರಗಳಲ್ಲಿ ತೊಡಗಿದ್ದರೆ ಆಗ ಹೃದಯದಲ್ಲಿ ನಿಲ್ಲಿಸುವುದು ಕಷ್ಟತರವಾದದ್ದು. ಸಮಾ

ಹಿತವಾದ ಮನಸ್ಸುಳ್ಳವನಾಗಿ ಒಂದುಕಡೆ ಉಪದ್ರವವಿಲ್ಲದೆ ಇರುವ ಸ್ಥಳದಲ್ಲಿ ಕುಳಿತು ಧಾರಣಾಭ್ಯಾಸಗಳನ್ನುಮಾಡಿ ಹೃದಯದಲ್ಲಿ ನಿಲ್ಲಿಸ ಬಹುದು. ಬಾಹ್ಯೇಂದ್ರಿಯಗಳು ನಡೆಯುತ್ತಿರುವಾಗಲೂ ಅವುಗಳ ವ್ಯಾಪಾರವನ್ನು ನಿಲ್ಲಿಸಿರುವಾಗಲೂ ಇವನ ಅನುಸಂಧಾನವು ಒಂದೇ ಮುಖವಾಗಿ ನಡೆಯಬೇಕು. ಒಂದೇ ಮುಖವಾಗಿ ನಡೆಯಬೇಕಾ ಗಿರುವುದರಿಂದ ಈ ಎರಡು ಕ್ರಮಗಳನ್ನು ಸೂಚಿಸಿರುತ್ತಾರೆ. ಸಾಧ ಕನು ತನ್ನ ಶಕ್ತಿಯನ್ನನುಸರಿಸಿ ತನ್ನ ಪರಿಪಾಕಕ್ಕನುಸಾರವಾಗಿ ಈ ಅಭ್ಯಾಸವನ್ನು ಮಾಡಬೇಕು. ಮಾಡುವ ಧಾರಣಾಭ್ಯಾಸವು ಸಾಧಕ ನಿಗೆ ಪ್ರಾರಂಭದಶೆಯಲ್ಲಿ ಬೇಗನೆ ಮಾರ್ಪಾಡನ್ನು ತೋರಿಸುತ್ತದೆ. ಹೃದಯದಲ್ಲಿ ನಿಲ್ಲಿಸುವ ಕ್ರಮವು ಕಾರ್ಯಕ್ರಮದಲ್ಲಿ ಪರಿಪಾಕವಾಗಿ ಸಮಾಧಿ ಅನುಭವವನ್ನುಂಟುಮಾಡುತ್ತದೆ.

ಹಾಗೆಯೇ ಪ್ರತಿ ಕ್ಷಣದಲ್ಲಿಯೂ ಮನಸ್ಸು ಯಾವ ರೀತಿ ಚಲಿಸು ತ್ತಿದ್ದರೂ ಅದನ್ನು ಉಪಸಂಹರಿಸಿ ತಲೆಯಲ್ಲಿರುವ ದ್ವಾದಶಾಂತದಲ್ಲಿ ನಿಲ್ಲಿಸಿ ಸಾಧಕನು ಅಭ್ಯಾಸಮಾಡುವುದರಿಂದ ಕೆಲವು ದಿವಸಗಳಲ್ಲಿಯೇ ಮನೋವೃತ್ತಿಗಳು ನಶಿಸಿದ ವ್ಯತ್ಯಾಸವು ತಿಳಿಯುತ್ತದೆಂದು ವಿಜ್ಞಾನ ಭೈರವದಲ್ಲಿ ಹೇಳಿದೆ. ಇದು ಅಂತಕೋಟಿ ವಿಷಯ.

ಸಾಧಕನು ಇದಲ್ಲದೆ ಚಿತ್ತಿನ ಉನ್ಮೇಷವನ್ನು ಆಯಾ ಸಮಯ ಗಳಲ್ಲಿ ಪರಿಶೀಲಿಸಿ ಅನುಸಂಧಾನಮಾಡುತ್ತಾನೆ. ಲೌಕಿಕ ವ್ಯವಹಾರ ಗಳಲ್ಲಿಯೂ ಕೂಡ ಊಟ ಪಾನ ಉಲ್ಲಾಸ ಮುಂತಾದವುಗಳ ಭರ ದಿಂದ ಉಂಟಾಗುವ ತೃಪ್ತಿಯನ್ನು ಚಿತ್ತಿನ ಉನ್ಮೇಷವೆಂದು ತಿಳಿದು ಮಹಾನಂದಮಯನಾಗುತ್ತಾನೆ. ಸಂಗೀತವೇ ಮೊದಲಾದ ವಿಷಯ ಗಳಿಂದುಂಟಾಗುವ ಆನಂದಕ್ಕೆ ಸಮಾನವಾದ ಆನಂದವನ್ನು ಮನೋ

ರೂಢಿಯಂತೆ ಯೋಗಿಗಳು ತನ್ಮಯರಾಗಿ ಅನುಭವಿಸುತ್ತಾರೆ. ವಿಷಯ ವಿದ್ದರೆ ಹೇಗೋ ವಿಷಯವಿಲ್ಲದಿದ್ದರೂ ಹಾಗೇ ಆರೋಪಣೆ ಮಾಡಿ ಕೊಂಡು ಅನುಭವಿಸುತ್ತಾರೆ. ಯಾವಾಗ ಮತ್ತು ಯಾವುದರಿಂದ ಮನಸ್ಸಿಗೆ ಪೂರ್ಣ ತೃಪ್ತಿಯುಂಟಾಗುತ್ತದೆಯೋ ಅದೇ ಸ್ಥಿತಿ ಯನ್ನು ಭಾವನಾಬಲದಿಂದ ಮುಂದುವರಿಸಿದರೆ ವಿಕಲ್ಪವೃತ್ತಿ ಗಳು ಕ್ಷೀಣವಾಗಿ ಪರಾನಂದ ಸ್ವರೂಪವು ಪ್ರಕಾಶಿಸುತ್ತದೆ. ಹೀಗೆ ಆನಂದಪೂರ್ಣವಾದ ತನ್ನ ಸ್ವರೂಪದ ಅನುಭವವೇ ಮೊದ ಲಾದವುಗಳನ್ನು ಊಹಿಸಿಕೊಳ್ಳಬೇಕು. ಇವೇ ಮೊದಲಾದವುಗಳು ಮಧ್ಯವಿಕಾಸಕ್ಕೆ ಉಪಾಯಗಳು.

ಮಧ್ಯವಿಕಾಸದಿಂದ ಚಿದಾನಂದ ಲಾಭವೆಂದು ಹೇಳಿದ್ದಾಯಿತು. ಇದನ್ನೇ ಪರಮಯೋಗಿಗಳಿಗುಂಟಾಗುವ ಸಮಾವೇಶ, ಸಮಾಪತ್ತಿ, ಸಮಾಧಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಅದು ಸದಾ ಬೆಳಗುತ್ತಲಿರುತ್ತದೆ. ಸಾಧನಾಭ್ಯಾಸಗಳಿಂದ ಪೂರ್ಣವಾಗಿ ಪ್ರಕಾಶಿ ಸದೆ ಇರುವಂತಹ ಸ್ಥಿತಿಯನ್ನು ಪ್ರತಿಬಂಧಕಗಳನ್ನು ದೂರಮಾಡುವ ಮೂಲಕ ಮರಳಿ ಹೊಂದಬೇಕು. ಸಮಾಧಿ ಸಂಸ್ಕಾರವುಳ್ಳವನಿಗೆ ವ್ಯವಹಾರದ ಜಾಗ್ರದವಸ್ಥೆಯಲ್ಲಿಯೂ ಬಾರಿ ಬಾರಿಗೂ ಚಿದೈಕ್ಯಾವಸ್ಥೆ ಯನ್ನು ಪರಾಮರ್ಶಿಸುವುದರಿಂದ ಯಾವಾಗಲೂ ಬೆಳಗುತ್ತಲಿರುವ ಸಮಾಧಿ ರಸಾನುಭವವೇ ಇರುತ್ತದೆ.

ಸಮಾಧಿಸಂಸ್ಕಾರವತಿ ವ್ಯುತ್ಥಾನೆ ಭೂಯೋಭೂಯಃ
ಚಿದೈಕ್ಯಾಮರ್ಶಾ ನ್ನಿತ್ಯೋದಿತ ಸಮಾಧಿಲಾಭಃ ॥ ೧೯ ॥

ಸಮಾವೇಶವನ್ನು ಪಡೆದಿರುವ ಯೋಗೀಶ್ವರನು ಜಾಗ್ರತ್ ವ್ಯವ

ಹಾರದಲ್ಲಿಯೂ ಸಮಾಧಿಯಲ್ಲುಂಟಾದ ಆನಂದಾನುಭವ ಸಂಸ್ಕಾರ ದಿಂದ ತನ್ಮಯನಾಗಿ ಆನಂದದಿಂದ ವಿಹರಿಸುತ್ತಲಿರುವನು.

ಶರದೃತುವಿನಲ್ಲಿ ಆಕಾಶದಲ್ಲಿ ಮೇಘಗಳು ಹುಟ್ಟಿ ಕರಗಿಹೋಗು ವಂತೆ ಈತನು ಬಾಹ್ಯ ಪದಾರ್ಥಗಳೆಲ್ಲಾ ಚಿತ್ತಿನಲ್ಲಿಯೇ ಹುಟ್ಟಿ ಚಿತ್ತಿ ನಲ್ಲಿಯೇ ಲಯವಾಗುವುದನ್ನು ತಿಳಿಯುತ್ತಾನೆ. ಬಾರಿ ಬಾರಿಗೂ ಅಂತರ್ಮುಖನಾಗುತ್ತಾ ಸಮಾಧಿ ಸ್ಥಿತಿಯಲ್ಲಿ ತಾನು ಅನುಭವಿಸಿದ ಚಿದೈಕ್ಯರಸವನ್ನೇ ಅನುಶೀಲನಮಾಡುತ್ತಾನೆ. ಇಂತಹವನು ಸಮಾಧ್ಯ ವಸ್ಥೆಯಲ್ಲಿಯೂ ಜಾಗ್ರತ್ ವ್ಯವಹಾರಾವಸ್ಥೆಯಲ್ಲಿಯೂ ಸಮಾನವಾದ ಭಾವನೆಯುಳ್ಳವನಾಗಿರುತ್ತಾನೆ.

ಸಾಧಕನು ತನ್ನ ಅಭ್ಯಾಸದಿಂದ ಈ ಸಂಸಾರಾವಸ್ಥೆಯಲ್ಲಿಯೇ ಶುದ್ಧ ಚಿದನುಭವರೂಪವಾದ ಸಮಾಧಿ ಸ್ಥಿತಿಯನ್ನು ಪಡೆಯುತ್ತಾನೆ. ಸಮಾಧಿ ಸ್ಥಿತಿಯನ್ನು ಪಡೆದ ಮಾತ್ರಕ್ಕೆ ಅವನ ಹಿಂದಿನ ಕರ್ಮ ಪರಿ ಪಾಕದಿಂದ ಬಂದಿರುವ ಶರೀರ ಮತ್ತು ಇಂದ್ರಿಯಗಳು ಹೋಗುವುದಿಲ್ಲ. ಶರೀರ ಸಂಬಂಧವಿರುವವರೆಗೂ ಅವನು ಸಾಮಾನ್ಯ ಮನುಷ್ಯನಂತೆಯೇ ಹೊರಗಿನ ವ್ಯಾಪಾರಗಳನ್ನು ನಿರ್ವಹಿಸಬೇಕು. ಆಹಾರ ವಿಹಾರ ಗಳೂ ಜಾಗ್ರತ್‌ಸ್ವಪ್ನ ಸುಷುಪ್ತಿಗಳೂ ಈ ಶರೀರವಿರುವವರೆಗೂ ಇರು ತ್ತವೆ. ಹೀಗಿದ್ದರೂ ಸಮಾಧಿ ಸ್ಥಿತಿಯನ್ನು ಹೊಂದಿರುವವನು ಹೊರ ಗಿನ ವ್ಯಾಪಾರಗಳಲ್ಲಿರುವಾಗಲೂ ಬಾರಿ ಬಾರಿಗೂ ತಾನು ಸಮಾಧಿ ಸ್ಥಿತಿಯಲ್ಲಿ ಅನುಭವಿಸಿದಾನಂದವನ್ನು ಅಂದರೆ ಚಿದನುಭವವನ್ನು ಪರಾಮರ್ಶಿಸುತ್ತಿರುತ್ತಾನೆ. ನದಿಗಳು ಸಮುದ್ರವನ್ನು ಸೇರಿ ಲೀನ ವಾಗುವಂತೆ ಹೊರಗಿನ ವ್ಯಾಪಾರಗಳು ಚಿತ್ತಿನಲ್ಲಿ ಸೇರಿ ಲೀನವಾಗು ತ್ತಿರುತ್ತವೆ. ಆ ಸಮುದ್ರದ ನೀರು ಆವಿಯಾಗಿ ಮೋಡವಾಗಿ ಮಳೆ

ಯಾಗಿ ನದಿಯಾಗುವಂತೆ ಅದೇ ಚಿತ್ತಿನಿಂದಲೇ ಹೊರಹೊಮ್ಮಿ ಬಾಹ್ಯ ವ್ಯಾಪಾರಗಳಾಗಿ ಪರಿಣಮಿಸುತ್ತದೆ ಎಂಬುದನ್ನು ವಿಶದವಾಗಿ ಸಾಕ್ಷಾತ್ಕರಿಸುತ್ತಾನೆ. ಇದನ್ನೇ ಸೃಷ್ಟಿ ಸ್ಥಿತಿ ಸಂಹಾರರೂಪವಾದ ಚಮತ್ಕಾರಗಳನ್ನು ಒಳಗೊಂಡಿರುವ ಕ್ರಮಮುದ್ರಾ ಎನ್ನುತ್ತಾರೆ.

ಹೊರಗಿನ ಪದಾರ್ಥಗಳೆಲ್ಲಾ 'ಇದಂ'. ಒಳಗಿನ ನಾನು ಎಂಬುವುದು 'ಅಹಂ'. ಸಮಾಧಿಯನ್ನು ಪಡೆದಿರುವವನು 'ಇದಂ' ರೂಪವಾದ ವಿಶ್ವವನ್ನೆಲ್ಲಾ ನುಂಗುವ ಕ್ರಮದಿಂದ ಚಿಚ್ಛಕ್ತಿಯಾದ 'ಅಹಂ' ಪದಾರ್ಥದಲ್ಲಿ ಸೇರುವಿಕೆಯನ್ನು ಗಮನಿಸುತ್ತಾನೆ. ಹಾಗೆಯೇ 'ಅಹಂ' ವಸ್ತುವಿನಿಂದ ಹೊರಹೊಮ್ಮಿ 'ಇದಂ' ರೂಪವಾಗಿ ಪದಾರ್ಥಸ್ವರೂಪಗಳನ್ನು ಪರಿಶೀಲಿಸುತ್ತಾನೆ. ಈ ಬಗೆಯ ಪರಿಶೀಲನೆಯಿಂದ ಹೊರಗಿನ 'ಇದಂ' ಒಳಗಿನ 'ಅಹಂ' ಇವೆರಡೂ ಚಿದ್ಘನವಾಗಿಯೇ ಇರುವುದೆಂದು ಅನುಭವಪೂರ್ವಕವಾಗಿ ತನ್ಮಯವಾಗಿರುವಾಗ ಪರಮಾನಂದ ಉಂಟಾಗುತ್ತದೆ. ಈ ಆನಂದಾನುಭವವು ಪಾಶಗಳನ್ನು ಒಡಿಸುತ್ತದೆ. ಚಿದನುಭವದಲ್ಲಿ ಸ್ಥೈರ್ಯವನ್ನುಂಟು ಮಾಡುತ್ತದೆ. ಇಂತಹ ವಿಲಕ್ಷಣವಾದ ಕ್ರಮವುಳ್ಳ ಉಪಾಯಕ್ಕೆ ಕ್ರಮಮುದ್ರೆಯೆಂದು ಹೆಸರು. ತುರ್ಯಾಶಕ್ತಿಯನ್ನೊಳಗೊಂಡಿರುವ ಚಿತ್ತು ಕ್ರಮಮುದ್ರಾಕ್ರಮದಿಂದ ವಿಶ್ವವನ್ನು ಸಾತ್ಮೀಕರಣ ಮಾಡಿಕೊಳ್ಳುತ್ತದೆ.

ಸಾಧಕನು ಈ ಕ್ರಮಮುದ್ರೆಯಿಂದ ಒಳಗಿರುವ ಪೂರ್ಣಾಹಂತಾ ಸ್ವರೂಪವನ್ನೂ ಹೊರಗಿನ ವಿಷಯಗಳನ್ನೂ ಪರಿಶೀಲನೆ ಮಾಡಿ ಪರಾಶಕ್ತಿಯ ಪ್ರಸಾರವನ್ನು ಸಾಕ್ಷಾತ್ಕರಿಸಿ ಪರಮಯೋಗಿ

ಯಾಗುವನು. ಹೊರಗಿನ ವಿಷಯಜ್ಞಾನ ಸಮೂಹವು ಒಳಗಿನ ಚಿತ್ತಿನೊಳಕ್ಕೆ ನುಂಗಿದಂತೆ ಹೋಗಿ ಲೀನವಾಗುತ್ತವೆ. ಸಮಾವೇಶ ಪಡೆದಿರುವವನು ಒಳಗಿನ ಚಿಚ್ಛಕ್ತಿ ಸ್ವರೂಪವನ್ನು ಸಾಕ್ಷಾತ್ಕರಿಸುತ್ತಾನೆ. ಅವನು 'ಇದಂ' ರೂಪವಾದ ವಿಷಯ ಸಮೂಹವನ್ನು ಪಮನಯುಕ್ತಿಯಿಂದ ತಿಳಿಯುತ್ತಾನೆ. ಒಳಗೂ ಹೊರಗೂ ಚಿದ್ವಿಲಾಸವೇ ನಿತ್ಯೋದಿತವಾಗಿ ತೋರುವುದರಿಂದ ಅವನಿಗೆ ಪರಮಾನಂದಾನುಭವವುಂಟಾಗುತ್ತದೆ. ಪಾಶಗಳನ್ನು ಹೋಗಲಾಡಿಸಿ ತುರೀಯಾವಸ್ಥೆಯಲ್ಲಿ ನಿಲ್ಲಿಸುವುದರಿಂದ ಮುದ್ರಾ ಎನ್ನಿಸಿಕೊಳ್ಳುವುದು. ಸೃಷ್ಟ್ಯಾದಿ ಕ್ರಮಗಳನ್ನು ಪ್ರಕಾಶಪಡಿಸುತ್ತಾ ಒಂದು ಕ್ರಮವನ್ನನುಸರಿಸಿರುವುದರಿಂದ ಕ್ರಮ ಮುದ್ರೆಯೆಂದು ಹೇಳಲ್ಪಟ್ಟದೆ.

ಈ ಕೆಳಗಿನ ಸೂತ್ರವು ಸಮಾಧಿ ಲಾಭವನ್ನು ಸೂಚಿಸುವುದು.

**ತದಾ ಪ್ರಕಾಶಾನಂದಸಾರಮಹಾಮಂತ್ರವೀರ್ಯಾತ್ಮಕ ಪೂರ್ಣಾಹಂತಾವೇಶಾತ್ಸದಾ ಸರ್ವಸರ್ಗಸಂಹಾರಕಾರಿನಿಜಸಂವಿದ್ದೇವತಾಚಕ್ರೇಶ್ವರತಾ ಪ್ರಾಪ್ತಿರ್ಭವತೀತಿ ಶಿವಂ ॥ ೨೦ ॥**

ಸಮಾಧಿ ಲಾಭವಾದಾಗ ಪ್ರಕಾಶ ಮತ್ತು ಆನಂದ ಇವೇ ಮುಖ್ಯವಾಗುಳ್ಳ ಮಹಾಮಂತ್ರವೀರ್ಯಾತ್ಮಕವಾದ ಪೂರ್ಣಾಹಂತಾನುಭವವಾಗುತ್ತದೆ. ಇದರಿಂದ ಎಲ್ಲಾ ಸೃಷ್ಟಿ ಸಂಹಾರಗಳನ್ನೂ ಮಾಡುವ ತನ್ನ ಸಂವಿದ್ದೇವತಾಚಕ್ರದ ಐಶ್ವರ್ಯ ಪ್ರಾಪ್ತಿಯಾಗುತ್ತದೆ.

ನಿತ್ಯ ಪ್ರಕಾಶವಾದ ಸಮಾಧಿಯು ಲಭಿಸಲಾಗಿ ಚಿದಾನಂದ ರೂಪವಾದ ಎಲ್ಲಾ ಮಂತ್ರಗಳ ಜೀವಿತರೂಪವಾಗಿರುವ ಪರಿಪೂರ್ಣವಾದ ಪರಾಸಂವಿತ್‌ಶಕ್ತಿಯು ಸಾಕ್ಷಾತ್ಕರಿಸಲ್ಪಡುತ್ತದೆ. ಅಕೃತ್ರಿಮ

ವಾದ ತನ್ನ ಚಮತ್ಕಾರದ ಆವೇಶದಿಂದ ಕಾಲಾಗ್ನಿ (ಯಾವನ ಪ್ರಕೋಪದಿಂದ ವಿಶ್ವವು ಉಪಸಂಹರಿಸಲ್ಪಡುತ್ತದೆಯೋ ಆ ಭುವನೇಶನೆಂಬ ರುದ್ರನ ಹೆಸರು) ಮೊದಲ್ಗೊಂಡು ಕೊನೆ ತತ್ವದವರೆಗೂ ಇರುವ ಈ ವಿಶ್ವದ ವಿಚಿತ್ರವಾದ ಸೃಷ್ಟಿ ಪ್ರಳಯಗಳು ತನ್ನ ಸಂವಿತ್‌ಶಕ್ತಿಯ ಸಮೂಹದಿಂದ ಆಗುತ್ತದೆಂದು ಆ ಪರಮಯೋಗಿಗೆ ಅನುಭವಕ್ಕೆ ಬರುತ್ತದೆ. ಇದೆಲ್ಲಾ ಶಿವಸ್ವರೂಪವೆಂದು ಸಿದ್ಧಾಂತ. ಇಲ್ಲಿ ಸೋಪಾನಾರೋಹಣಕ್ರಮದಿಂದ ನಿರೂಪಿಸಲ್ಪಟ್ಟರುತ್ತದೆ.

ಹೊರಗಿನ ವ್ಯವಹಾರದಲ್ಲಿ ಪದಾರ್ಥ ಮತ್ತು ಪದಾರ್ಥಜ್ಞಾನ ಎರಡೂ ತೋರುತ್ತವೆ. ಆ ಎರಡರಲ್ಲಿ ತಿಳಿಯಲ್ಪಡುವ ಜ್ಞಾನವೇ ಚಿತ್ಸ್ವರೂಪ. ಅದರಲ್ಲಿ ಅಂತರ್ಮುಖ ವಿಮರ್ಶಮಯರಾದ ಪ್ರಮಾತೃಗಳು ಮುಖ್ಯ. ಅವರಲ್ಲಿ ಶರೀರಾದಿ ಸಂಕುಚಿತಾಭಿಮಾನಗಳನ್ನು ತೊರೆದಿರುವ ವಿಶ್ವಶರೀರಿಗಳಾಗಿರುವ ಸದಾಶಿವ ಐಶ್ವರ್ಯವೇ ಮುಖ್ಯ. ಅದರಲ್ಲಿಯೂ ಪ್ರಕಾಶೈಕರೂಪದಿಂದ ಅನಂತವಾದ ಚಮತ್ಕಾರಮಯನಾಗಿರುವ ಮಹೇಶ್ವರನೇ ಪರಮಾರ್ಥ. ಈ ಪಾರಮಾರ್ಥಿಕ ಪ್ರಕಾಶಾವೇಶವಿಲ್ಲದೆ ಯಾವುದೂ ಬೆಳಗುವುದಿಲ್ಲ. ಆ ಪರಮೇಶ್ವರನೇ ತನ್ನ ಸ್ವಾತಂತ್ರ್ಯ ಶಕ್ತಿಯಿಂದ ಅಕಾರಾದಿ ಕ್ಷಕಾರಾಂತವಾಗಿರುವ ಮಾಯಾಪದದಲ್ಲಿರುವ ಶಬ್ದರಾಶಿಯನ್ನು ಪರಾಮರ್ಶ ಮಾಡುತ್ತಾನೆ. ಇದನ್ನು ಸ್ವೀಕರಿಸಿದರೂ ವಾಚ್ಯ ವಾಚಕರೂಪವಾದ ಜಗತ್ತನ್ನು ಸೃಷ್ಟಿಸುವುದರಿಂದ ತಾನು ಪರಿಪೂರ್ಣನಾಗಿದ್ದು ನಿಷ್ಕಾಮವಾಗಿ ಆನಂದಮಯನಾಗಿರುತ್ತಾನೆ. ಪಾರಿಭಾಷಿಕವಾಗಿ 'ಅ' ಅಂದರೆ 'ಅನುತ್ತರಾಕುಲ ಸ್ವರೂಪ' – ಸರ್ವಾತಿಶಾಯಿಯಾಗಿ ಸ್ವಸಂವೇದ್ಯವಾಗಿ ಸ್ವಯಂಪ್ರಕಾಶವಾಗಿರುವ ಚಿತ್. 'ಹ' ಅಂದರೆ ಶಕ್ತಿ ಪ್ರಸರ

ರೂಪವಾದ ಪ್ರಸರಿಸುವ ವಿಶ್ವ. ಹಕಾರಕ್ಕೆ ಸಂಪ್ರದಾಯದಲ್ಲಿ ವ್ಯೋಮ ಕಲಾ ಎಂದು ಹೆಸರು. ಇದು ಸರ್ವವ್ಯಾಪಿತ್ವವನ್ನು ಸೂಚಿಸುತ್ತದೆ. 'ಕ್ಷ' ಅಂದರೆ ಪ್ರಸರವನ್ನು ಉಪಸಂಹರಿಸುವಂತಹ ಅಕಾರ ಹಕಾರಗಳ ಸಂಪುಟರೂಪ. ಪ್ರತ್ಯಾಹಾರನ್ಯಾಯದಂತೆ ಕ್ಷಕಾರದಲ್ಲಿ ಅಕಾರ ಹಕಾರಗಳೆರಡೂ ಸೇರಿವೆ. ಇದು ಅಭಿನ್ನವಾಗಿ ಅನುಭವಕ್ಕೆ ಬರುತ್ತಾ ಒಂದುರೂಪವಾಗಿ ಸ್ಫುರಿಸುತ್ತಾ ಅನುತ್ತರವಾದ ಅಕಾರದಲ್ಲಿಯೇ ಲೀನವಾಗುತ್ತದೆ. ಈ ಶಬ್ದರಾಶಿಯ ವಿಮರ್ಶೆಯು ಸತ್ಯವಾದುದು. ಪ್ರಕಾಶವು ಆತ್ಮನಲ್ಲಿ ವಿಶ್ರಾಂತಿಯನ್ನು ಪಡೆದರೆ ಅದು ಅಹಂಭಾವ ಎಂದು ಹೇಳಲ್ಪಡುತ್ತದೆ. ಇದೇ ಸ್ವತಂತ್ರವಾಗಿ ಇತರ ಅಪೇಕ್ಷೆಯಿಲ್ಲದೆ ತನ್ನಲ್ಲಿ ನಿಲ್ಲುವ ಸ್ಥಿತಿಯೇ ಮುಖ್ಯವಾದ ಈಶ್ವರ ಕರ್ತೃತ್ವ ಮತ್ತು ಸ್ವಾತಂತ್ರ್ಯ ಶಕ್ತಿಗಳ ವಿಲಾಸ.

ಪ್ರಕಾಶಸ್ಯಾತ್ಮವಿಶ್ರಾಂತಿರಹಂಭಾವೋ ಹಿ ಕೀರ್ತಿತಃ ।
ಉಕ್ತಾ ಚ ಸೈವ ವಿಶ್ರಾಂತಿಃ ಸರ್ವಾಪೇಕ್ಷಾನಿರೋಧತಃ ॥
ಸ್ವಾತಂತ್ರ್ಯಮಥಕರ್ತೃತ್ವಂ ಮುಖ್ಯಮೀಶ್ವರತಾಪಿಚ ।

ಈ 'ಅಹಂತಾ' ಎಲ್ಲಾ ಮಂತ್ರಗಳ ಉದಯ ಮತ್ತು ವಿಶ್ರಾಂತಿಗಳಿಗೆ ಆಕರವಾಗಿದೆ. ಇದರ ಬಲದಿಂದಲೇ ಎಲ್ಲಾ ಕೆಲಸಗಳೂ ನಿರ್ವಹಿಸಲ್ಪಡುತ್ತಿರುವುದರಿಂದ ಮಹಾವೀರ್ಯ ಭೂಮಿಯಾಗಿರುತ್ತದೆ. ಈ ವಿಷಯವು 'ಶಿವದೃಷ್ಟಿ'ಯಲ್ಲಿಯೂ 'ಶಿವಸೂತ್ರ'ಗಳಲ್ಲಿಯೂ ವಿವರಿಸಲ್ಪಟ್ಟಿದೆ.

'ತದಾಕ್ರಮ್ಯಬಲಂ ಮಂತ್ರಾ....'
'ಮಹಾಹ್ರದಾನುಸಂಧಾನಾನ್ಮಂತ್ರ ವೀರ್ಯಾನುಭವಃ'

— ಶಿವಸೂತ್ರ

ಆ ಮಹಾಮಂತ್ರ ವೀರ್ಯಾತ್ಮಕವಾಗಿರುವ ಪೂರ್ಣಾಹಂತಾಸ್ಥಿತಿಯಲ್ಲಿ ದೇಹ ಪ್ರಾಣಾದಿ ವಿಷಯಜ್ಞಾನಗಳು ಲೀನವಾಗಿರುವುದರಿಂದ ಆ ಸ್ಥಿತಿಯಲ್ಲಿ ದೇಹಾದಿಗಳಿಗೂ ನೀಲಾದಿ ವಿಷಯಗಳಿಗೂ ಬೇರೆ ಗೋಚರಿಸುವಿಕೆಯಿಲ್ಲದೆ ಎಲ್ಲಾ ಚಿನ್ಮಯವಾಗಿಹೋಗುತ್ತದೆ. ಇಷ್ಟು ವಿವರಿಸಿದ್ದರಿಂದ ದೇಹ ಸುಖ ನೀಲ ಮೊದಲಾದವುಗಳು ಎಷ್ಟು ತೋರುತ್ತವೆಯೋ ಎಷ್ಟುಮಾತ್ರ ತಿಳಿಯಲ್ಪಡುತ್ತವೆಯೋ ಯಾವ ರೀತಿಯಲ್ಲಿ ನೆನೆಯಲ್ಪಡುತ್ತವೆಯೋ ಅಲ್ಲೆಲ್ಲಾ ಆ ಮಹಾಮಹಿಮಳಾದ ಚಿಚ್ಛಕ್ತಿಯು ಆಧಾರವಾಗಿದ್ದಾಳೆಂದು ಸ್ಫುರಿಸುತ್ತದೆ. ಆ ಚಿಚ್ಛಕ್ತಿಯ ಸ್ಫುರಣವಿಲ್ಲದೆ ಯಾವ ವಿಷಯವೂ ತೋರುವುದಿಲ್ಲ. ಎಲ್ಲಾ ರೀತಿಯಾಗಿ ತಾನೇ ಸ್ಫುರಿಸುತ್ತಿದ್ದರೂ ತನ್ನ ಮಾಯಾಶಕ್ತಿಯಿಂದ ದೇಹ ನೀಲಾದಿಕ್ರಮಗಳಿಂದ ರಂಜಿಸುತ್ತಾ ಅಭಿಮಾನದಿಂದ ಬೇರೆ ಬೇರೆಯಾಗಿದ್ದ ಹಾಗೆ ಪ್ರಕಾಶಿಸುತ್ತದೆ. ಮಾಯಾಪ್ರಮಾತೃಗಳಿಂದ ಜ್ಞಾನ ಸಂಕಲ್ಪ ಅಧ್ಯವಸಾಯಾದಿರೂಪಗಳಿಂದ ತಿಳಿಯಲ್ಪಡುತ್ತದೆ. ತಾತ್ವಿಕವಾಗಿ ಆ ಚಿಚ್ಛಕ್ತಿಯು ಒಂದೇ ಆಗಿದ್ದರೂ ಆಯಾ ಪದಾರ್ಥಕ್ರಮ ರೂಪಗಳಿಂದ ಪ್ರಕಾಶಿಸುತ್ತದೆ. ಅಕ್ರಮವಾಗಿ ಅನಂತವಾದ ಚಿದ್ರೂಪವಾಗಿರುತ್ತದೆ. ಆ ಮಹೇಶ್ವರನ ಮಾಯಾಶಕ್ತಿಯಿಂದ ಜ್ಞಾನ ಸಂಕಲ್ಪ ಅಧ್ಯವಸಾಯಾದಿ ಪದಗಳಿಂದ ಭೇದ ವ್ಯವಹಾರಗಳುಂಟಾಗುತ್ತವೆ. ಅವು ಆ ಪರಮೇಶ್ವರನ ಮಾಯಾಶಕ್ತಿರೂಪಗಳಾಗಿವೆ.

**ಮಾಯಾಶಕ್ತ್ಯಾ ವಿಭೋಃ ಸೈವ ಭಿನ್ನಸಂವೇದ್ಯಗೋಚರಾ ।**
**ಕಥಿತಾಜ್ಞಾನಸಂಕಲ್ಪಾಧ್ಯವಸಾಯಾದಿನಾಮಭಿಃ ॥**

ಅಭಿನ್ನವಾದ ಶಕ್ತಿಯು ಭಿನ್ನವಾಗಬೇಕಾಗಿದ್ದರೆ ಅಖಂಡಜ್ಞಾನ

'ಅದೋ' 'ಇದೋ' ಎನ್ನುವ ಭಿನ್ನದ್ಯೋತಕವಾದ ಸಂಕಲ್ಪ, ಭೇದ ನಿಶ್ಚಯವಾದ ಅಧ್ಯವಸಾಯ ಇವು ಮೂರೂ ಬೇಕು.

**ಯಾ ಚೈಷಾ ಪ್ರತಿಭಾ ತತ್ತತ್ಪದಾರ್ಥಕ್ರಮರೂಷಿತಾ ।**
**ಅಕ್ರಮಾನಂತಚಿದ್ರೂಪಃ ಪ್ರಮಾತಾ ಸ ಮಹೇಶ್ವರಃ ॥**

ಈ ರೀತಿಯಾಗಿ ಚಿಚ್ಛಕ್ತಿಯೊಂದೇ ಎಲ್ಲಾ ದಶೆಗಳಲ್ಲಿಯೂ ವಿಜೃಂಭಿಸುತ್ತಾ ಎಲ್ಲಾ ವಿಷಯಗಳಲ್ಲಿಯೂ ಅನುಪ್ರವೇಶಮಾಡುತ್ತಾ ಎಲ್ಲವನ್ನೂ ತನ್ನಲ್ಲಿಯೇ ಲೀನಮಾಡಿಕೊಳ್ಳುತ್ತಿರುತ್ತದೆ. ಯಾವ ಪ್ರತಿಭಾಶಕ್ತಿಯು ಆಯಾ ಪದಾರ್ಥಕ್ರಮ ಸ್ವಭಾವಗಳಿಂದ ಪ್ರಕಾಶಿಸುತ್ತಿದೆಯೋ ಆ ಶಕ್ತಿಯೇ ಕಾಲ ದೇಶ ಆಕಾರಗಳಿಲ್ಲದ ಅಕ್ರಮವಾದ ಸ್ಥಿತಿಯಲ್ಲಿ ಅನಂತ ಚಿದ್ರೂಪಿಯಾದ ಪರಪ್ರಮಾತೃವಾದ ಪರಮೇಶ್ವರನಾಗಿ ವಿರಾಜಿಸುತ್ತದೆ. ಹಿಂದೆ ವಿವರಿಸಿದಂತೆ ಇಂದ್ರಿಯಗಳ ಮೂಲಕ ಪ್ರಸರ ಇಂದ್ರಿಯಗಳಿಂದುಂಟಾಗುವ ಜ್ಞಾನವನ್ನು ಉಪಸಂಹಾರ ಮಾಡುವ ಕ್ರಮದಿಂದ ಪ್ರಕಾಶಿಸುತ್ತಿರುತ್ತದೆ. ಈ ಪ್ರಪಂಚದಲ್ಲಿರುವ ಎಲ್ಲಾ ಪದಾರ್ಥಗಳೂ ಒಂದೇ ಶಕ್ತಿಯಿಂದ ಬೆಳಗಿರುವುದರಿಂದ ಮೂಲ ತತ್ವವು ಒಂದೇ ರೀತಿಯಾಗಿರುತ್ತದೆ. ಎಲ್ಲಾ ವಿಷಯಗಳೂ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಅನುಭವಿಸುತ್ತಿರುತ್ತವೆ. ಯೋಗಿಯು ತನ್ನ ಅಂತಃಕರಣ ಬಹಿಷ್ಕರಣಗಳನ್ನು ಈ ಚಿಚ್ಛಕ್ತಿಯ ಕಿರಣ ಸಮೂಹವೆಂದು ತಿಳಿಯುತ್ತಾನೆ. ಆಗ ಅವನು ಸಹಜಸಂವಿತ್ತಿ ದೇವತಾಚಕ್ರ (ಅನಾಯಿಾಯಗಳಾದ ಅಂತಃಕರಣ ಬಹಿಷ್ಕರಣಗಳ ತೇಜಃಪುಂಜ) ರೂಪವೆಂದು ತಿಳಿದು ಈಶ್ವರತ್ವವನ್ನೂ ಪರಭೈರವಾತ್ಮಕ ಸಾಮ್ರಾಜ್ಯವನ್ನೂ ಪಡೆಯುತ್ತಾನೆ.

ಇಂತಹ ಯೋಗಿಯು ಏಕಾಗ್ರತೆಯಿಂದ ಸಂಹಾರವನ್ನೂ ಭೇದ ಜ್ಞಾನದಿಂದ ಸೃಷ್ಟಿಯನ್ನೂ ಮಾಡುತ್ತಾ ಚಕ್ರೇಶ್ವರನಾಗಿರುತ್ತಾನೆ. ಸಂಕ್ಷೇಪವಾಗಿ ಹೇಳುವುದಾದರೆ ವಿಶ್ವರೂಪವಾಗಿ ಬೆಳಗುತ್ತಾನೆಂದು ಹೇಳಿದಹಾಗಾಯಿತು.

ಈ ಪ್ರಪಂಚದಲ್ಲಿ ಸಾಧನಾಭ್ಯಾಸಗಳಿಂದ ಸಮಾಧಿ ಸ್ಥಿತಿಯನ್ನು ಕೆಲವರು ಕಾಣುತ್ತಾರೆ. ಅವರಿಗೂ ಸಾಮಾನ್ಯ ಮನುಷ್ಯರಿಗೂ ಬಾಹ್ಯಪ್ರಪಂಚಾನುಭವ ಒಂದೇರೀತಿಯಾಗಿರುತ್ತದೆ. ಆದರೆ ಭಾವನಾ ಕ್ರಮವು ಬೇರೆಯಾಗಿರುತ್ತದೆ. ಸಾಮಾನ್ಯವಾಗಿ ಮನುಷ್ಯನು ಬಾಹ್ಯ ಪ್ರಪಂಚದಲ್ಲಿ ಒಂದುಪದಾರ್ಥವನ್ನು ನೋಡಿದರೆ ಆದರ ಗುಣಾವಗುಣ ಗಳನ್ನು ಅವನ ಹಿಂದಿನ ಅನುಭವದಂತೆ ತಿಳಿಯುತ್ತಾನೆ. ಆ ಹಿನ್ನೆಲೆ ಯಿಂದ ಆ ಪದಾರ್ಥವನ್ನು ಸ್ವೀಕರಿಸುತ್ತಾನೆ ಅಥವಾ ಬಿಟ್ಟು ಬಿಡುತ್ತಾನೆ. ಸಮಾಧಿಸ್ಥಿತಿಯನ್ನನುಭವಿಸಿರುವ ವ್ಯಕ್ತಿಯು ಒಂದು ವಿಚಿತ್ರ ರೀತಿಯಲ್ಲಿ ಹೊರಗಿನ ಪ್ರಪಂಚವನ್ನು ನೋಡುತ್ತಾನೆ. ಇವ ನಿಗೆ ಹೊರಗಿನ ಪದಾರ್ಥ ಪ್ರಧಾನವಲ್ಲ. ಆ ಪದಾರ್ಥಜ್ಞಾನವೇ ಮುಖ್ಯ. ಇವನು ಈ ಪದಾರ್ಥಜ್ಞಾನಕ್ಕಿಂತ ಈ ಪದಾರ್ಥಜ್ಞಾನವನ್ನು ಪಡೆಯುವ ಚಿದ್ರೂಪಿಯಾದ ಜೀವಾತ್ಮನನ್ನು ಪ್ರಧಾನವಾಗಿ ಭಾವಿಸು ತ್ತಾನೆ. ಅಷ್ಟಕ್ಕೆ ತೃಪ್ತಿಯಾಗದೆ ಸ್ಥೂಲ ಪ್ರಪಂಚದಲ್ಲಿಯೂ ಎಲ್ಲಾ ಜೀವಾತ್ಮರುಗಳಲ್ಲಿಯೂ ವ್ಯಾಪಿಯಾಗಿಯೂ ಆಧಾರವಾಗಿಯೂ ಅಖಂಡವಾಗಿಯೂ ಅನಂತವಾಗಿಯೂ ಇರುವ ಪರಮಾತ್ಮನನ್ನು ಪ್ರಧಾನವೆಂದು ತಿಳಿಯುತ್ತಾನೆ. ಅವನಿಗೆ ಪ್ರತಿಯೊಂದು ವ್ಯವಹಾರ ದಲ್ಲಿಯೂ ಪರಮಾತ್ಮನ ಪ್ರಭಾವವು ಎಡಬಿಡದೆ ಪರಿಶೀಲನೆಯಲ್ಲಿರು ತ್ತದೆ. ಹಣ್ಣಿನಲ್ಲಿ ರೂಪ ರಸ ಗಂಧ ಮೊದಲಾದ ಧರ್ಮಗಳು ಒಂದ

ನ್ನೊಂದು ಬಿಡದೆ ಕೇಂದ್ರೀಕೃತವಾಗಿರುವಂತೆ ಬಾಹ್ಯಪದಾರ್ಥ, ಪದಾರ್ಥಜ್ಞಾನ, ಅದರ ಜ್ಞಾತೃ, ಇದಕ್ಕೆಲ್ಲಾ ಆಧಾರವಾಗಿರುವ ಸರ್ವವ್ಯಾಪಿಯಾದ ಪರಮಾತ್ಮ ಈ ಅಂಶಗಳನ್ನು ಸದಾ ಅನುಸಂಧಾನ ಮಾಡುತ್ತಿರುತ್ತಾನೆ. ಇದರಿಂದ ಅವನ ಜ್ಞಾನವು ವಿಕಾಸವಾಗಿ 'ಅಲ್ಪಾಹಂತಾ' ವಿಮರ್ಶೆಯಿದ್ದವನು 'ಪೂರ್ಣಾಹಂ' ವಿಮರ್ಶೆಯನ್ನು ಪಡೆಯುತ್ತಾನೆ. ಇದೇ ಸಮಾಧಿಲಾಭ.

**ದೇಹಪ್ರಾಣಸುಖಾದಿಭಿಃ ಪ್ರತಿಕಲಂ ಸಂರುಧ್ಯಮಾನೋ ಜನಃ**
**ಪೂರ್ಣಾನಂದಘನಾಮಿಮಾಂ ನ ಚಿನುತೆ ಮಾಹೇಶ್ವರೀಂ**
**ಸ್ವಾಂ ಚಿತಿಮ್ ।**
**ಮಥ್ನೈಬೋಧಸುಧಾಬ್ಧಿಂ ವಿಶ್ವಮಭಿತಸ್ತತ್ಫೇನಪಿಂಡೋಪಮಂ**
**ಯಃ ಪಶ್ಯೇದುಪದೇಶತಸ್ತು ಕಥಿತಃ ಸಾಕ್ಷಾತ್ಸ ಏಕಃ ಶಿವಃ ॥**

ಶರೀರ ಪ್ರಾಣ ಸುಖ ಮುಂತಾದವುಗಳಿಂದ ಯಾವಾಗಲೂ ಮುಚ್ಚಲ್ಪಟ್ಟಿರುವ ಜನರು ಈ ಸಂಪೂರ್ಣಾನಂದರೂಪವಾಗಿರುವ ಮಾಹೇಶ್ವರೀಯವಾದ ತಮ್ಮ ಚಿತ್ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳಲಾರರು. ಜ್ಞಾನವೆಂಬ ಕ್ಷೀರಸಾಗರದಲ್ಲಿ ಈ ಮಹಾವಿಶ್ವವನ್ನು ನೊರೆಯಂತೆ ಯಾವನು ಉಪದೇಶದಿಂದ ತಿಳಿಯುತ್ತಾನೆಯೋ ಯಾವನು ಸಾಕ್ಷಾತ್ಕರಿಸುತ್ತಾನೆಯೋ ಅವನೇ ಶಿವನಾಗುತ್ತಾನೆ.

ಮಹೇಶ್ವರನು ಸ್ವತಂತ್ರನಾಗಿ ಚಿಚ್ಛಕ್ತಿಗಳ ಸಮೂಹಕ್ಕೆ ಒಡೆಯನಾಗಿ ಸಂವಿದ್ದೇವತಾಚಕ್ರಗಳಿಂದ ಕೂಡಿದವನಾಗಿ ವಿರಾಜಿಸುತ್ತಿದ್ದಾನೆ. ಇದುವರೆಗೂ ಹೇಳಿದ ಪ್ರಕರಣಗಳೆಲ್ಲಾ ಮಂಗಳಕರವಾಗಿ ಶಿವಪ್ರಾಪ್ತಿಗೆ ಕಾರಣವಾಗಿರುತ್ತವೆ. ಶಿವನಿಂದಲೇ ಹೊರಟಿರುವು

ದರಿಂದ ಶಿವನಿಗಿಂತ ಬೇರೆಯಲ್ಲದೆ ಇರುತ್ತವೆ. ಅಂದರೆ ಶಿವಮಯ ವಾಗಿರುತ್ತವೆ.

ಕೆಲವರಿಗೆ ಈಶ್ವರನ ಶಕ್ತಿಪಾತವಾಗಿದ್ದರೂ ಶಾಸ್ತ್ರಾಭ್ಯಾಸವಿಲ್ಲ ದಿರುವುದರಿಂದ ಅವರು ತೀಕ್ಷ್ಣವಾದ ಯುಕ್ತಿ ವಿಚಾರಗಳಲ್ಲಿ ಅಸಮರ್ಥ ರಾಗಿರುವರು. ಅಂತಹವರಿಗೋಸ್ಕರ ಪ್ರತ್ಯಭಿಜ್ಞಾದರ್ಶನದ ಅರಿವು ಸುಲಭವಾಗಿ ಉಂಟಾಗಲೆಂದು ಈ ಸಂಗ್ರಹವು ಬರೆಯಲ್ಪಟ್ಟದೆ.

**ಇತಿ ಸರ್ವಂ ಶಿವಂ.**



## ಪಾರಿಭಾಷಿಕ ಶಬ್ದಗಳ ಅರ್ಥ ವಿವರಣೆ

| ಪದಗಳು | ಅರ್ಥ ವಿವರಣೆ | ಪುಟ ಸಂಖ್ಯೆ |
|---|---|---|
| ಅಂತಕೋಟಿ | ದ್ವಾದಶಾಂತ ತಲೆಯಲ್ಲಿರುವ ಬ್ರಹ್ಮರಂಧ್ರದ ಒಂದಂಶ. ಆದ್ಯಂತಕೋಟಿ – ಆದಿಕೋಟಿ = ಹೃದಯ. | ೬೭, ೬೮ |
| ಅಕುಲ | 'ಅ' ಅಂದರೆ ಚಿತ್ತು 'ಕುಲ' ಅಂದರೆ ಶರೀರ, ಚಿಚ್ಛರೀರ. ಅನುತ್ತರಾಕುಲಸ್ವರೂಪ-ಸ್ವಸಂವೇದ್ಯವಾದ ಚಿತ್ತು | ೭೩ |
| ಅಕ್ರಮ | ದೇಶ ಕಾಲ ದಶಾ ಇವುಗಳಿಂದ ನಿಯಮಿತವಾಗದೆ ಪ್ರಸರಿಸುವುದು | ೨೮ |
| ಅಖ್ಯಾತಿ | ಶಕ್ತಿ ಸಂಕೋಚಾವಸ್ಥೆ. ಭೇದವು ತಿಳಿಯದಿರುವ ತಿಳಿವಳಿಕೆ. 'ಭೇದಾಗ್ರಹರೂಪಾ ಖ್ಯಾತಿಃ' | ೧೨, ೧೩ |
| ಅಣು | 'ಸಕಲ' ಪ್ರಮಾತ್ರಾವಸ್ಥೆಯಲ್ಲಿರುವವನು. ಬದ್ಧಜೀವನು | ೨೯ |
| ಅನಚ್ಕ | ಉಚ್ಚಾರಣೆಗೆ ಬರುವುದಕ್ಕೆ ಮುಂಚೆ ಇರುವ ಅರ್ಧಾಕ್ಷರಗಳು. ಸ್ವರಸಹಿತವಾಗಿಲ್ಲದೆ ಇರುವವುಗಳು. ಅನಚ್ಕ ಉಚ್ಚಾರಣಾಮಾರ್ಗವು ಪರಾಶಕ್ತಿಯ ಉಪಾಸನಾಮಾರ್ಗಗಳಲ್ಲೊಂದು. ಉಚ್ಚಾರ ಸಹಿತದಿಂದ ಉಚ್ಚಾರ ರಹಿತಕ್ಕೆ ಹೋಗುವುದು. ಇದರಿಂದ ವಾಚ್ಯವಾಚಕಭಾವವಿಲ್ಲದಿರುವ ಅಭೇದಸ್ಥಿತಿ ಅನುಭವಕ್ಕೆ ಬರುತ್ತದೆ. | ೬೭ |
| ಅನಂತಭಟ್ಟಾರಕ | ವಿದ್ಯಾತತ್ವದಲ್ಲಿರುವ ಮಂತ್ರರೆಂಬ ಪ್ರಮಾತೃವರ್ಗಕ್ಕೆ ಅಧಿದೇವತೆ | ೧೨, ೪೨ |
| ಅನಾಶ್ರಿತಶಿವ | ಸ್ವತಂತ್ರೇಶ್ವರ, ಶಿವತತ್ವದಲ್ಲಿರುವ ಕಾರಣ ಪಂಚಕದ ಮೊದಲನೆಯ ಸ್ವರೂಪ, ಶೂನ್ಯಾತಿಶೂನ್ಯಾತ್ಮಾ | ೧೨, ೧೬, ೧೩, ೧೮ |
| ಅನುಗ್ರಹ | ಶಿವನ ಪಂಚಕೃತ್ಯಗಳಲ್ಲಿ ಇದು ಒಂದು. ಮನಸ್ಸಿನ ವೃತ್ತಿಗಳು ಸಂಸ್ಕಾರರೂಪವನ್ನು ಬಿಟ್ಟು | |

| | | |
|---|---|---|
| | ಚಿತ್ತಿನಲ್ಲಿಯೇ ನಿಶ್ಶೇಷವಾಗಿ ಲಯವಾಗುವುದಕ್ಕೆ ಅನುಗ್ರಹ ಎಂದು ಹೆಸರು. ಇದರಿಂದಲೇ ಜೀವ ನಿಗೆ ಚಿದಾನಂದಪ್ರಾಪ್ತಿ. ಇದಕ್ಕೆ ಶಕ್ತಿಪಾತ ವೆಂದು ಹೇಳುತ್ತಾರೆ. | ೩೧, ೩೫, ೩೭ |
| ಅನುತ್ತರ | ಯಾವುದರ ಆಚೆ ಏನೂ ಇಲ್ಲವೋ ಅಂತಹ ಸ್ವತಂತ್ರವಾದದ್ದು | ೨ |
| ಅನುಶೀಲನ | ಒಂದು ವಿಷಯ ಮೊದಲಿನಿಂದ ಹೇಗೆ ಅನುಸರಿಸಿ ಬಂತೆಂಬುದನ್ನು ತಿಳಿಯುವುದು ಮತ್ತು ನೆನೆ ಯುವುದು. | ೨೮, ೩೫, ೬೧, ೭೦ |
| ಅನುಸೃತ್ಯಸಂಧಾನ | ಹಿಂದಿನ ಮತ್ತು ಈಗಿನ ಪರಿಸ್ಥಿತಿಯನ್ನು ತಿಳಿದು ಕೊಂಡು ಬಹಳಕಾಲ ಒಂದೇ ಆಕಾರವನ್ನು ಧ್ಯಾನಮಾಡುವುದು. ಇದಕ್ಕೆ ಅನುಸಂಧಾನ ವೆಂದೂ ಹೆಸರು | ೩೫, ೪೪, ೬೨ |
| ಅಪೋಹನಶಕ್ತಿ | ಇರುವುದನ್ನು ತಪ್ಪಾಗಿ ತಿಳಿಯುವುದು. ಚಿತ್ತತ್ವವು ಚಿನ್ಮಾತ್ರ ಪ್ರಕಾಶರೂಪವನ್ನು ಬಿಟ್ಟು ಭಿನ್ನ ವಾಗಿರುವ ದೇಹ ಇಂದ್ರಿಯ ಪ್ರಾಣಗಳಲ್ಲಿ 'ಸ್ಥೂಲೋಽಹಂ' 'ಕೃಶೋಽಹಂ' ಅನ್ನುವ ಭಾವಗಳನ್ನು 'ಅಹಂ ಜಾನಾಮಿ' ಅನ್ನುವಂತೆ ಭಿನ್ನವಾಗಿ ತಿಳಿಯುವುದು - ವಿದ್ಯಮಾನ ಸ್ಥಿತಿಗೆ ವ್ಯತಿರೇಕವಾಗಿ ತಿಳಿಯುವುದು. | ಉಪೋ ದ್ಘಾತ |
| ಅಲಂಗ್ರಾಸಯುಕ್ತಿ | ಚಿತ್ತಿನಲ್ಲಿ ಚಿದ್ರೂಪ ಅಥವಾ ಸಂಸ್ಕಾರರೂಪ ವಾಗಿದ್ದದ್ದನ್ನು ನಿಶ್ಶೇಷವಾಗುವಂತೆ ಮಾಡುವ ಪ್ರಶಮ ವಿಶೇಷ (ಶಾಂತಿಸ್ವರೂಪ ಮಾತ್ರ.) ಸೃಷ್ಟಿ ಸ್ಥಿತಿ ಮೊದಲಾದ ಉಪಾಧಿಗಳು ಪೂರ್ಣ ವಾಗಿ ಸ್ವಸ್ವರೂಪದಲ್ಲಿಯೇ ಬೆರೆತುಹೋಗುತ್ತವೆ. ಈ ಯುಕ್ತಿಯಿಂದ ಅನುಗ್ರಹ, ವಿಲಾಪನಗಳುಂ ಟಾಗುತ್ತವೆ. | ೩೬ |
| ಅಲ್ಪಾಹಂತಾ | ಸಂಕುಚಿತವಾಗಿರುವ ಜೀವಾವಸ್ಥೆ, ಜೀವಭಾವ, ಭೇದಜ್ಞಾನದಿಂದ ಕೂಡಿದ 'ಅಹಂ'ಭಾವನೆ | ೨೪ |
| ಅವರೋಹಪದಂ | ಬದ್ಧಾತ್ಮಕ ಸ್ಥಿತಿ, ಮಾಯಾ ಪ್ರಮಾತೃಭಾವ. | ೫೩ |

**ಅಹಂ** — ನಾನು (ಅಹಂ) ಅಂತ ತೋರುವುದೇ ಆತ್ಮ. ಬೇರೆ ಬೇರೆ ಕಾಣಿಸುವುದು ಶಕ್ತಿ. ಕೇವಲ ಗ್ರಾಹಕವಾಗಿರುವ ಆತ್ಮಸ್ವರೂಪ. ಎಲ್ಲಾ ಪ್ರಕಾಶಗಳೂ ಆತ್ಮನಲ್ಲಿ ವಿಶ್ರಾಂತವಾಗಿ 'ಅಹಂ' ಭಾವವನ್ನು ಪಡೆಯುತ್ತವೆ ಇದಕ್ಕೆ ಈಶ್ವರಭಾವವೆಂದು ಹೇಳುತ್ತಾರೆ. 'ಯಾ ಸ್ವಸ್ವರೂಪೆ ವಿಶ್ರಾಂತಿಃ ವಿಮರ್ಶಃ ಸೋಹ ಮಿತ್ಯಯಂ' ೩೦, ೭೪

**ಅಹಂತಾ** — ನಾನು ಎಂಬುವ ಆತ್ಮಭಾವನೆ - ಪೂರ್ಣಾಹಂತಾ ಅಲ್ಪಾಹಂತಾ ಎಂದು ಎರಡು ರೂಪವಾಗಿದೆ. ಪೂರ್ಣಾಹಂತಾವಸ್ಥೆಯಲ್ಲಿ ವಿಶ್ವಾತ್ಮಕ ಭಾವನೆ. ಅಲ್ಪಾಹಂತಾವಸ್ಥೆಯಲ್ಲಿ ಸಂಕುಚಿತ ಭಾವನೆ. ೯

**ಆಣವಮಲ** — 'ಅಪೂರ್ಣಂ ಮನ್ಯತಾರೂಪಂ ಆಣವಮಲಂ' ತಾನು ಪರಿಪೂರ್ಣನಾಗಿದ್ದರೂ ಪೂರ್ಣನಲ್ಲವೆಂದು ತಿಳಿಯುವುದು. ಇಚ್ಛಾಶಕ್ತಿ ಸಂಕೋಚದಿಂ ದುಂಟಾದ ಆಣವಮಲದಿಂದ ಸರ್ವವ್ಯಾಪಿಯಾದ ಶಿವನು ಅಲ್ಪವ್ಯಾಪಿಯಾದ ಜೀವಾವಸ್ಥೆಯನ್ನು ಪಡೆದನು 'ಅನಾತ್ಮನ್ಯಾತ್ಮಾಭಿಮಾನಂ' ಆತ್ಮ ಪದಾರ್ಥವಾಗದಿರುವ ಶರೀರಾದಿಗಳಲ್ಲಿ ನಾನು ಎಂಬ ಅಭಿಮಾನ. ೨೪, ೨೯, ೩೧

**ಆಣವೋಪಾಯ** — ವಿಕಲ್ಪಗಳನ್ನು ಸಂಸ್ಕರಿಸಿ ಚಿತ್ತ ವಿಶ್ರಾಂತಿಯನ್ನು ಪಡೆಯುವುದಕ್ಕೆ ಆಣವೋಪಾಯವೆಂದು ಹೆಸರು. ಶರೀರ ಬುದ್ಧಿ ಪ್ರಾಣ ಇಂದ್ರಿಯಗಳೇ ಮೊದ ಲಾದ ಪರಿಮಿತವಾದ ಉಪಕರಣಗಳನ್ನೇ ಸಾಧನ ಗಳನ್ನಾಗಿ ಉಪಯೋಗಿಸಿಕೊಂಡು ಚಿತ್ತ ವಿಶ್ರಾಂ ತ್ಯಾತ್ಮಕವಾದ ಸ್ಥಿತಿಯನ್ನು ಪಡೆಯುವ ಉಪಾಯ. ವರ್ಣಸ್ಥಾನಗಳಅನು ಮಂತ್ರ, ಜಪ, ಧ್ಯಾನ, ಸಂಧಾನ, ಇವುಗಳಿಂದ ಬರುವ ಸಮಾವೇಶ. ಉಪೊದ್ಘಾತ

**ಆನಂದ ಶಕ್ತಿ** — 'ಸ್ವಾತಂತ್ರ್ಯಂ ಆನಂದ ಶಕ್ತಿಃ' ಇನ್ನೊಂದರ ಸಹಾಯವಿಲ್ಲದೆ ತನ್ನಲ್ಲಿಯೇ ಸ್ವತಂತ್ರವಾಗಿ ಆನಂದವನ್ನು ಪಡೆಯುವ ಶಕ್ತಿ. ೪೩

| | | |
|---|---|---|
| | ಚಿತ್ತಿನಲ್ಲಿಯೇ ನಿಶ್ಶೇಷವಾಗಿ ಲಯವಾಗುವುದಕ್ಕೆ | |
| ಅನುಗ್ರಹ | ಎಂದು ಹೆಸರು. ಇದರಿಂದಲೇ ಜೀವನಿಗೆ ಚಿದಾನಂದಪ್ರಾಪ್ತಿ. ಇದಕ್ಕೆ ಶಕ್ತಿಪಾತವೆಂದು ಹೇಳುತ್ತಾರೆ. | ೩೧, ೩೫, ೩೭ |
| ಅನುತ್ತರ | ಯಾವುದರ ಆಚೆ ಏನೂ ಇಲ್ಲವೋ ಅಂತಹ ಸ್ವತಂತ್ರವಾದದ್ದು | ೨ |
| ಅನುಶೀಲನ | ಒಂದು ವಿಷಯ ಮೊದಲಿನಿಂದ ಹೇಗೆ ಅನುಸರಿಸಿ ಬಂತೆಂಬುದನ್ನು ತಿಳಿಯುವುದು ಮತ್ತು ನೆನೆಯುವುದು. | ೨೮, ೩೫, ೬೧, ೭೦ |
| ಅನುಸೃತ್ಯಸಂಧಾನ | ಹಿಂದಿನ ಮತ್ತು ಈಗಿನ ಪರಿಸ್ಥಿತಿಯನ್ನು ತಿಳಿದುಕೊಂಡು ಬಹಳಕಾಲ ಒಂದೇ ಆಕಾರವನ್ನು ಧ್ಯಾನಮಾಡುವುದು. ಇದಕ್ಕೆ ಅನುಸಂಧಾನವೆಂದೂ ಹೆಸರು | ೩೫, ೪೪, ೬೨ |
| ಅಪೋಹನಶಕ್ತಿ | ಇರುವುದನ್ನು ತಪ್ಪಾಗಿ ತಿಳಿಯುವುದು. ಚಿತ್ತತ್ವವು ಚಿನ್ಮಾತ್ರ ಪ್ರಕಾಶರೂಪವನ್ನು ಬಿಟ್ಟು ಭಿನ್ನವಾಗಿರುವ ದೇಹ ಇಂದ್ರಿಯ ಪ್ರಾಣಗಳಲ್ಲಿ 'ಸ್ಥೂಲೋಽಹಂ' 'ಕೃಶೋಽಹಂ' ಅನ್ನುವ ಭಾವಗಳನ್ನು 'ಅಹಂ ಜಾನಾಮಿ' ಅನ್ನುವಂತೆ | |
| | ಭಿನ್ನವಾಗಿ ತಿಳಿಯುವುದು - ವಿದ್ಯಮಾನ ಸ್ಥಿತಿಗೆ | ಉಪೋ |
| | ವ್ಯತಿರೇಕವಾಗಿ ತಿಳಿಯುವುದು. | ದ್ಘಾತ |
| ಅಲಂಗ್ರಾಸಯುಕ್ತಿ | ಚಿತ್ತಿನಲ್ಲಿ ಚಿದ್ರೂಪ ಅಥವಾ ಸಂಸ್ಕಾರರೂಪವಾಗಿದ್ದದ್ದನ್ನು ನಿಶ್ಶೇಷವಾಗುವಂತೆ ಮಾಡುವ ಪ್ರಶಮ ವಿಶೇಷ (ಶಾಂತಿಸ್ವರೂಪ ಮಾತ್ರ.) ಸೃಷ್ಟಿ ಸ್ಥಿತಿ ಮೊದಲಾದ ಉಪಾಧಿಗಳು ಪೂರ್ಣವಾಗಿ ಸ್ವಸ್ವರೂಪದಲ್ಲಿಯೇ ಬೆರೆತುಹೋಗುತ್ತವೆ. ಈ ಯುಕ್ತಿಯಿಂದ ಅನುಗ್ರಹ, ವಿಲಾಪನಗಳುಂಟಾಗುತ್ತವೆ. | ೩೭ |
| ಅಲ್ಪಾಹಂತಾ | ಸಂಕುಚಿತವಾಗಿರುವ ಜೀವಾವಸ್ಥೆ, ಜೀವಭಾವ, ಭೇದಜ್ಞಾನದಿಂದ ಕೂಡಿದ 'ಅಹಂ' ಭಾವನೆ | ೨೪ |
| ಅವರೋಹಪದಂ | ಬದ್ಧಾತ್ಮಕ ಸ್ಥಿತಿ, ಮಾಯಾ ಪ್ರಮಾತೃಭಾವ. | ೫೩ |

**ಅಹಂ** — ನಾನು (ಅಹಂ) ಅಂತ ತೋರುವುದೇ ಆತ್ಮ. ಬೇರೆ ಬೇರೆ ಕಾಣಿಸುವುದು ಶಕ್ತಿ. ಕೇವಲ ಗ್ರಾಹಕವಾಗಿರುವ ಆತ್ಮಸ್ವರೂಪ. ಎಲ್ಲಾ ಪ್ರಕಾಶಗಳೂ ಆತ್ಮನಲ್ಲಿ ವಿಶ್ರಾಂತವಾಗಿ 'ಅಹಂ' ಭಾವವನ್ನು ಪಡೆಯುತ್ತವೆ ಇದಕ್ಕೆ ಈಶ್ವರಭಾವವೆಂದು ಹೇಳುತ್ತಾರೆ. 'ಯಾ ಸ್ವಸ್ವರೂಪೆ ವಿಶ್ರಾಂತಿಃ ವಿಮರ್ಶಃ ಸೋಽಹ ಮಿತ್ಯಯಂ' ೭೦, ೭೪

**ಅಹಂತಾ** — ನಾನು ಎಂಬುವ ಆತ್ಮಭಾವನೆ - ಪೂರ್ಣಾಹಂತಾ ಅಲ್ಪಾಹಂತಾ ಎಂದು ಎರಡು ರೂಪವಾಗಿದೆ. ಪೂರ್ಣಾಹಂತಾವಸ್ಥೆಯಲ್ಲಿ ವಿಶ್ವಾತ್ಮಕ ಭಾವನೆ. ಅಲ್ಪಾಹಂತಾವಸ್ಥೆಯಲ್ಲಿ ಸಂಕುಚಿತ ಭಾವನೆ. ೯

**ಆಣವಮಲ** — 'ಅಪೂರ್ಣಂ ಮನ್ಯತಾರೂಪಂ ಆಣವಮಲಂ' ತಾನು ಪರಿಪೂರ್ಣನಾಗಿದ್ದರೂ ಪೂರ್ಣನಲ್ಲವೆಂದು ತಿಳಿಯುವುದು. ಇಚ್ಛಾಶಕ್ತಿ ಸಂಕೋಚದಿಂದುಂಟಾದ ಆಣವಮಲದಿಂದ ಸರ್ವವ್ಯಾಪಿಯಾದ ಶಿವನು ಅಲ್ಪವ್ಯಾಪಿಯಾದ ಜೀವಾವಸ್ಥೆಯನ್ನು ಪಡೆದನು 'ಅನಾತ್ಮನ್ಯಾತ್ಮಾಭಿಮಾನಂ' ಆತ್ಮ ಪದಾರ್ಥವಾಗದಿರುವ ಶರೀರಾದಿಗಳಲ್ಲಿ ನಾನು ೨೪, ೨೯, ೩೧
ಎಂಬ ಅಭಿಮಾನ.

**ಆಣವೋಪಾಯ** — ವಿಕಲ್ಪಗಳನ್ನು ಸಂಸ್ಕರಿಸಿ ಚಿತ್ತ ವಿಶ್ರಾಂತಿಯನ್ನು ಪಡೆಯುವುದಕ್ಕೆ ಆಣವೋಪಾಯವೆಂದು ಹೆಸರು. ಶರೀರ ಬುದ್ಧಿ ಪ್ರಾಣ ಇಂದ್ರಿಯಗಳೇ ಮೊದಲಾದ ಪರಿಮಿತವಾದ ಉಪಕರಣಗಳನ್ನೇ ಸಾಧನಗಳನ್ನಾಗಿ ಉಪಯೋಗಿಸಿಕೊಂಡು ಚಿತ್ತ ವಿಶ್ರಾಂ ಉಪೊ
ತ್ಯಾತ್ಮಕವಾದ ಸ್ಥಿತಿಯನ್ನುಪಡೆಯುವ ಉಪಾಯ. ದ್ಘಾತ
ಮಂತ್ರ, ಜಪ, ಧ್ಯಾನ, ವರ್ಣಸ್ಥಾನಗಳಅನು ಸಂಧಾನ, ಇವುಗಳಿಂದ ಬರುವ ಸಮಾವೇಶ.

**ಆನಂದ ಶಕ್ತಿ** — 'ಸ್ವಾತಂತ್ರ್ಯಂ ಆನಂದ ಶಕ್ತಿಃ' ಇನ್ನೊಂದರ ಸಹಾಯವಿಲ್ಲದೆ ತನ್ನಲ್ಲಿಯೇ ಸ್ವತಂತ್ರವಾಗಿ ಆನಂದವನ್ನು ಪಡೆಯುವ ಶಕ್ತಿ. ೪೩

| | | |
|---|---|---|
| ಆಭಾಸನ | ಶಕ್ತಿಯ ಉನ್ಮೇಷ, ಪ್ರಕಾಶ, ಸೃಷ್ಟಿ | ೩೬ |
| ಆವೇಶ | ಸಮಾವೇಶ. ಜೀವನಿಗೆ ಈಶ್ವರತಾ ಅಥವಾ ಪರಮಾತ್ಮ ಭಾವನೆಯುಂಟಾಗುವಿಕೆ | ೫೭, ೬೩ |
| ಇಚ್ಛಾಶಕ್ತಿ | 'ತಚ್ಚಮತ್ಕಾರಃ ಇಚ್ಛಾ ಶಕ್ತಿಃ' - ಸಂಕಲ್ಪರೂಪವಾದದ್ದು ಏನು ಮಾಡಬೇಕೆನ್ನುವ ಆಕೂತ. ಆಶ್ಚರ್ಯರೂಪವಾದ ದಿವ್ಯಶಕ್ತಿಯನ್ನನುಭವಿಸಿ ಏನು ಮಾಡಬೇಕೆಂದು ನಿಶ್ಚಯಿಸುವುದು. | ೮, ೨೯ |
| ಇದಂತಾ | ಇದು ಎಂದರ್ಥ. ತಿಳಿಯಲ್ಪಡುವ ಪದಾರ್ಥ ಅಥವಾ ತತ್ವ | ೯ |
| ಈಶ್ವರ ತತ್ವ | ಮೂವತ್ತಾರು ತತ್ವಗಳಲ್ಲೊಂದು. ಕ್ರಿಯಾಶಕ್ತಿ ಉದ್ರಿಕ್ತವಾಗಿರುವ ತತ್ವ. ವಿಶ್ವವನ್ನು ಪ್ರಕಾಶಪಡಿಸುವ ತತ್ವ ಸ್ಥಿತಿ - ಇಲ್ಲಿ ಗ್ರಾಹ್ಯ ಗ್ರಾಹಕ ಭಾವಗಳು ಸ್ಫುಟವಾಗಿ ಸಮಾನವಾಗಿರುವವು | ೯ |
| ಈಶ್ವರ ಭಟ್ಟಾರಕ | ಸಪ್ತಪ್ರಮಾತೃಗಳಲ್ಲಿ ಮಂತ್ರೇಶ್ವರರೆಂಬ ಪ್ರಮಾತೃವರ್ಗಕ್ಕೆ ಅಧಿದೇವತೆ. | ೯ |
| ಉದಾನಶಕ್ತಿ | ಪಂಚಪ್ರಾಣ ಶಕ್ತಿಗಳಲ್ಲಿ ಒಂದು. ಅಧ್ಯಾತ್ಮ ವಿಕಾಸವನ್ನುಂಟುಮಾಡುವ ಶಕ್ತಿ | ೪೯ |
| ಊರ್ಧ್ವಕುಂಡಲಿನಿ | ಕುಂಡಲಿನಿಯ ಮೇಲ್ಭಾಗದಲ್ಲುಂಟಾಗುವ ಸ್ವರೂಪಾನುಭವಗಳು. ಮನೋವ್ಯಾಪಾರಗಳಿಗಿಂತ ಮೇಲಿರುವ ಸ್ವರೂಪಾನುಭವ. ಇದಕ್ಕೆ ಉನ್ಮನೀ ಅಂತಲೂ ಹೆಸರು | ೪೯ |
| ಉನ್ಮೀಲನ | ಚಿತ್ತಿನಲ್ಲಿರುವ ವೃತ್ತಿಗಳನ್ನು ಹೊರಹೊಮ್ಮಿಸುವಿಕೆ | |
| ಉನ್ಮೇಷ | ಚಿತ್ತು ಬಹಿರ್ಮುಖವಾಗುವ ಮೊದಲನೆಯ ಚಲನ. ಶಕ್ತಿಯ ಆವಿರ್ಭಾವ. ಸ್ಪಂದ, ಉದಯ, ಆಭಾಸನ ಎಂಬಿವೂ ಇದೇ ಅರ್ಥವನ್ನು ಸೂಚಿಸುತ್ತವೆ. | ೨೭ |
| ಉನ್ಮುಖೀಕರಣ | ಇಂದ್ರಿಯದ್ವಾರಾ ಪ್ರಸರಿಸುತ್ತಲಿರುವ ಶಕ್ತಿಯನ್ನು ಉಪಸಂಹರಿಸುವುದರಮೂಲಕ ಶಕ್ತಿ ಸಂಕೋಚ. | ೬೩, ೬೪ |

| | | |
|---|---|---|
| ಉಪಾದಾನ ಕಾರಣ | ಎಲ್ಲಾ ವಿಕಾಸಗಳಿಗೂ ಆಧಾರವಾಗಿರುವ ಶಿವನೊಬ್ಬನೇ ಈ ವಿಶ್ವಸೃಷ್ಟಿಗೆ ಉಪಾದಾನಕಾರಣನೂ ನಿಮಿತ್ತಕಾರಣನೂ ಆಗಿದ್ದಾನೆ. | ೫, ೬ |
| ಐಶ್ವರ್ಯ | ಎಲ್ಲವನ್ನೂ ಸ್ವಶಕ್ತಿಯಿಂದಲೇ ಇತರ ಅಪೇಕ್ಷೆಯಿಲ್ಲದೆ ತನ್ನ ಇಷ್ಟಬಂದಂತೆ ನಿಯಮಿಸಲು ಶಕ್ತನಾಗಿರುವಿಕೆ. | ೪೧, ೪೯ |
| ಕಂಚುಕ | ಅಶುದ್ಧಾಧ್ವದ ಐದು ತತ್ವಗಳು. ಶಿವನು ತನ್ನ ಅಖ್ಯಾತಿಯಿಂದಲೇ ತನ್ನ ಪಂಚ ಶಕ್ತಿಗಳನ್ನು ಸಂಕೋಚಮಾಡಿಕೊಂಡದ್ದರಿಂದ ಆ ಶಕ್ತಿಗಳು ಕ್ರಮವಾಗಿ ಕಲಾ, ವಿದ್ಯಾ, ರಾಗ, ಕಾಲ, ನಿಯತಿ ಎಂಬ ಕಂಚುಕಗಳಾದವು. ಇದರಿಂದಲೇ ಶಿವನ ಸರ್ವ ಕರ್ತೃತ್ವ, ಸರ್ವಜ್ಞತ್ವ, ಪರಿಪೂರ್ಣತ್ವ, ನಿತ್ಯತ್ವ, ಸರ್ವವ್ಯಾಪಕತ್ವ ಶಕ್ತಿಗಳು ಕುಂದಿದವು. | ೨೫, ೩೧ |
| ಕೃಚ್ಛ್ರಾಧ್ವ | ಮಾಯಾಪದ. ಮಾಯೆಯಿಂದ ಪೃಥ್ವೀವರೆಗಿರುವ ೩೧ ತತ್ವಗಳು. ಇದನ್ನು ಮಾಯಾಧ್ವ, ಅಶುದ್ಧಾಧ್ವ ಎಂದು ಕರೆಯುತ್ತಾರೆ. | ೧೦ |
| ಕ್ರಮಾ | ಕಾಲ, ದೇಶ, ಅವಸ್ಥಾ ಇವುಗಳಿಗನುಸಾರವಾಗಿ ನಿಯಮದಿಂದ ಪ್ರಸರಿಸುವಿಕೆ. | ೭೧ |
| ಕ್ರಮಮುದ್ರಾ | ಯೋಗಿಯು ಕ್ರಮವಾಗಿ ಸೃಷ್ಟಿ ಸ್ಥಿತಿ ಸಂಹಾರಗಳಿಗಾಕರವಾದ ಸ್ಥಾನಗಳಲ್ಲಿ (ಚಕ್ರಗಳಲ್ಲಿ) ಮನಸ್ಸನ್ನು ಏಕಾಗ್ರಚಿತ್ತತೆಯಿಂದ ನಿಲ್ಲಿಸುವುದಕ್ಕೆ ಮುದ್ರಾ ಎಂದು ಹೆಸರು. ಅಂತಃಪ್ರಪಂಚದ ವಿಷಯಗಳನ್ನು ಬಾಹ್ಯಪ್ರಪಂಚಕ್ಕೂ ಬಾಹ್ಯಪ್ರಪಂಚದ ವಿಷಯಗಳನ್ನು ಅಂತಃಪ್ರಪಂಚಕ್ಕೂ ಸೇರಿಸಿ ಯೋಗಿಯು ಮನಸ್ಸನ್ನು ತುರೀಯ ಸತ್ತೆಯಲ್ಲಿ ನಿಲ್ಲಿಸಿ ಚಿಚ್ಛಕ್ತಿಯು ಪ್ರಕಾಶಿಸುವಂತೆ ಮಾಡುವುದಕ್ಕೆ ಕ್ರಮಮುದ್ರಾ ಎಂದು ಹೆಸರು. | ೭೧, ೭೨ |
| ಕಾರ್ಮಮಲ | ಜ್ಞಾನೇಂದ್ರಿಯಗಳು ಕರ್ಮೇಂದ್ರಿಯಗಳು ಮನಸ್ಸು ಇವುಗಳ ಮೂಲಕ ಕರ್ಮಾಚರಣೆಗೆ | |

| | | |
|---|---|---|
| | ಕಾರಣವಾಗಿರುವುದು ಕಾರ್ಮಮಲ. 'ಶುಭಾಶುಭಾನುಷ್ಠಾನಮ್' - ಕರ್ಮದಿಂದ ಜನ್ಯವಾದದ್ದು. ಒಳ್ಳೇ ಕರ್ಮದಿಂದ ಒಳ್ಳೇ ಫಲ. ಕೆಟ್ಟ ಕರ್ಮದಿಂದ ಕೆಟ್ಟ ಫಲ. ಇದು ವಾಸನಾರೂಪವಾಗಿಯೂ ವೃತ್ತಿರೂಪವಾಗಿಯೂ ಇಲ್ಲಿಯೂ ಜನ್ಮಾಂತರಗಳಲ್ಲಿಯೂ ಅನುಸರಿಸಿ ಬರುತ್ತದೆ. | ೨೪, ೨೯, ೩೧ |
| ಕಾಲ | ನಿತ್ಯಶಕ್ತಿಯ ಸಂಕೋಚ | ೨೫, ೩೧ |
| ಕಾಲಾಗ್ನಿ | ಸಂಹಾರಮಾಡುವ ಶಕ್ತಿ - ಉಪಸಂಹರಿಸುವ ಶಕ್ತಿ | ೭೩ |
| ಕ್ರಿಯಾಶಕ್ತಿ | 'ಸರ್ವಕಾರಯೋಗಿತ್ವಂ ಕ್ರಿಯಾಶಕ್ತಿಃ' - ಯಾವ ರೂಪ ಆಕಾರವನ್ನಾದರೂ ಹೊಂದಬಲ್ಲದು. 'ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ' ಈ ವಿಶ್ವವೆಲ್ಲಾ ಆ ಪರಮಶಿವನ ಶಕ್ತಿಯ ವಿಸ್ತಾರವೇ. ಶಕ್ತಿಯ ಆವಿರ್ಭಾವವೇ ಅಥವಾ ವ್ಯಕ್ತರೂಪವೇ ಉದಯ, ಉನ್ಮೇಷ, ಆಭಾಸನ. | ೪೯ |
| ಖೇಚರೀಚಕ್ರ | 'ವಾಮೇಶ್ವರೀ' ನೋಡಿ | |
| ಗೋಚರೀ | 'ವಾಮೇಶ್ವರೀ' ನೋಡಿ | |
| ಗ್ರಾಹಕ | ತಿಳಿಯುವವನು. ವಿಕಲ್ಪಮಯನಾದ ಜೀವನು. | ೮ |
| ಚಿತ್ - ಚಿತ್ತು | ಸ್ವತಂತ್ರವಾದ ಚಿಚ್ಛಕ್ತಿ. | ೩, ೧೫, ೧೬, ೧೭, ೫೪, ೫೫, ೫೮, ೫೨, ೫೧ |
| ಚಿತ್ತ | ಮಾಯಿಯ ಸ್ವರೂಪ, ಸತ್ವ ರಜಸ್ತಮಗಳಿಂದ ಕೂಡಿದ ಒಂದು ಕರಣ-ಮನಸ್ಸು. ಚಿದ್ರೂಪವಾಗಿ ಚೈತನ್ಯವಾಗಿದ್ದ 'ಚಿತ್' ಜೀವರುಗಳಲ್ಲಿ ಅಂತಃಕರಣದ ಮೂಲಕ ವ್ಯವಹರಿಸುವಾಗ 'ಚಿತ್ತ'ವಾಯಿತು. ಶರೀರ, ಪ್ರಾಣ ಒಂದು ಪದವಾಗಬೇಕಾದರೆ ಚಿತ್ತ ಬೇಕು. ಜ್ಞಾಪಕಕ್ಕೆ ತಂದುಕೊಡುವ ಶಕ್ತಿ ಚಿತ್ತ ಸಂಸ್ಕಾರದ್ದೇ - ಚಿತ್. ಅಭೇದಜ್ಞಾನವನ್ನುಂಟುಮಾಡುವುದು. ಚಿತ್ತ ಭೇದಜ್ಞಾನವನ್ನುಂಟುಮಾಡುವುದು. ಚಿತ್ತ ವಿಕಲ್ಪಗಳಿಗಾಸ್ಪದವಾದದ್ದು. | ೧೮, ೧೯, ೫೨, ೫೧ |

| | | |
|---|---|---|
| ಚೈತನ್ಯ | ಜಡವಲ್ಲದಿರುವುದು. ಸ್ವಶಕ್ತಿಯಿಂದ ಕೂಡಿರುವುದು ಮತ್ತು ಬೆಳಗುವುದು. 'ಚೈತನ್ಯಮಾತ್ಮಾ' - ಶುದ್ಧಾತ್ಮಾ | ೨೦ |
| ಜ್ಞಾನಶಕ್ತಿ | 'ಆಮರ್ಶಾತ್ಮಕತಾ ಜ್ಞಾನಶಕ್ತಿಃ' ಎಲ್ಲಾ ವಸ್ತುಗಳನ್ನೂ (ಇದಂ) ತನ್ನಲ್ಲಿ (ಚಿತ್ತಿನಲ್ಲಿ) ಅಡಗಿಸಿಕೊಳ್ಳುವ ಶಕ್ತಿ. ತನ್ನನ್ನು ತಾನು ತಿಳಿಯುವ ಶಕ್ತಿ. | ೮, ೨೯ |
| ತಿರೋಧಾನ | ಚಿತ್ತಿನಲ್ಲಿ ಅಖಂಡವಾಗಿದ್ದ ವಿಷಯಗಳನ್ನು ಭೇದರೂಪವಾಗಿ ಪ್ರಕಾಶಪಡಿಸುವಸ್ಥಿತಿ. | ೩೫ |
| ತ್ರಿಕಶಾಸ್ತ್ರ | ಪತಿ, ಪಶು, ಪಾಶ ಎಂಬ ಮೂರು ಅಂಶಗಳುಳ್ಳದ್ದು. ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕಾರಣನಾಗಿರುವ ಶಿವನೇ 'ಪತಿ'. ಈ ಲೋಕದಲ್ಲಿ ಸುಖ ದುಃಖಗಳನ್ನನುಭವಿಸುತ್ತಾ ಜನನ ಮರಣಗಳಿಗೆ ತುತ್ತಾಗಿರುವ ಜೀವನೇ 'ಪಶು'. ಜೀವಕೋಟಿಯನ್ನು ಸಂಕುಚಿತವನ್ನಾಗಿಟ್ಟಿರುವ ಮಾಯಾಶಕ್ತಿ ವಿಲಾಸವೇ 'ಪಾಶ'. ಜೀವನು ಶಿವನಿಂದ ತಾನು ಬೇರೆಯಲ್ಲವೆಂದು ತಿಳಿದಾಗ ಪಾಶವು ಮಾಯವಾಗುವುದು. ಈ ವಿಷಯಗಳನ್ನು ವಿವರಿಸುವುದೇ ತ್ರಿಕಶಾಸ್ತ್ರ. | ೨೭, ೨೮ |
| ತುರ್ಯಾಸಂವಿತ್ ಶಕ್ತಿ | ವಿಷಯಜ್ಞಾನ ಮತ್ತು ಸಂಸ್ಕಾರಗಳು ಚಿತ್ತಿನಲ್ಲಿ ವಿಶ್ರಾಂತಿಯನ್ನು ಪಡೆಯುತ್ತವೆ. ಹೊರಹೊಮ್ಮುತ್ತವೆ ಮತ್ತು ಈ ರೀತಿ ಸೃಷ್ಟಿ, ಸ್ಥಿತಿ, ಸಂಹಾರ ರೂಪವಾದ ವ್ಯಾಪಾರವನ್ನು ನಡೆಸುವ ಶಕ್ತಿಗೆ ಹೆಸರು. | ೨೮ |
| ತುರೀಯಾವಸ್ಥೆ | ಜೀವನ ನಾಲ್ಕನೆಯ ಅವಸ್ಥಾವಿಶೇಷ. ಆತ್ಮವು ತುರೀಯಾವಸ್ಥೆಯಲ್ಲಿ ಚಿನ್ಮಾತ್ರಾನುಭವವುಳ್ಳದ್ದಾಗಿರುತ್ತದೆ. | ೫೦, ೫೧ |
| ದಿಕ್ಚರೀ | 'ವಾಮೇಶ್ವರೀ' ನೋಡಿ | |

| | | |
|---|---|---|
| ನಿಮಿಷತಿ | ವಿಶ್ವವು ತನ್ನ ರೂಪವನ್ನು ಮರೆಮಾಚಿಕೊಂಡು ಪ್ರಳಯವಾಗುವುದು. | ೨೭ |
| ನಿಯತಿ | ಪಂಚಕಂಚುಕಗಳಲ್ಲೊಂದು. 'ಸಂಕುಚಿತ ವ್ಯಾಪಕಶಕ್ತಿಃ' ಯಾವ್ಯಾವುದು ಯಾವ್ಯಾವ ರೀತಿಯಲ್ಲಿ ಆಗಬೇಕೋ ಹಾಗೆ ಆಗುವ ನಿಯಮ. | ೨೫, ೩೧ |
| ನೀಲ | ವಿಶ್ವವು ನೀಲ ಸುಖ ದೇಹ ಪ್ರಾಣ ಈ ರೀತಿ ನಾಲ್ಕು ವಿಧವಾಗಿದೆ. ನೀಲ ಅಂದರೆ ಬಹಿರಿಂದ್ರಿಯಗಳಿಂದ ತಿಳಿಯತಕ್ಕ ಅಂಶಗಳು. ಆಕಾರವಿರುವ ಪದಾರ್ಥಗಳು. | ೪, ೧೫ |
| ಪಂಚಕೃತ್ಯಗಳು | ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹ ಈ ಐದು ಕೃತ್ಯಗಳನ್ನು ಶಿವನು ಯಾವಾಗಲೂ ಮಾಡುತ್ತಿರುತ್ತಾನೆ. | ೧, ೫೨ |
| ಪತಿದಶಾ | ಪರಪ್ರಮಾತೃದಶಾ, ಶುದ್ಧಾಧ್ವಪ್ರಮಾತೃತ್ವ, ಮುಕ್ತಿ. | ೩೯, ೮೦ |
| ಪರಾವಾಕ್ ಪರಾಶಕ್ತಿ | ಈ ಶಕ್ತಿಯಿಂದ ಪರಮಶಿವನು ಶಿವನ ಮೊದಲು ಪೃಥ್ವೀವರೆಗೂ ಇರುವ ವಿಶ್ವವನ್ನು ವಿಕಲ್ಪವಿಲ್ಲದ ಚಿನ್ಮಾತ್ರರೂಪದಿಂದ ಪ್ರಕಾಶಪಡಿಸುತ್ತಾನೆ, ಭರಿಸುತ್ತಾನೆ, ತಿಳಿಯುತ್ತಾನೆ. ಇದು ಪರಮಶಿವನ ಸ್ವಾತಂತ್ರ್ಯಶಕ್ತಿ. | ೩೮, ೩೯, ೪೪ |
| ಪಶು | ಮಲಗಳು ಮತ್ತು ಅವಿದ್ಯೆಯೇ ಮೊದಲಾದ ಪಾಶಗಳಿಂದ ಬದ್ಧನಾದ ಜೀವನು. | ೩೯, ೪೧ |
| ಪಶ್ಯಂತೀ | ಪರಾಶಕ್ತಿಯ ಎರಡನೆಯ ವಿಕಾಸ. ನಿಸ್ತರಂಗವಾಗಿದ್ದ ಪರಾಶಕ್ತಿಯು ವಿಷಯಗ್ರಹಣೋನ್ಮುಖವಾಗಿ ದ್ರಷ್ಟೃತ್ವ ಪಡೆದಿರುವಿಕೆ. ಇಲ್ಲಿ ವಾಚ್ಯವಾಚಕ ಭಾವಗಳು ಕ್ರಮವಾಗಿ ರೂಪುಗೊಳ್ಳದಿರುವುದರಿಂದ ಅಸ್ಫುಟವಾಗಿವೆ. | ೩೮ |

**ಪ್ರಕಾಶ** — ಶಕ್ತಿಪ್ರಸಾರ, ಚಿತ್ತು ಹೊರಗೆ ಭೇದವನ್ನಂಗೀಕರಿಸಿ ಪದಾರ್ಥರೂಪವಾಗಿ ವ್ಯಕ್ತವಾಗುವುದು ಪ್ರಕಾಶ. ಅಂತರನುಸಂಧಾನರೂಪವಾದ ಸ್ವಸ್ವರೂಪ ಪರಾಮರ್ಶವೇ ವಿಮರ್ಶ. ಇವೆರಡಂಶಗಳ ಮಯವಾಗಿರುವುದು ಪ್ರಕಾಶ ವಿಮರ್ಶ ಮಯ. ೪೩

**ಪ್ರತ್ಯಭಿಜ್ಞಾ** — ತಾನು ಮರೆತುಹೋಗಿದ್ದ ನಿಜಸ್ವರೂಪವನ್ನು ತಿಳಿಯುವುದು. "ಗ್ರಹಣಸ್ಮರಣಯೋಃ ಐಕ್ಯಂ ಪ್ರತ್ಯಭಿಜ್ಞಾ" ಈಗಿನ ತಿಳಿವಳಿಕೆ, ಹಿಂದಿನ ನೆನೆಪು ಇವುಗಳಿಂದ ಅವನೇ ಇವನು ಎಂಬ ಜ್ಞಾನವುಂಟಾಗುವುದೇ ಪ್ರತ್ಯಭಿಜ್ಞಾ. ೧, ೬೩, ೨೭

**ಪ್ರತ್ಯಾಹಾರ** — ಬಾಹ್ಯೇಂದ್ರಿಯಗಳ ಪ್ರವೃತ್ತಿಯನ್ನು ವಿಷಯಗಳಿಂದ ಹಿಂದಿರುಗಿಸುವಿಕೆ. ೭೩, ೭೪

**ಪ್ರಮಾ** — ಸ್ವಚ್ಛವಾದ ತಿಳಿವಳಿಕೆ. ಇದು ಇತರ ಪದಾರ್ಥಗಳ ಪರಿಮಿತಿಯನ್ನು ತೋರಿಸುತ್ತದೆ; ತನ್ನ ಸ್ವರೂಪವನ್ನು ತೋರ್ಪಡಿಸಿಕೊಳ್ಳುತ್ತದೆ. ೮

**ಪ್ರಮಾಣ** — ತಿಳಿಯತಕ್ಕ ಸಾಧನ. ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ ಮೊದಲಾದವುಗಳು ಪ್ರಮಾಣಗಳು. ಇವು ಚಿತ್ಸ್ವರೂಪವನ್ನು ತೋರ್ಪಡಿಸಲಾರವು. ಭಾವನಾ-ಸ್ವಾತ್ಮೈಕ್ಯಾನುಭವ ಸಾಕ್ಷಾತ್ಕಾರ-ಪರಮಾತ್ಮಾವೇಶ ಇವೆರಡರಿಂದ ಚಿತ್ಸ್ವರೂಪ ಗೋಚರ. ೫೮

**ಪ್ರಮಾಣೋಪಾರೋಹಕ್ರಮ** — ಪ್ರಮಾಣಗಳಿಂದ ಹೊರಗಿನ ಪದಾರ್ಥಸ್ವರೂಪವನ್ನು ತಿಳಿದು ಒಳಗಿನ ಅನುಭವಗಳನ್ನು ಮನನಮಾಡುವುದರಿಂದ ಜ್ಞಾನವಿಕಾಸವನ್ನು ಪಡೆಯುವುದು. ಜೀವನು ಮೊದಲು ಪ್ರಮಾಣಗಳಿಂದ ಆರಂಭಿಸಿ ಅತೀಂದ್ರಿಯ ಸಾಧನೆಗಳ ಸಹಾಯದಿಂದ ಪೂರ್ಣವಿಕಾಸವನ್ನು ಹೊಂದುತ್ತಾನೆ. ಇದಕ್ಕೆ ಪರಪ್ರಮಾತ್ರಾವೇಶವೆಂದೂ ಹೆಸರು. ೪, ೫

| | | |
|---|---|---|
| ಪ್ರಮಾತೃ | ಸ್ವಯಂಪ್ರಕಾಶವಾದ ತಿಳಿಯುವ ಶಕ್ತಿ ಇರುವವನು ಪ್ರಮಾತೃ. | ೭, ೮, ೯, ೫೪, ೫೫ |
| ಪ್ರಮೇಯ | ತಿಳಿಯತಕ್ಕ ವಸ್ತು, ವಿಷಯ, ಅನುಭವಿಸುವುದಕ್ಕೆ ಯೋಗ್ಯವಾದ ಪದಾರ್ಥ | ೧೪, ೫೮ |
| ಪ್ರಳಯಾಕಲ | ಮಾಯಾತತ್ವದಲ್ಲಿರತಕ್ಕ ಶೂನ್ಯ ಪ್ರಮಾತೃವರ್ಗ. ಆಣವ ಮತ್ತು ಮಾಯಿಾಯಮಲದಿಂದ ಆವೃತನಾದವನು. | ೧೦ |
| ಪುರ್ಯಷ್ಟಕ | ಪೃಥ್ವಿಯೇ ಮೊದಲಾದ ಐದು ಭೂತಗಳ ಪೂರ್ವರೂಪವಾದ ಐದು ತನ್ಮಾತ್ರೆಗಳು ಮತ್ತು ಮನಸ್ಸು ಬುದ್ಧಿ ಅಹಂಕಾರ ಈ ಎಂಟೂ ಸೇರಿರುವ ಗ್ರಂಥಿ - ಸೂಕ್ಷ್ಮ ಶರೀರ | ೨೨, ೨೫, ೫೧ |
| ಪೂರ್ಣಾಹಂತಾ | ಚಿದ್ವಿಕಾಸಸ್ಥಿತಿ - ಚಿದನುಭವ | ೨೪, ೭೧ |
| ಪೂರ್ಣಾಹಂ ವಿಮರ್ಶಾ | ಸಪ್ತಪ್ರಮಾತೃಗಳ ಅಂತಸ್ತುಗಳನ್ನು ಮೆಟ್ಟಿಲು ಮೆಟ್ಟಿಲಾಗಿ ಪಡೆಯುತ್ತಾ ಸ್ವರೂಪವಿಕಾಸವನ್ನು ಹೊಂದುವುದು. | ೧೧, ೨೪, ೪೩, ೫೩, ೭೨ |
| ಬಲ | ಚಿದ್ವಿಕಾಸ - ಸಹಜಸ್ವರೂಪ ಪ್ರಕಾಶಪಡಿಸುವಿಕೆ. | ೫೬, ೫೭ |
| ಬೈಂದವೀಕಲಾ | ಬಿಂದುವಿನ ಅಂಶ, ಸ್ವಾತಂತ್ರ್ಯಶಕ್ತಿ, ಶುದ್ಧ ಜ್ಞಾನ. | ೬ |
| ಬ್ರಹ್ಮನಾಡಿ | ಸುಷಮ್ನಾನಾಡಿ - ಮಧ್ಯನಾಡಿ | ೫೮, ೫೯ |
| ಭೂಚರೀ | 'ವಾಮೇಶ್ವರೀ' ನೋಡಿ. | |
| ಭೈರವೀಮುದ್ರಾ | ಉಪಾಸನಾಕ್ರಮದಲ್ಲಿ ಇದೂ ಒಂದು. | ೪೯, ೬೫ |
| ಮಧ್ಯನಾಡಿ | ಬ್ರಹ್ಮನಾಡಿ, ಮಧ್ಯಸಂವಿತ್, ಸುಷುಮ್ನಾ; ಎಲ್ಲಾ ಪ್ರೇರಣೆಗಳೂ ವೃತ್ತಿಗಳೂ ಇಲ್ಲಿಯೇ ಹುಟ್ಟುತ್ತವೆ. ಬ್ರಹ್ಮನಾಡಿ ವಿಕಾಸದಿಂದ ಚಿದಾನಂದಲಾಭ. | ೫೯, ೬೦ |
| ಮಧ್ಯಮಾ | ವಾಗ್ವಿಶೇಷ. ವಾಕ್ಕಿನ ನಾಲ್ಕು ದಶೆಗಳಲ್ಲಿ ಮೂರನೆಯ ಸ್ಥಿತಿ. ಇಲ್ಲಿ ಗ್ರಾಹ್ಯ ಗ್ರಾಹಕ [illegible] | ೪೪ |

ಮಂತ್ರ — ಅಕ್ಷರರಾಶಿ - ಅಕಾರಾದಿ ಕ್ಷಕಾರದವರೆಗಿರುವ ಅಕ್ಷರಗಳೆಲ್ಲವೂ ಮಂತ್ರಗಳೇ.
'ಮಂತ್ರಾ ವರ್ಣಾತ್ಮಕಾಃ ಸರ್ವೇ
ಸರ್ವೇ ವರ್ಣಾಃ ಶಿವಾತ್ಮಕಾಃ'
ಅಕ್ಷರಗಳು ಚಿತ್ಸಂಸರ್ಗದಿಂದ ಮಂತ್ರತ್ವವನ್ನು ಹೊಂದುತ್ತವೆ. ಪ್ರತಿಯೊಂದು ಅಕ್ಷರವೂ ಒಂದೊಂದು ದೇವತಾಶಕ್ತಿ ವಿಶಿಷ್ಟವಾಗಿರುತ್ತದೆ. ವಿಕಲ್ಪಗಳನ್ನೂ ಅವಿಕಲ್ಪಗಳನ್ನೂ ತೋರಿಸುವಂಥಾದ್ದು. ವಿಕಲ್ಪಗಳನ್ನು ಅವಿಕಲ್ಪಗಳನ್ನು ನಿಶ್ಚಿತವಾಗಿ ತಿಳಿದು ಮಾತೃಕಾನುಸಂಧಾನ ಮಾಡುವವನಿಗೆ ಮಹೇಶತಾ ಪ್ರಾಪ್ತಿಯಾಗುತ್ತದೆ.
'ಮಂತಾರಂ ತ್ರಾಯತೆ ಇತಿ ಮಂತ್ರಃ'
ಯಾರು ಇದನ್ನು ಮನನಮಾಡುತ್ತಾರೋ ಅವನನ್ನು ಕಾಪಾಡುತ್ತದೆ. 'ಮನನತ್ರಾಣ ಧರ್ಮಾಣೋ ಮಂತ್ರಾಃ' ಎಂದು ಆಗಮಗಳು ಹೇಳುತ್ತವೆ. ೩೮, ೪೪

ಮಂತ್ರಮಹೇಶ್ವರಾಃ — ಸದಾಶಿವಸ್ಥಿತಿಯಲ್ಲಿ ಗ್ರಾಹ್ಯ ಗ್ರಾಹಕ ಭಾವಗಳು ಸ್ಪಷ್ಟವಾಗಿಲ್ಲದೆ ಇರುವ ಪ್ರಮಾತೃವರ್ಗ. ೬

ಮಂತ್ರಾಃ — ವಿದ್ಯಾತತ್ವದಲ್ಲಿರುವ ಪ್ರಮಾತೃವರ್ಗ ೬

ಮಂತ್ರೇಶ್ವರಾಃ — ಈಶ್ವರ ತತ್ವದಲ್ಲಿರುವ ಪ್ರಮಾತೃವರ್ಗ ೬

ಮಾತೃಕಾಶಕ್ತಿ ಸಂಬೋಧ — ಎಲ್ಲಾ ಅಕ್ಷರಗಳೂ ಆ ಪರಾಶಕ್ತಿಯ ವಿಕಾಸಗಳೆಂದು ತಿಳಿದು ನಾವು ಉಚ್ಚರಿಸುವ ಪ್ರತಿಯೊಂದು ಅಕ್ಷರವೂ ಆ ಪರಾಶಕ್ತಿಯ ಉಪಾಸನೆಯೆಂಬ ಭಾವನೆ ಇದ್ದರೆ ಅಂತಹವನಿಗೆ ಆಗುವ ಅನುಭವ. ೪೫

ಮಾಯಾ — 'ದುರ್ಘಟ ಸಂಪಾದನ ಸಮರ್ಥಶಕ್ತಿ ವಿಶೇಷಃ'
ವಿಶ್ವವೆಲ್ಲಾ ಯಾವುದರಿಂದ ಹುಟ್ಟುತ್ತದೆಯೋ ಯಾವುದರಲ್ಲಿ ಉಪಸಂಹೃತವಾಗುತ್ತದೆಯೋ ಅಂತಹ ಶಕ್ತಿಗೆ ಮಾಯಾ ಎಂದು ಹೆಸರು. ೧೬

| | | |
|---|---|---|
| ಮಾಯಾಪ್ರಮಾತಾ | 'ಸಕಲ' ಸ್ಥಿತಿಯಲ್ಲಿರುವ ಬದ್ಧ ಜೀವ. ಮಿತ ಪ್ರಮಾತೃ. ಸತ್ವರಜಸ್ತಮೋ ವೃತ್ತಿಗಳನ್ನನುಭವಿಸುವವನು. | ೧೯, ೨೧, ೨೪, ೩೧, ೫೩ |
| ಮಂತ್ರವೀರ್ಯ | ಮಂತ್ರದ ಅನುಸಂಧಾನದಿಂದುಂಟಾಗುವ ಜ್ಞಾನ ವಿಕಾಸ, | ೪೪, ೭೨ |
| ಮಾಧ್ಯಮಿಕರು | ಬೌದ್ಧರಲ್ಲಿ ಎಲ್ಲವೂ ಶೂನ್ಯವೆಂದು ಹೇಳುವ ಪಂಗಡದವರು. | ೨೬ |
| ಮಾಯಿಾಯಮಲಾ | ಇಚ್ಛಾಶಕ್ತಿ ಸಂಕೋಚ, ಅಭಿನ್ನವಾದ ಚಿತ್ತು ಭಿನ್ನವಾದ ತಿಳಿವಳಿಕೆಯನ್ನು ಸ್ವೀಕರಿಸುವಿಕೆ. 'ಭಿನ್ನವೇದ್ಯಪ್ರಥಾ' ಭೇದ ದೃಷ್ಟಿ, ಭೇದಭಾವಗಳು. ಪಂಚಕಂಚುಕಗಳಿಂದ ಕೂಡಿ ಶರೀರ ಮತ್ತು ಇಂದ್ರಿಯಗಳಿಗೆ ಅಧೀನವಾಗಿರುವುದಕ್ಕೆ ಕಾರಣವಾಗಿರುವುದು. | ೨೪, ೨೯, ೩೧ |
| ಮಾಹೈಶ್ವರ್ಯ | ಮಾಹೇಶತ್ವ, ಪಂಚವಿಧಕೃತ್ಯಗಳ ನಿರ್ವಹಣೆಯನ್ನು ದೃಢನಂಬಿಕೆಯಿಂದ ಪರಿಶೀಲನೆಮಾಡುವವರಿಗೆ ಪ್ರಾಪ್ತಿಯಾಗುತ್ತದೆ. ಅವರು ವಿಶ್ವವನ್ನು ಸ್ವರೂಪವಿಕಾಸವೆಂದು ತಿಳಿಯುತ್ತಾರೆ. | ೨೮, ೩೩, ೩೯ |
| ಮಿತಪ್ರಮಾತೃ | ಮೂರು ಮಲಗಳಿಂದ ಕೂಡಿರುವವನು - ಜೀವಾತ್ಮ. | ೨೪, ೪೩ |
| ಮುಕ್ತಿ | 'ವಿಶ್ವೋತ್ತೀರ್ಣ ಪರಮಶಿವೀಭಾವೋವಾ' ವಿಶ್ವೋತ್ತೀರ್ಣನಾಗಿರುವ ಪರಮಶಿವನಪದವನ್ನು ಪಡೆಯುವಿಕೆ, ಮೋಕ್ಷ. | ೧೫, ೨೦, ೨೩, ೨೫ |
| ಮುದ್ರಾ | 'ದ್ರಾ' ಎಂದರೆ ಪಾಶಗಳನ್ನು ಓಡಿಸುವುದು. 'ಮುತ್' ಎಂದರೆ ಆನಂದವನ್ನು ಕೊಡುವುದು. ಪಾಶಗಳನ್ನು ಹೋಗಲಾಡಿಸಿ ಆನಂದರೂಪವಾದ ತುರೀಯಾವಸ್ಥೆಯಲ್ಲಿ ನಿಲ್ಲಿಸುವುದು ಮುದ್ರಾ. | ೭೨ |
| ರಾಗ | ಪಂಚಕಂಚುಕಗಳಲ್ಲೊಂದು. ಪೂರ್ಣತ್ವ ಸಂಕುಚಿತವಾಗಿರುವಿಕೆ. | ೨೩ |

ವಾಮೇಶ್ವರೀ — ಸ್ವಾತಂತ್ರ್ಯವುಳ್ಳ ಚಿಚ್ಛಕ್ತಿಯು ವಿಶ್ವವನ್ನು ಹೊರ ಹೊಮ್ಮಿಸುವಾಗ ಅನೇಕ ರೂಪಗಳನ್ನು ಪಡೆಯುತ್ತದೆ. ಇಂತಹ ಲೀಲೆಯನ್ನು ನಡೆಯಿಸುವ ವಿಚಿತ್ರಶಕ್ತಿಗೆ ವಾಮೇಶ್ವರೀ ಎಂದು ಹೆಸರು. ಈ ವಾಮೇಶ್ವರಿಯು ಖೇಚರೀ, ಗೋಚರೀ, ದಿಕ್ಚರೀ, ಭೂಚರೀ ಎಂಬ ರೂಪದಲ್ಲಿ ನಾನಾ ಮುಖವಾಗಿ ಸಂಸಾರಾವಸ್ಥೆಗಳನ್ನು ನಿರ್ವಹಿಸುತ್ತಾಳೆ. ಪಶುದಶೆಯಲ್ಲಿ ವಕ್ರವಾಗಿಯೂ ಪತಿದಶೆಯಲ್ಲಿ ಉತ್ತಾರಕವಾಗಿಯೂ ಪ್ರಸರಿಸುತ್ತಾಳೆ.

೩೯, ೪೦, ೪೨, ೪೬, ೪೭, ೪೮, ೬೫

## ವಾಮೇಶ್ವರೀ ಶಕ್ತಿವಿಲಾಸ

| ಪಶುದಶೆಯಲ್ಲಿ (ಮಾಯಾಪದದಲ್ಲಿ) | | ಪತಿದಶೆಯಲ್ಲಿ |
|---|---|---|
| (೧) ಕಲಾ ಮತ್ತು ಕಂಚುಕಗಳ ಕಾರ್ಯಶಕ್ತಿಯು ಸ್ವರೂಪ ಜ್ಞಾನ ಸಂಕೋಚವನ್ನುಂಟು ಮಾಡುವುದು. | ಖೇಚರೀಚಕ್ರ | ಚಿದ್ಗಗನದಲ್ಲಿ ಸಂಚರಿಸುವುದು. ದೇಶ ಕಾಲ ಆಕಾರ ರಹಿತವಾದ ನಿರ್ವಿಕಲ್ಪವಾದ ಚಿದನುಭವವನ್ನುಂಟು ಮಾಡುವುದು. |
| (೨) ಅಂತಃಕರಣದ ಮೂಲಕ ವಿಕಲ್ಪಗಳನ್ನು ತಂದುಕೊಡುವುದು. ಭಿನ್ನಭಾವ, ಗರ್ವ ಮತ್ತು ಭೇದ ಜ್ಞಾನದಲ್ಲಿ ಅಭಿಮಾನವನ್ನು ಹುಟ್ಟಿಸುವುದು. | ಗೋಚರೀಚಕ್ರ | ಅಭೇದ ನಿಶ್ಚಯರೂಪವಾಗಿ ಐಕ್ಯತೆಯನ್ನುಂಟುಮಾಡುವುದು |
| (೩) ಬಾಹ್ಯೇಂದ್ರಿಯಗಳ ಮೂಲಕ ಭೇದ ದೃಷ್ಟಿಯನ್ನುಂಟುಮಾಡುವುದು. | ದಿಕ್ಚರೀಚಕ್ರ | ಅಭೇದಾಲೋಚನಾತ್ಮಕದಿಂದ ಐಕ್ಯ ದೃಷ್ಟಿಯನ್ನು ಹುಟ್ಟಿಸುವುದು. |

| | | |
|---|---|---|
| (೪) | ಬಾಹ್ಯಪದಾರ್ಥಗಳು ಅಥವಾ ಭೂಚರೀಚಕ್ರ ಪ್ರಮೇಯಗಳು ಭಿನ್ನಭಿನ್ನವಾಗಿ ತಿಳಿಯಲ್ಪಡುವುವು. | ವಿಶ್ವವೆಲ್ಲಾ ಅಭಿನ್ನವಾಗಿ ತನ್ನ ಶರೀರದಂತೆ ಸ್ಫುರಿಸುವುದು. |

| | | |
|---|---|---|
| ವಾಹಚ್ಛೇದ | ಜೀವನಕ್ಕೆ ಆಧಾರವಾಗಿರುವ ಪ್ರಾಣಾಪಾನಗಳನ್ನು ನಿಲ್ಲಿಸುವಿಕೆ. | ೬೭, ೭೩ |
| ವಿಶ್ವ | ನೀಲ, ಸುಖ, ದೇಹ, ಪ್ರಾಣಾದಿ ಸ್ವರೂಪವುಳ್ಳದ್ದಾಗಿಯೂ ಪ್ರಮಾತೃ ಪ್ರಮಾಣ ಪ್ರಮೇಯ ರೂಪವಾಗಿ ವ್ಯವಹಾರಕ್ಕೆ ಯೋಗ್ಯವಾಗಿಯೂ 'ಸದಾಶಿವ'ನಿಂದ 'ಭೂಮಿ'ವರಿಗಿರುವ ತತ್ತ್ವಗಳ ರೂಪವಾಗಿಯೂ ಇರುವ ಪ್ರಪಂಚ. | ೪, ೯ |
| ವಿಜ್ಞಾನಾಕಲಾ | ಸಪ್ತಪ್ರಮಾತೃಗಳಲ್ಲಿ ಒಬ್ಬ- ಚಿನ್ಮಾತ್ರವನ್ನು ಅನುಭವಿಸುತ್ತಿರುತ್ತಾನೆ. ಸಹಜಾವಸ್ಥೆ ಅನುಭವಿಸುವವರೆಗೂ ವಿಜ್ಞಾನಾಕಲತ್ವವಿರುತ್ತದೆ. | ೧೦, ೧೭ |
| ಶಕ್ತಿ ತತ್ತ್ವ | ಮೂವತ್ತಾರು ತತ್ತ್ವಗಳಲ್ಲಿ ಎರಡನೆಯದು. 'ಚಿದೇವ ಭಗವತೀ ತತ್ತದನಂತ ಜಗದಾತ್ಮನಾ ಸ್ಫುರತಿ'- ಈ ರೂಪದಲ್ಲಿ ಶಕ್ತಿಯೆಂದು ಸಂಬೋಧಿತವಾಗುತ್ತದೆ. ಇದು ಪರಮಶಿವನಿಂದ ಬೇರೆಯಲ್ಲ. ಇದು ನಿಸ್ತರಂಗ ಮಹೋದಧಿಯಾದ ಶಿವನ ಮೊದಲನೆಯ ಸ್ಫೋಟ, ಈಷಚ್ಚಲನ. ಈಸ್ಫುರಣ ಚಲನವೇ ಶಕ್ತಿಯಾಯಿತು. ಈ ಮೂಲಕವೇ ಪ್ರಪಂಚ ಸೃಷ್ಟಿ. | ೮ |
| ವಿಲಾಪನ | ಅನುಗ್ರಹ | ೩೭ |
| ವಿಮರ್ಶನ | ಬಾಹ್ಯಜ್ಞಾನ ಅಂತರ್ಮುಖವಾಗಿ ಮಾಡುವಿಕೆ. | ೩೭ |
| ಶಕ್ತಿಪಾತ | ಶಿವನ ಅನುಗ್ರಹ. ಶಕ್ತ್ಯಾವಿಷ್ಕರಣದಿಂದ ಶಕ್ತಿಪಾತವುಂಟಾಗುತ್ತದೆ. | ೨೮ |
| ಶಕ್ತಿವಿಕಾಸ | ಅಂತರ್ನಿಗೂಢವಾಗಿರುವ ಶಕ್ತಿಗಳನ್ನು ಭೈರವಿಯೇ ಮೊದಲಾದ ಮುದ್ರೆಗಳಿಂದ ಅಕ್ರಮವಾಗಿ ಹೊರಗೆ ಪ್ರಸರಿಸುವುದು. 'ಶಕ್ತಿ ವಿಕಾಸೆ ಶಿವಃ' | ೩೧ |

| | | |
|---|---|---|
| ಶಕ್ತಿಸಂಕೋಚ | ಇಂದ್ರಿಯಗಳ ದ್ವಾರಗಳಿಂದ ಪ್ರಸರಿಸುತ್ತಿರುವ ಶಕ್ತಿಗಳನ್ನು ಆಮೆಯು ತನ್ನ ತಲೆ ಕೈ ಕಾಲುಗಳನ್ನು ಒಳಗೆ ಎಳೆದುಕೊಳ್ಳುವಂತೆ ತನ್ನ ಹೃತ್ಪ್ರದೇಶದಲ್ಲಿ ಸೇರಿಸುವುದು. | ೩೧, ೬೪, ೬೭ |
| ಶಿವಭಟ್ಟಾರಕ | ಮಂತ್ರಮಹೇಶ್ವರನಿಗಿಂತ ಉನ್ನತ ಸ್ಥಾನದಲ್ಲಿ ಸ್ವಪ್ರಕಾಶ ಶರೀರಿಯಾಗಿರತಕ್ಕವನು. | ೧೨, ೨೪, ೪೨ |
| ಶಾಕ್ತೋಪಾಯ | ವಿಕಲ್ಪಸಂಸ್ಕಾರಗಳೇ ಮೊದಲಾದವುಗಳಿಂದ ಶಿವ ಸಮಾವೇಶವನ್ನು ಪಡೆಯುವ ಉಪಾಯ. | ಉಪೋದ್ಘಾತ |
| ಶಾಂಭವೋಪಾಯ | ಚಿತ್ಸ್ವರೂಪದಲ್ಲಿ ಅಭಿನ್ನವಾಗಿರುವ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳಲ್ಲಿ ಇಚ್ಛಾಶಕ್ತಿಯನ್ನು ಪ್ರಧಾನವಾಗಿಟ್ಟುಕೊಂಡು ವಿಕಾಸವನ್ನು ಪಡೆಯುವುದರಿಂದ ಉಂಟಾಗುವ ಶಿವ ಸಮಾವೇಶ. | ಉಪೋದ್ಘಾತ |
| ಶುದ್ಧಾಧ್ವ | ಶಿವನಿಂದ ವಿದ್ಯಾತತ್ತ್ವದವರೆಗಿರುವ ತತ್ತ್ವ ಪಂಚಕ. ಇಲ್ಲಿ ಗ್ರಾಹ್ಯ ಗ್ರಾಹಕ ಭಾವಗಳು ವಿಶದವಾಗಿಲ್ಲ. ಇಲ್ಲಿ ಕೇವಲ ಆಣವಮಲಕ್ಕೆ ಮಾತ್ರ ಅವಕಾಶ. | ಉಪೋದ್ಘಾತ |
| ಶೂನ್ಯ | ಜೋಲಾಡುವ ವಿಷಯಗಳಿಲ್ಲದೆಯೂ, ಮನೋಭಾವಗಳಿಲ್ಲದೆಯೂ, ಹಿಂದಿನ ಸಂಸ್ಕಾರಗಳಿಲ್ಲದೆಯೂ ಇರುವ ಚಿತ್ತು. ಆದರೆ ಸತ್ತ್ವವುಳ್ಳದ್ದಾಗಿ ಆಕಾಶರೂಪವಾಗಿ ನಿರ್ಮಲವಾಗಿರುತ್ತದೆ. | ೧೨, ೨೨, ೨೫ |
| ಶೂನ್ಯಪ್ರಮಾತೃತ್ವ | ಜೀವನು ಶರೀರವನ್ನು ಬಿಟ್ಟು ಹೊರಟಮೇಲೆ ನಾನು ಎಂಬ ತಿಳಿವಳಿಕೆ ಮಾತ್ರ ಇರುವ ಸ್ಥಿತಿ. ಸುಖ ದುಃಖಗಳನ್ನನುಭವಿಸುವುದಕ್ಕಾಶ್ರಯವಾದ ಶರೀರವಿಲ್ಲದಿರುವ ಸ್ಥಿತಿ. | ೧೦ |
| ಶೂನ್ಯಭೂಮಿ | ಪ್ರಳಯಾಕಲಾವಸ್ಥೆ. ಶರೀರವಿಲ್ಲದಿರುವ ಸ್ಥಿತಿ. ವೃತ್ತಿಗಳಿಲ್ಲದಿರುವ ಸ್ಥಿತಿ. ವಿಷಯಗಳ ಅವಲಂಬನವಿಲ್ಲದ ಭಾವಜ್ಞಾನವಿಲ್ಲದ ಹಿಂದಿನ ಸಂಸ್ಕಾರಗಳ ಒತ್ತಡವಿಲ್ಲದಿರುವ ದಶೆ. | ೧೯, ೨೦ |
| ಸಂಸ್ಕಾರ | ಕರ್ಮದಿಂದುಂಟಾಗುವ ಅನುಶಯ | ೧೯, ೨೧ |
| ಸ್ಪಂದ | ಉನ್ಮೇಷ, ಮೊದಲನೆಯ ಚಲನ. ನಿಸ್ತರಂಗವಾಗಿರುವುದು ಚಂಚಲವಾಗುವಿಕೆ. ಎಲ್ಲಕ್ಕೂ ಮೂಲವಾಗಿರುವುದು ಚಿತ್ ಸ್ಪಂದ. ಪ್ರತಿ | |

| | | |
|---|---|---|
| | ಯೊಂದು ಪದಾರ್ಥವನ್ನೂ ವ್ಯಕ್ತಿಯನ್ನೂ ಸ್ಪಂದ ದೃಷ್ಟಿಯಿಂದ ಅರಿಯಬಹುದಾದುದರಿಂದ ಐಕ್ಯ ಮತ್ತು ಭಿನ್ನತೆಯ ಪರಿಣಾಮಗಳು ಚೆನ್ನಾಗಿ ಗೊತ್ತಾಗುತ್ತವೆ. ಶಕ್ತಿ ಸಂಚಾರವೆಲ್ಲಾ ಸ್ಪಂದ ದಿಂದಲೇ. | ೬೩ |
| ಸ್ವಾತಂತ್ರ್ಯಶಕ್ತಿ | ವಿಮರ್ಶಶಕ್ತಿ | ೮ |
| ಸಂವಿತ್‌ಶಕ್ತಿ | ಪ್ರಕಾಶವೇ ಪರಮಾರ್ಥವಾಗಿರುವ ಚಿತ್ತು. ಪರಾ ಸಂವಿತ್. ಪ್ರಮೇಯಗಳನ್ನು ಬಿಟ್ಟು ತನ್ನಷ್ಟಕ್ಕೆ ತಾನೇ ಆಕಾಶರೂಪವಾಗಿ ನಿರ್ಮಲವಾಗಿ ತೋರುವುದು. | ೫೯, ೬೦ |
| ಸಂವಿದ್ದೇವತಾಚಕ್ರ | "ಖೇಚರ್ಯಾದಿ ದೇವೀ ಚಕ್ರಂ ಅಂತರ್ಬಹಿ ಷ್ಕರಣ ಮರೀಚಿಪುಂಜೋವಾ" ಈ ಪ್ರಪಂಚದಲ್ಲಿರುವ ಎಲ್ಲಾ ಪದಾರ್ಥಗಳೂ ಒಂದೇ ಶಕ್ತಿಯಿಂದ ಬೆಳಗಿರುವುದರಿಂದ ಮೂಲ ತತ್ವವು ಒಂದೇ ಆಗಿರುತ್ತದೆ. ಯೋಗಿಯು ತನ್ನ ಅಂತಃಕರಣ ಬಹಿಷ್ಕರಣಗಳನ್ನು ಈ ಮೂಲತತ್ವ ವಾದ ಚಿಚ್ಛಕ್ತಿಯ ಕಿರಣ ಸಮೂಹವೆಂದು ತಿಳಿ ಯುವುದರಿಂದ ಸಹಜಸಂವಿತ್ತಿದೇವತಾಚಕ್ರ ರೂಪವಾದ ಈಶ್ವರತ್ವವನ್ನು ಪಡೆಯುತ್ತಾನೆ. | ೭೨ |
| ಸಂಸಾರ | ಜನನ ಮರಣದಿಂದ ಕೂಡಿರುವ ಪ್ರವಾಹ | ೨೯, ೩೦, |
| ಸಂಹಾರ | ಎಲ್ಲಿ ಸೃಷ್ಟಿಯಾಯಿತೋ ಅಲ್ಲಿಗೇ ಹೋಗಿ ಸೇರು ವುದು. | ೩೨, ೩೩ |
| ಸಕಲ | ಸಪ್ತಪ್ರಮಾತೃಗಳಲ್ಲಿ ಎಲ್ಲಕ್ಕಿಂತಲೂ ಕೆಳಗಿನ ಮೆಟ್ಟಲಿನ ಜೀವಾತ್ಮ. ಈ ಅವಸ್ಥೆಯಲ್ಲಿ 'ಸಕಲ'ನು ಮೂರು ಮಲಗಳಿಂದಲೂ ಕೂಡಿರು ವನು. | ೧೧, ೫೪ |
| ಸಮಾಧಿ | ಜೀವನು ಬದ್ಧನಾಗಿರುವಾಗಲೇ ನಿರ್ದಿಷ್ಟಕಾಲ ಪರಮಾತ್ಮ ಸಂಬಂಧವನ್ನು ಪಡೆಯುವಿಕೆ. | ೫೮, ೯೬ |
| ಸಮಾವೇಶ | ಚಿತ್ಸಮಾವೇಶ, ಜ್ಞಾನವಿಕಾಸ ಮತ್ತು ಪರಮ ಶಿವನ ಅನುಗ್ರಹದಿಂದುಂಟಾಗುವ ಅಲೌಕಿಕ ಸ್ಥಿತಿ - ಸಮಾಪತ್ತಿ. | ೧, ೫೭; ೫೮, ೬೯ |
| ಹಠಪಾಕ ಕ್ರಮ | ಕಷ್ಟ ಸಾಧನೆಯಿಂದ ವಿಕಲ್ಪಗಳನ್ನು ಹದಮಾಡು ವುದು. | ೩೭ |

## ಈ ಭಾವಾನುವಾದಕ್ಕೆ ಸಂಬಂಧಪಟ್ಟ ಕಾಶ್ಮೀರ ಶೈವ ಗ್ರಂಥಗಳು

ಕಾಶ್ಮೀರ ಸರ್ಕಾರದ ಪ್ರಾಚೀನ ಶೋಧನ ಶಾಖೆಯವರು ಪ್ರಕಟಿಸಿರುವ ಸಂಸ್ಕೃತ ಪುಸ್ತಕಗಳು :—

| | ಗ್ರಂಥಕರ್ತ |
|---|---|
| ಪ್ರತ್ಯಭಿಜ್ಞಾಹೃದಯ | ಕ್ಷೇಮರಾಜ |
| ಶಿವಸೂತ್ರ ವಿಮರ್ಶಿನಿ | ಕ್ಷೇಮರಾಜ |
| ವಿಜ್ಞಾನಭೈರವ | ಕ್ಷೇಮರಾಜ ಮತ್ತು ಶಿವೋಪಾಧ್ಯಾಯ |
| ಈಶ್ವರ ಪ್ರತ್ಯಭಿಜ್ಞಾ ವಿಮರ್ಶಿನಿ | ಅಭಿನವಗುಪ್ತ |
| ತಂತ್ರಸಾರ | ಅಭಿನವಗುಪ್ತ |
| ತಂತ್ರಾಲೋಕ I II III IV VIII | ಅಭಿನವಗುಪ್ತ |
| ಶಿವದೃಷ್ಟಿ | ಸೋಮಾನಂದ ದೇವ |
| ಸ್ಪಂದಕಾರಿಕಾ | ರಾಮಕಂಠಾಚಾರ್ಯ ವಿವೃತಿ |

**Kashmir Shaivism** (in English)
J. C. Chatterji, B.A., Vidyanidhi. Published by the research department, Kashmir State, Srinagar.

**Abhinavagupṭa** (in English)
An historical & philosophical study by Dr. Kanti Chandra Pandey, M.A., Ph.D.; Chowkamba Sanskrit series office, Banares City-8.

**The Secret of Recognition** (Pratyabhigna Hrdayam)
Sanskrit Text & English translation by Kurt F. Leidecker, (Publication of the Adyar Library, Madras.)

## ಗ್ರಂಥ ದೊರೆಯುವ ಸ್ಥಳ



ಶ್ರೀ. ಜೆ. ರುದ್ರಪ್ಪ,
ವಿಶ್ರಾಂತ ಜಿಲ್ಲಾ ನ್ಯಾಯಾಧೀಶರು,
ನಂ. 112, 4ನೇ ಕ್ರಾಸ್ ರೋಡ್,
ಗಾಂಧಿನಗರ, ಬೆಂಗಳೂರು-2

ವೀರಶೈವ ಸಾಹಿತ್ಯ ಭಾಂಡಾರ,
"ಕಲ್ಯಾಣ ಭವನ"
ಚಿಕ್ಕಪೇಟೆ, ಬೆಂಗಳೂರು-2

ಸತ್ಯಶೋಧನ ಪುಸ್ತಕ ಭಂಡಾರ,
ಕೋಟೆ, ಬೆಂಗಳೂರು ನಗರ.

ಶ್ರೀ. ಎಸ್. ಶಿವಕುಮಾರಸ್ವಾಮಿ,
ನಂ. 373, ನ್ಯೂ ಸಯ್ಯಾಜಿರಾವ್ ರೋಡ್, ಮೈಸೂರು.



ಮುದ್ರಿತರು: [illegible] ಪ್ರೆಸ್, ಗಾಂಧಿನಗರ, ಬೆಂಗಳೂರು-೨

